# ರಾಯಚೂರು ಜಿಲ್ಲೆಯ ತತ್ವಪದಕಾರರು ಮತ್ತು ಅವರ ಸಾಹಿತ್ಯ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ
ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕರು
ಸರ್ವಮಂಗಳ ಸಕ್ರಿ

ಮಾರ್ಗದರ್ಶಕರು
ಡಾ. ವೀರೇಶ ಬಡಿಗೇರ
ಪ್ರಾಧ್ಯಾಪಕರು, ಹಸ್ತಪ್ರತಿಶಾಸ್ತ್ರ ವಿಭಾಗ



ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೮

# ರಾಯಚೂರು ಜಿಲ್ಲೆಯ ತತ್ವಪದಕಾರರು ಮತ್ತು ಅವರ ಸಾಹಿತ್ಯ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ
ಸಾದರಪಡಿಸಿದ ಮಹಾಪ್ರಬಂಧ


ಸಂಶೋಧಕರು
ಸರ್ವಮಂಗಳ ಸಕ್ರಿ





ಮಾರ್ಗದರ್ಶಕರು
ಡಾ. ವೀರೇಶ ಬಡಿಗೇರ
ಪ್ರಾಧ್ಯಾಪಕರು, ಹಸ್ತಪ್ರತಿಶಾಸ್ತ್ರ ವಿಭಾಗ





ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೮

# ಸಂಶೋಧಕರ ಪ್ರಮಾಣ ಪತ್ರ

ರಾಯಚೂರು ಜಿಲ್ಲೆಯ ತತ್ವಪದಕಾರರು ಮತ್ತು ಅವರ ಸಾಹಿತ್ಯ ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ ಡಾ.ವೀರೇಶ ಬಡಿಗೇರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸರ್ವಮಂಗಳ ಸಕ್ರಿ
ಸಂಶೋಧಕಿ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : ೪-೨-೨೦೦೮
ಸ್ಥಳ : ವಿದ್ಯಾರಣ್ಯ

# ಮಾರ್ಗದರ್ಶಕರ ಪ್ರಮಾಣ ಪತ್ರ

ಸರ್ವಮಂಗಳ ಸಕ್ರಿ ಅವರು ರಾಯಚೂರು ಜಿಲ್ಲೆಯ ತತ್ವಪದಕಾರರು ಮತ್ತು ಅವರ ಸಾಹಿತ್ಯ ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಅವರ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ವೀರೇಶ ಬಡಿಗೇರ
ಮಾರ್ಗದರ್ಶಕರು ಮತ್ತು ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 08-09-08
ಸ್ಥಳ : ವಿದ್ಯಾರಣ್ಯ

## ಪರಿವಿಡಿ

# ಅಧ್ಯಾಯ ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ವಿಧಾನ

೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ವಿಧಾನ

## ೧.೧. ಅಧ್ಯಯನದ ಉದ್ದೇಶ

ಇತ್ತೀಚಿನ ದಿನಗಳಲ್ಲಿ ತತ್ವಪದ ಸಾಹಿತ್ಯವು ಹೆಚ್ಚು ಪ್ರಚಲಿತವಾಗುತ್ತಲಿದೆ. ಇದಕ್ಕೆ ಕಾರಣ ಅನೇಕ ಸಂಶೋಧಕರು ವಿಮರ್ಶಕರು ಈ ಸಾಹಿತ್ಯವನ್ನು ಬೇರೆ ಬೇರೆ ನೆಲೆಗಟ್ಟಿನಲ್ಲಿ ಪ್ರವೇಶಿಸುತ್ತಿರುವುದು. ಇಂಥ ವಿವೇಚನೆಯ ಸತ್ವಗಳನ್ನು ಸಂಶೋಧನಾತ್ಮಕವಾಗಿ ನಿರೂಪಿಸುವುದು ಮತ್ತು ವಿಶ್ಲೇಷಿಸಿಕೊಳ್ಳುವುದು ನನ್ನ ಈ ಅಧ್ಯಯನದ ಮುಖ್ಯ ಉದ್ದೇಶಗಳಲ್ಲೊಂದು.

ಹಳಗನ್ನಡ ಕವಿಗಳು ಪ್ರಾರಂಭಿಸಿದ ಮಾರ್ಗ ಮತ್ತು ದೇಸಿ ಎನ್ನುವ ವಿಂಗಡಣೆ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಸೋತಾಗ, ಹಾಡುಗಬ್ಬ ಸಾಹಿತ್ಯವು ಆ ಸ್ಥಾನವನ್ನು ಆಕ್ರಮಿಸಿಕೊಂಡಿತು. ಇಂಥ ಸಂದರ್ಭದಲ್ಲಿ ಮಧ್ಯಕಾಲೀನ ಕವಿಗಳು, ಕಾವ್ಯಕ್ಕಿಂತ ಹಾಡಲು ಅನುಕೂಲವಾಗುವಂಥ ಸಾಹಿತ್ಯವನ್ನು ರಚಿಸಿದರು ಎನ್ನುವುದು ಗಮನಿಸುವ ವಿಷಯ.

ನನ್ನ ಪ್ರಬಂಧಕ್ಕೆ ಸಂಬಂಧಪಟ್ಟಂತೆ ತತ್ವಪದ ಸಾಹಿತ್ಯವನ್ನು ಪಾರಂಪರಿಕ ಅಧ್ಯಯನ ಕ್ರಮಗಳು ಕಟ್ಟಿಕೊಟ್ಟ ಸಿದ್ಧ ಮಾದರಿಗಳನ್ನು ಮೀರಿ ಹೊಸ ರೀತಿಯ ಅಧ್ಯಯನಕ್ಕೆ ಅಳವಡಿಸುವ ಪ್ರಯತ್ನವಾಗಿದೆ. ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ತತ್ವಪದಗಳ ಮೂಲವನ್ನು ಸ್ವರವಚನಗಳಲ್ಲಿಯೇ ಹುಡುಕುತ್ತೇವೆ. ಶಿಷ್ಟೇತರ ಸಂಪ್ರದಾಯಗಳಾದ ಜನಪದರ ಮೌಖಿಕ ಸಂಸ್ಕೃತಿ ಹಾಗೂ ತೋಂಡಿ ಸಂಪ್ರದಾಯವು, ತತ್ವಪದ ಸಾಹಿತ್ಯದ ಮೂಲಕ್ಕೆ ಪ್ರೇರಕ ಎನ್ನುವುದು ಗಮನಾರ್ಹ ಸಂಗತಿ. ಇಂಥ ಹಾಡಿನ ಪರಂಪರೆಯೊಂದು ಖ್ಯಾತವಾಗುತ್ತಾ ಬಂದದ್ದು ಗಮನೀಯ. ಸಾಮಾನ್ಯ ಜನತೆಯಲ್ಲಿ ಭಜನೆ ಎಂಬ ತಲೆ ಬರಹದಲ್ಲಿ ಆರಾಧನಾ ಸ್ವರೂಪ ಪಡೆದು ಅದು ನೆನಪಿನ ಭಾಗವಾಗಿ ಖ್ಯಾತವಾಯಿತು. ತಮಗೆ ದೊರಕದ ಬ್ರಹ್ಮಜ್ಞಾನಕ್ಕಾಗಿ, ಕಾಣದ ದೈವತ್ವಕ್ಕಾಗಿ ಹಂಬಲಿಸಿ ಸೋತು ಅಸಹಾಯಕರಾದಾಗ ಬೇರೊಂದು ವ್ಯವಸ್ಥೆಗೆ ಹುಡುಕಾಡಿದರು. ಭಜನೆಯ ಸರಳತ್ವ ಅದಕ್ಕೆ ಸಹಾಯಕವಾಯಿತು. ಭಜನೆ ಹಾಡುಗಳನ್ನು ಹಾಡುತ್ತಾ ಬ್ರಹ್ಮಜ್ಞಾನಕ್ಕಾಗಿ ಹುಡುಕಿದರು. ಭಕ್ತನ ಸತ್ವವು ತತ್ವವಾಯಿತು. ಇವುಗಳೇ ಮುಂದೆ ತತ್ವಪದಗಳಾದವು. ಇಂಥಾ ಹಲವು ಅಂಶಗಳನ್ನು ಸ್ಥೂಲವಾಗಿ ವಿವರಿಸುವುದು ಕೂಡ ನನ್ನ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

## ೧.೨. ಅಧ್ಯಯನದ ವ್ಯಾಪ್ತಿ

ಕ್ರಿ.ಶ.೯ನೇ ಶತಮಾನದಲ್ಲಿ ಸಂಗಮ ಕಾಲದ ಪಾನರು, ಹರಿಜನರು, ಮೂಲ ಹಾಡುಗಾರರಾಗಿದ್ದರು. ತಮಿಳುನಾಡಿನ ಶೈವ, ವೈಷ್ಣವ ಸಂತರು ಧರ್ಮ ಜಾಗೃತಿಯನ್ನು ಉಂಟು ಮಾಡಿದರು. ಹದಿನೈದು ನೂರು ವರ್ಷಗಳ ಹಿಂದೆಯೇ ದ್ರಾವಿಡ ರಾಜ್ಯದಲ್ಲಿ ನಾಯನ್ಮಾರರಿಂದ, ಆಳ್ವಾರರಿಂದ ಶಿವ ಮತ್ತು ವಿಷ್ಣು ಕುರಿತಾಗಿ ಅನೇಕ ಹಾಡುಗಳು ರಚನೆಯಾದವು. ಇವರಲ್ಲಿ ಪ್ರಮುಖರಾದವರು, ತಿರುಜ್ಞಾನ ಸಂಬಂಧರು ಮತ್ತು ಸುಂದರ ಮೂರ್ತಿಗಳು. ಇವರು ಜಾನಪದ ದಾಟಿ ಲಯಗಳನ್ನು ಬಳಸಿಕೊಂಡು ಶಿವಪರವಾದ ಹಾಡುಗಳನ್ನು ಕಟ್ಟಿ ಭಕ್ತಿಮಾರ್ಗವನ್ನು ಹುಲುಸಾಗಿಸಿದರು. ಸಂಗಮ ಕಾಲದ ಹಾಡುಗಾರರು, ತತ್ವಪದಕಾರರನ್ನೇ ಹೋಲುತ್ತಾರೆ ಎಂಬುದು ಗಮನಾರ್ಹವಾಗಿದೆ.

ಸಾಮಾನ್ಯ ವ್ಯಕ್ತಿಗಳಂತೆ ಬದುಕುತ್ತಿದ್ದ ತತ್ವಪದಕಾರರು ಇಂದು ದೇವರುಗಳಾಗಿ ಬದುಕುತ್ತಿದ್ದಾರೆ. ಇಂಥಹ ಬದುಕು ತತ್ವಪದಕಾರರಿಗೆ ಸೀಮಿತವಲ್ಲ. ಇವರನ್ನು ನಂಬಿದ, ನಂಬಿಕೆಯಲ್ಲಿ ಜೀವಂತವಾಗಿ ಉಳಿಸಿಕೊಂಡು ಬಂದ, ಜನಸಮುದಾಯಗಳ ಚರಿತ್ರೆಯಾಗಿ, ಅವರ ಸೃಜನಾತ್ಮಕತೆಯ ಅಸ್ತಿತ್ವವಾಗಿ ಕಾಣುತ್ತದೆ. ಇಂಥ ಅದ್ಭುತವಾದ ಸ್ಮೃತಿಗಳು, ಕರ್ನಾಟಕ ಸಂಸ್ಕೃತಿಯ ಅಧ್ಯಯನದಲ್ಲಿ ಮರೆಗೆ ಸರಿದಿವೆ. ಇಂಥ ಸಂಗಾತಿಗಳ ವಿಮರ್ಶಾತ್ಮಕ ಅಧ್ಯಯನ ನನ್ನ ಅಧ್ಯಯನದ ತಾತ್ವಿಕ ಭಿತ್ತಿಯಾಗಿದೆ.

ಅವಧೂತರು ಜೀವಂತ ಸಮಾಧಿಯಾಗುತ್ತಿದ್ದರು. ಮಡಿ, ಮೈಲಿಗೆ ಎಂದೆನ್ನುತ್ತಾ ಸಮಾಧಿ ಪೂಜೆ ಮಾಡುವ ಭಕ್ತರೂ ಇರುವರು. ಶವ ಎದುರಾದರೆ ಒಳ್ಳೆಯದು ಎನ್ನುತ್ತೇವೆ. ಸಮಾಧಿ ಪೂಜೆ ಯಾಕೆ ಮಾಡುತ್ತೇವೆ ಎಂದು ಪ್ರಶ್ನಿಸಿ ಕೊಂಡಾಗ, ಒಂದು ಸಂಸ್ಕೃತಿಯ ಒಳಗೇ ಇರುವಂಥ ಸಂಸ್ಕರಿತ ಆತ್ಮ, ದೇಹ ಜಡ ಅಲ್ಲ ದೇಹಕ್ಕೂ ಚೈತನ್ಯವಿದೆ, ಈ ದೇಹ ಪಂಚಭೂತಗಳಲ್ಲಿ ಒಂದಾಗುವುದು ಎಂದು ಹೇಳುತ್ತೇವೆ. ಒಂದು ಅಸ್ತಿತ್ವದ ಜೊತೆಗೆ ಇನ್ನೊಂದು ಅಸ್ತಿತ್ವವನ್ನು ಬದುಕಿಸುವುದು, ಸಹಕರಿಸುವುದು ಎರಡೂ ಒಂದಾಗುವುದು ಪ್ರಕೃತಿ ಸತ್ಯ.

ಈ ಸಾಹಿತ್ಯ ವಿಶ್ಲೇಷಿಸಲ್ಪಟ್ಟಿದ್ದು ಎರಡು ಬಗೆಯಲ್ಲಿ ೧.ಧರ್ಮದ ಚೌಕಟ್ಟಿನಲ್ಲಿ ೨. ಶಾಸ್ತ್ರೀಯ ನೆಲೆಯಲ್ಲಿ. ಆದರೆ ತತ್ವಪದಕಾರರು ಒಂದು ಧರ್ಮಕ್ಕೆ ಒಲಿದವರಲ್ಲ ಧರ್ಮವನ್ನು ಮೀರಿ ಬೆಳೆದವರು. ತತ್ವಪದಕಾರರ ಸ್ವಭಾವ ಚಿಂತನೆಗಳನ್ನು, ಕೂಲಂಕುಷವಾಗಿ ವಿವೇಚಿಸಿದಾಗ, ಜ್ಞಾನ, ವೈರಾಗ್ಯ ಗುರುವಿನ ಪರಿಕಲ್ಪನೆಗಳು ಪರಂಪರೆಗಿಂತ ಭಿನ್ನವಾಗಿ ತೋರುತ್ತವೆ. ಜ್ಞಾನವೆಂದರೆ ಗುರು ಕೊಟ್ಟ ಜ್ಞಾನ ಅಲ್ಲ ಅದು ಕ್ರಿಯಾತ್ಮಕ ಜ್ಞಾನ, ಅನುಭವವೇದ್ಯ ಜ್ಞಾನ. ಗುರು ಬರೀ ಅರಿವಿನ ದಾರಿ ತೋರಿಸುತ್ತಾನೆ. ಗುರುವೇ ಸರ್ವಸ್ವವಲ್ಲ. ಗುರು ಸೂಚಕ ಮಾತ್ರ. ಗುರುವಿಗೆ ಗುಲಾಮನಾಗುವುದಕ್ಕಿಂತ ಅರಿವಿಗೆ ಗುಲಾಮನಾಗಬೇಕೆಂಬುದು ತತ್ವಪದಕಾರರ ಆಶಯ.

"ಗಡಿಗಿ ಜ್ವಾಕಿ ತಂಗಿ, ಬ್ರಹ್ಮಕೊಟ್ಟ ಗಡಿಗಿ ಜ್ವಾತಂಗಿ" ಎಂದು ಹೇಳಿದರೂ, ಮನದ ಗಡಿಗಿ ದೇಹದ ಗಡಿಗಿ ಯಾವುದು, ಮನುಷ್ಯನ ದೇಹ ಕ್ಷಣಿಕ. ಗಡಿಗಿ ಕೆಳಗೆ ಬಿದ್ದರೆ ಒಡೆದು ಹೋಗುತ್ತದೆ. ಇಂಥ ಮೊನಚಾದ ಮಾತಿನಿಂದ ಮನವನ್ನು ಮನುಷ್ಯನನ್ನು ಎಚ್ಚರಿಸುತ್ತಾರೆ.

ಹೀಗೆ ರಾಯಚೂರು ಜಿಲ್ಲೆಯ ತತ್ವಪದಕಾರರು ಮತ್ತು ಅವರ ಸಾಹಿತ್ಯ ಸಾಂಸ್ಕೃತಿಕ ನಡವಳಿಕೆಗಳನ್ನು ನೋಡಿದಾಗ, ಜಾತಿ ಬೇಧಗಳನ್ನು ತೊರೆದು ಮಾನವೀಯತೆಗಾಗಿ ಪರಿತಪಿಸಿದ್ದು ಎದ್ದು ಕಾಣುತ್ತದೆ. ಮುಸ್ಲಿಂ ತತ್ವಪದಕಾರರು ಮತ್ತು ಗುರುಪರಂಪರೆಯಿದ್ದಂತೆ ತಿಪ್ಪಣ್ಣ ತಾತ, ಯರ್ರ ಮಾರೆಪ್ಪ, ಕಲ್ಮಲಾ ತಾಯಣ್ಣ, ರಮಾನಂದ ಪರ್ತಿಗೇರಿ, ಹೊಸೂರು ತಿಪ್ಪಣ, ರಾಂಪೂರು ಲಕ್ಷ್ಮಣ ದಾಸ, ರಾಂಪೂರು ಭೀಮಣ್ಣ ಇವರಂಥ ದಲಿತ ತತ್ವಪದಕಾರರೂ ಇದ್ದಾರೆ. ಹಾಗೆ ಸ್ತ್ರೀ ತತ್ವಪದಕಾರರೂ ಕಂಡುಬರುತ್ತಾರೆ. ಇವರೆಲ್ಲ ತಮ್ಮದೇ ಆದ ಪರಂಪರೆಯನ್ನು ಕಟ್ಟಿದರು. ತಮ್ಮ ಸಮೂಹಕ್ಕೆ ಹಾಡುಗಳನ್ನು ರಚನೆ ಮಾಡುವ ಶಕ್ತಿ ಬೆಳೆಯಿಸಿದರು. ಇಂಥಹ ಗುರು ಸಂಪ್ರದಾಯ, ಗುರುಪರಂಪರೆಗಳು, ಪ್ರಮುಖ ಸ್ಥಾನವನ್ನು ಪಡೆಯುವಲ್ಲಿ ಸೋತು ಹೋದವು. ಪರಂಪರೆಯಲ್ಲಿ ಇವು ಉಪೇಕ್ಷೆಗೆ ಒಳಗಾದ ನೆವೆಗಟ್ಟಿನವು ಎಂಬುದನ್ನು ಗುರುತಿಸುವ ಮೂಲಕ ಈ ಪರಂಪರೆ ಬದುಕಿಬಂದ ಕಾಲಾತೀತ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಳ್ಳುವುದೂ ಈ ಅಧ್ಯಯನದ ಜರೂರಾಗಿದೆ.

## ೧.೩. ಅಧ್ಯಯನದ ವಿಧಾನ

ಈ ಮೊದಲಿಗೆ ಕ್ಷೇತ್ರಕಾರ್ಯದ ಮೂಲಕ ಸಮಗ್ರ ಮಾಹಿತಿ ಶೋಧ ಮತ್ತು ಸಂಗ್ರಹ ನಂತರ ಮಾಹಿತಿಯ ಸೂಕ್ತ ವಿಂಗಡಣೆ ಮಾಡಿಕೊಂಡು ಅಭ್ಯಸಿಸಲಾಗಿದೆ. ತತ್ವಪದಕಾರರು ಆಗಿ ಹೋದ ಜಾಗಗಳನ್ನು ಅವರ ಪ್ರಭಾವಕ್ಕೊಳಗಾದ ಜನಗಳನ್ನು ಹಾಡಿನಲ್ಲಿ ಜೀವಂತವಾಗಿರಿಸಿದ ಭಜನಾ ತಂಡಗಳನ್ನು ದರ್ಶಿಸಿ ಮಾಹಿತಿ ಪಡೆಯಲಾಗಿದೆ.

೧. ಇದುವರೆಗೂ ಪ್ರಕಟಗೊಂಡ ತತ್ವಪದಗಳ ಸಂಗ್ರಹ, ಅಧ್ಯಯನ ಲೇಖನಗಳ ಅವಗಾಹನೆ ಮತ್ತು ಸಂಗ್ರಹ.

೨. ತತ್ವಪದ ಹಾಡಿನ ಜನಪ್ರಿಯ ಮತ್ತು ಗಂಬೀರ ಭಜನಾ ಹಾಡುಗಳ ಧ್ವನಿಸುರುಳಿಗಳ ಸಂಗ್ರಹ.

ಹೀಗೆ ಕ್ಷೇತ್ರ ಒಳ ಮತ್ತು ಹೊರಗಿನ ಮೌಖಿಕ, ಲಿಖಿತ, ಆಚರಣಾತ್ಮಕವಾದ ಸಮಗ್ರ ಮಾಹಿತಿ ಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಕ್ಷೇತ್ರ ಕಾರ್ಯದ ಹಿನ್ನೆಲೆಯಲ್ಲಿ ಇವರ ಜೀವನ ವೈಯಕ್ತಿಕ ವಿವರಗಳಿಂದ ಶೋಧಿಸಿ ಹೇಳಲಾಗಿದೆ.

ರಾಯಚೂರಿನ ಈ ಭಾಗದಲ್ಲಿ ಸಮಗ್ರವಾದ ಅಧ್ಯಯನ ನಡೆದಿಲ್ಲ. ಶಾಂತರಸದ ಎಡೆದೊರೆ ನಾಡಿನ ಅನುಭಾವಿ ಕವಿಗಳು, ಡಾ.ಬಸವರಾಜ ಸಬರದರ ರಾಯಚೂರು ಜಿಲ್ಲೆಯ ಅನುಭಾವಿ ಕವಿಗಳು ಎಂಬ

ಹೊತ್ತಿಗೆಗಳನ್ನು ಬಿಡಿ ಲೇಖನಗಳೊಂದಿಗೆ ಪ್ರಕಟಿಸಿದ್ದಾರೆ. ಈ ಕೆಲ ಬರಹಗಳನ್ನು ಹೊರತುಪಡಿಸಿಯೂ ತತ್ವಪದ ಸಾಹಿತ್ಯದ ಅಧ್ಯಯನ ನಡೆಯಬೇಕಾದದ್ದು ಬೇಕಾದಷ್ಟಿದೆ. ಹೀಗಾಗಿ ಒಂದು ಹೊಸ ಸಾಂಸ್ಕೃತಿಕ ಬದುಕಿನ ಅನಾವರಣ ಮಾಡಿಕೊಳ್ಳಲು ನಾನು ರಾಯಚೂರು ಜಿಲ್ಲೆಯ ವ್ಯಾಪ್ತಿಯ ೩೦ ಜನ ತತ್ವಪದಕಾರರನ್ನು ಹಾಗೂ ಅವರ ಸಾಹಿತ್ಯವನ್ನು ನನ್ನ ಸಂಶೋಧನೆಗೆ ಆಯ್ಕೆ ಮಾಡಿಕೊಂಡಿದ್ದೇನೆ. ಅಧ್ಯಯನದ ಅನುಕೂಲಕ್ಕಾಗಿ ವಿಷಯವನ್ನು ಕೆಳಕಂಡಂತೆ ಅಧ್ಯಾಯಗಳಲ್ಲಿ ವರ್ಗೀಕರಿಸಿಕೊಂಡಿದ್ದೇನೆ.

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶಿತಗಳನ್ನು ಹೇಳಲಾಗಿದೆ. ಅಧ್ಯಾಯ ಎರಡರಲ್ಲಿ ಮಧ್ಯಕಾಲೀನ ಸ್ವರವಚನ ಸಾಹಿತ್ಯದ ಚರ್ಚೆಗಳು ಮತ್ತು ಅಧ್ಯಯನದ ಆಸಕ್ತಿಗಳು ಸಂಪ್ರದಾಯದ ನೆಲೆಯಲ್ಲಿ, ವೀರಶೈವ ಪರಿಭಾಷೆಯ ತಾತ್ವಿಕತೆಯಲ್ಲಿ ತತ್ವಪದಗಳನ್ನು ಮತ್ತು ಆ ಕಾಲದ ಸಾಹಿತ್ಯಿಕ ಸಂಗತಿಗಳನ್ನು ಕಟ್ಟಿಕೊಡುತ್ತವೆ. ಪ್ರೌಢದೇವರಾಯನ ಕಾಲದಲ್ಲಿ ಸಮಕಾಲೀನ ಸಂದರ್ಭದಲ್ಲಿ ನೂರೊಂದು ವಿರಕ್ತರು ಅನಿವಾರ್ಯವಾಗಿದ್ದರು. ಸಂಘಜೀವಿಗಳಾಗಿ ತಮ್ಮ ವ್ಯಕ್ತಿತ್ವದ ಅಭಿವ್ಯಕ್ತಿ ಕ್ರಮಕ್ಕೆ ತಕ್ಕಂತೆ ಸಾಹಿತ್ಯವನ್ನು ರಚನೆ ಮಾಡಿದರು. ಆದರೆ ತತ್ವಪದಕಾರರ ಅಧ್ಯಯನಗಳನ್ನು ನೋಡಿದಾಗ ಅವರ ಬದುಕಿನ ಕ್ರಮಗಳನ್ನು ಧಾರ್ಮಿಕ, ತಾತ್ವಿಕ ತಳಹದಿಯ ಮೂಲಕ ಮಾಡಲು ಸಾಧ್ಯವಾಗವುದಿಲ್ಲ. ತತ್ವಪದಕಾರರು, ಏಕಾಂಗಿ ಹೋರಾಟಗಾರರು ಸಂಘಟನೆಗಿಂತ ಹೆಚ್ಚಾಗಿ ವೈಯಕ್ತಿಕ ನೆಲೆಯ ಹೋರಾಟಗಾರರು.

ಅಧ್ಯಾಯ ಮೂರರಲ್ಲಿ ತತ್ವಪದಕಾರರು ಸಮಾಜದ ಹಲವು ಮಜಲುಗಳಿಂದ ಬಂದವರು. ಸಮಾಜದ ಹಲವು ಸ್ತರದ ಅನುಭವಗಳನ್ನು ತಮ್ಮ ಅಭಿವ್ಯಕ್ತಿಗಳ ಮೂಲಕ ಸಾಹಿತ್ಯ ಕ್ಷೇತ್ರಕ್ಕೆ ದಕ್ಕಿಸಿಕೊಟ್ಟವರು. ಪರಂಪರೆಯಲ್ಲಿ ಘನವೆಂದು ಸ್ಥಿರೀಕೃತಗೊಂಡ ಸಿದ್ಧ ಹಾಗೂ ಜಡಮೌಲ್ಯಗಳನ್ನು ನಿರಾಕರಿಸಿ ಹೊಸ ರೀತಿಯ ಬದುಕಿನ ಕ್ರಮವನ್ನು ಆಲೋಚನಾ ರೀತಿಯನ್ನು ಕಟ್ಟಿಕೊಟ್ಟವರು. ನಿಜಾಂಶಾಹಿ ಪ್ರಭಾವದ ನಾಡಾದ ರಾಯಚೂರು ಜಿಲ್ಲೆಯಲ್ಲಿ ಮುಸ್ಲಿಂರಾದಿಯಾಗಿ ಹಲವು ಜಾತಿ ಜನಾಂಗದ ತತ್ವಪದಕಾರರು ಸಿಗುತ್ತಾರೆ. ಅವರ ಬದುಕು, ಮನೋಧರ್ಮ, ತತ್ವನಿರೂಪಣೆ ಪ್ರತಿಯೊಂದರಲ್ಲೂ ಭಿನ್ನತೆ ಕಾಣುತ್ತದೆ. ಜನಮಾನಸಕ್ಕೆ ಚೈತನ್ಯ ತುಂಬಿದ ಇಂಥ ಯೋಗಿಗಳ ಬಗ್ಗೆ ಹಲವು ರೀತಿಯ ಕತೆ, ಪವಾಡ, ಐತಿಹ್ಯ ಆಚರಣೆಗಳು ಚಾಲ್ತಿಯಲ್ಲಿವೆ. ಇಂಥ ಬಹುಮುಖಿ ಸಂವೇದನೆಯ ಪರಂಪರೆಯ ಅಧ್ಯಯನವೆಂದರೆ ಅದು ಸವಾಲಿನದು ಹೌದು. ಹಾಗೆ ಹಲವು ರೀತಿಯ ಸಾಂಸ್ಕೃತಿಕ ವಿನ್ಯಾಸಗಳನ್ನು ವಿಶ್ಲೇಷಿಸಿಕೊಳ್ಳುವ ಸಾಹಸವು ಹೌದು. ಇಂಥ ಸಾಹಸದ ಕೆಲಸ ಈ ಅಧ್ಯಯನದ ಪ್ರಮುಖ ಸಂಗತಿಯಾಗಿದೆ.

ಅಧ್ಯಾಯ ನಾಲ್ಕರಲ್ಲಿ ಪರಾಮಾರ್ಥಿಕ ಆಯಾಮ, ಮನುಷ್ಯನ ಅಸ್ತಿತ್ವದ ಸ್ವರೂಪಗಳು, ಸಾಂಪ್ರದಾಯಿಕವಾದ, ದಾರ್ಶನಿಕ ನೆಲೆಗಳು, ಗುರು-ಲಿಂಗ, ಸತಿ-ಪತಿ, ಲಿಂಗ ಗಂಡಾದ ಪರಿ, ಲಿಂಗ

ಹೆಣ್ಣಾದ ಪರಿ, ಸಾಂಪ್ರದಾಯಿಕ ಮೋಕ್ಷದ ಕಲ್ಪನೆ ಜೀವ ಸಮಾಧಿಯಾಗುವುದು ಇಂಥ ಹಲವಾರು ಸಂಗತಿಗಳ ಬಗ್ಗೆ ಪರಂಪರೆಗಿಂತ ಭಿನ್ನವಾಗಿ ರಾಯಚೂರು ಜಿಲ್ಲೆಯ ತತ್ವಪದಕಾರರು ಯೋಚಿಸುತ್ತಾರೆ. ಸಾಂಪ್ರದಾಯಿಕವಾದ, ದಾರ್ಶನಿಕ ನೆಲೆಗಳ ಮೀರುವಿಕೆ ಮೂಲಕ ಹೊಸದರ ಕಟ್ಟುವಿಕೆಯತ್ತ ತತ್ವಪದಕಾರರು ಹಂಬಲಿಸುತ್ತಾರೆ. ಗಾಂಜಾ ಸೇದುವುದು, ಭಂಗಿ ಕುಡಿಯುವುದು ಇವೆಲ್ಲಾ ತತ್ವಪದಕಾರರಲ್ಲಿ ಪ್ರಚಲಿತವಾಗಲು ಕಾಣವೇನು? ಪಂಚಮಕಾರಗಳು ಸಾಧನೆಯ ಹಂತಗಳು. ಜ್ಞಾನವೆಂಬ ನಿಶೆ ಏರಿಸಿಕೊಂಡು ತನ್ಮಯತೆಯ ಹಾದಿಯನ್ನು ಕಂಡುಕೊಳ್ಳುವುದೇ? ಇಂತಹ ವಿಚಾರಗಳು ಆಯಾ ತತ್ವಪದಕಾರರ ನೆಲೆಯಲ್ಲಿಯೇ ಕಾಣಬೇಕಾದದ್ದು ಗಮನಿಸುವ ವಿಚಾರ. ಮನುಷ್ಯ ಸಮುದಾಯವನ್ನು ಬಿಟ್ಟು ಬದುಕಲಾರ. ತನ್ನ ಸುತ್ತಲಿನ ಸಮಾಜವನ್ನು ನೋಡಿದಾಗ ಉಪಕಾರ ಮಾಡಲು ಮುಂದಾಗವನು. ತಾನೂ ಬದುಕಬೇಕು, ಬೇರೆಯವರಿಗೂ ಕಲ್ಯಾಣವಾಗಬೇಕು. ಎಲ್ಲಾ ಜೀವಿಗಳಿಗೂ ಬದುಕಿಸಬೇಕು ಎನ್ನುವ ಆದರ್ಶ ವಂತಿಕೆ ತತ್ವಪದಕಾರರಲ್ಲಿ ಕಂಡಾಗ ಇಂಥಹ ವಿಚಾರ ವಿಶೇಷತೆಯನ್ನು ಬಿಡಿಸಿ ಹೇಳುವುದು ಮುಖ್ಯವಾಗಿದೆ. ಹೆಚ್ಚಾಗಿ ತತ್ವಪದಕಾರರು, ಶೈವ, ತಾಂತ್ರಿಕ, ನಾಥ, ಸಿದ್ಧ, ಸಾಂಖ್ಯ ಪಂಥಗಳ ಚಹರೆಗಳನ್ನು ಹೊಂದಿದ್ದರು. ಈ ಧಾರ್ಮಿಕ ಗೊಂದಲಗಳು ಜಟಿಲವಾದಾಗ ತನ್ನ ನೆಲೆಯೇ ಸ್ಥಿರವಲ್ಲವೆನ್ನುವಂತೆ ಕಾಡಿಗೆ ಹೋದವರು. ಸಮಾಜದ ಜಡ ನೆಲೆಗಳ ಕುರಿತು ಕಟುವಾಗಿ ಮಾತನಾಡುವರು. ಇವೆಲ್ಲ ಅಧ್ಯಯನಕ್ಕೆ ಹೊಸ ಆಯಾಮವನ್ನು ಕೊಡುವಂಥವು. ಇದಕ್ಕೆ ರಾಯಚೂರು ಜಿಲ್ಲೆ ತತ್ವಪದಕಾರರಲ್ಲಿ ಹಲವು ನಿದರ್ಶನಗಳು ದೊರೆಯುತ್ತವೆ. ಆರೂಢ ಅವಧೂತರಂತಹ ಜೀವನ್ಮುಕ್ತರು ತತ್ವಪದಕಾರರಿಗಿಂತ ಭಿನ್ನವೇ? ಹೇಗೆ? ಕೊಡೇಕಲ್ ಸಂಪ್ರದಾಯದ ಕರಪಾಲಕರು, ಕಾಲಜ್ಞಾನ ನುಡಿಯುವ ಸಂತರೆ ಮುಂದಿನ ಭವಿಷ್ಯದ ನಿರ್ಧಾರವನ್ನು ಹೇಳುವ, ಭವಿಷ್ಯಕಾರರೆ? ಜನ ಮರುಳಾಗಿ ಅಂತಹ ಸಾಹಿತ್ಯವನ್ನು ತನ್ಮಯತೆಯಿಂದ ಕೇಳಲು ಕಾರಣವೇನು? ಇವೆಲ್ಲಾ ಯಾಕೆ? ನಮ್ಮಂಥ ಸಾಮಾನ್ಯರಿಗೆ ಯಾಕೆ ಸಾಧ್ಯವಾಗುವುದಿಲ್ಲ. ಇಂಥ ಪ್ರಶ್ನೆಗಳು ನನ್ನ ಅಧ್ಯಯನದ ಕುತೂಹಲಗಳಾಗಿವೆ.

ಅಧ್ಯಾಯ ಐದರಲ್ಲಿ ಹಾಡಿನ ಪರಂಪರೆ ಹಾಗೂ ತತ್ವಪದ ಸಾಹಿತ್ಯ ಕುರಿತು ಚರ್ಚಿಸಲಾಗಿದೆ. ಹಾಡು ಕಟ್ಟುವ ಗುಣ ಜನಪದರಲ್ಲಿದೆ. ಆದರೆ ಪಾರಮಾರ್ಥಿಕ ನೆಲೆಯಲ್ಲಿ ಸಾಹಿತ್ಯದ ಸಂಪ್ರದಾಯದಲ್ಲಿ ತತ್ವಪದಕಾರನ ಹುಡುಕಾಟ ಯಾವುದು? ಇವರು ಹಾಡು ಕಟ್ಟಿ ಹಾಡನ್ನು ಹಾಡುತ್ತಿರಲಿಲ್ಲ. ಹಾಡುತ್ತ ಕಟ್ಟುತ್ತಿದ್ದರು. ಇವರ ಹಾಡು ರಾಗ ಪ್ರಧಾನವಲ್ಲ. ಲಯ ಪ್ರಧಾನ, ನಾದ ಪ್ರಧಾನ "ಬಸರಾಗದ ಮಗನ ಹಡದೆವ್ವಾ| ಮಗನ ಹೆಸರೇನಿಡಬೇಕ ಹಡದವ್ವಾ| ಸತ್ಯುಳ್ಳ ಗರತಿ ನೀನವ್ವಾ| ಬಂಗಾರದಂಥ ಮಾತೊಂದು ಆಡಿದೆವ್ವಾ ತಾಯಿ| ಬಂಗಾರದಂತಹ ಮಾತೊಂದು ಆಡಿದವ್ವಾ| ಅವ್ವಾ ಅವ್ವಾ ಎಂದು ಗುರಿತಿಸುವಲ್ಲಿ ನಾದಕ್ಕೆ ವಶವಾಗಿರುವುದು ಕಂಡುಬರುತ್ತದೆ. ಕೊಡೇಕಲ್ ಸಂಪ್ರದಾಯವೆಂದರೆ, ಮುಂದಿನ ಭವಿಷ್ಯ ನುಡಿಯುವಷ್ಟು ಪ್ರಸಿದ್ಧವಾಗಿತ್ತು. ಇಂಥ ಕಾಲಜ್ಞಾನದ ವಚನಗಳನ್ನು ಅಧ್ಯಯನ

ಮಾಡುವುದರ ಮೂಲಕ ಹೊಸ ವಿಚಾರಗಳನ್ನು ಗ್ರಹಿಸುವುದು ಇಲ್ಲಿನ ಉದ್ದೇಶ. ತತ್ವಪದಕಾರರಲ್ಲಿ ಮತ್ತು ಬೆಡಗಿನ ಪರಂಪರೆಯನ್ನು ಬೆಡಗಿನ ಭಾಷೆಯನ್ನು ಕಾಣುತ್ತೇವೆ. ಮಾತಿನ ಚಮತ್ಕಾರದಲ್ಲಿ ಮುಚ್ಚಿ ಹೇಳುವುದು, ಅದು ಸಹಜ ಸೃಷ್ಟಿ. ಅದು ಯಾಕೆ ಆಯಿತು? ಉದಾ ಕೋಡಗನ ಕೋಳಿ ನುಂಗಿತ್ತಾ ನೋಡವ್ವಾ ತಂಗಿ ಹಾಡಾಗಲಿ ಕುರುಬರೋ ನಾವು ಕುರುಬರು ಎನ್ನುವ ಕೂಡಲೂರು ಬಸವಲಿಂಗರ ಹಾಡಾಗಲೀ ಸತ್ತ ಚೋಳೇಯವ್ವಾ ಬೆನ್ನತ್ತಿ ಕಚ್ಚಿತು ಕೇಳೆವ್ವಾ| ಎನ್ನುವ ಗಬ್ಬೂರು ಹಂಪಣ್ಣನ ಹಾಡು-ಇಲ್ಲೆಲ್ಲಾ ಇಂಥ ಪದಗಳನ್ನು ಬಳಸುವ ಕಾರಣವೇನಿತ್ತು. ಬುದ್ದಿಯ ಚಮತ್ಕಾರತೆ, ತಲೆಗೆ ಕೆಲಸ ಕೊಡುವುದು ಬೆಡಗಿನ ಹಾಡುಗಳಲ್ಲಿ ಹಾವು, ಚೇಳು, ಕುರಿ, ಕೋಳಿ ಇಂಥ ಪ್ರಾಣಿ ಸಂಕುಲ ಯಥೇಚ್ಛವಾಗಿ ಬಳಕೆಯಾಗುತ್ತದೆ.

ಅಧ್ಯಾಯ ಆರರಲ್ಲಿ ತತ್ವಪದ ಹಾಗೂ ತತ್ವಪದಕಾರರ ಸಾಂಸ್ಕೃತಿಕ ಆಯಾಮಗಳ ಕುರಿತು ಚರ್ಚಿಸಲಾಗಿದೆ. ಹಿಂದೂ ಮುಸ್ಲಿಂ ಧಾರ್ಮಿಕ ವ್ಯವಸ್ಥೆ ಮತ್ತು ಕೋಮು ಸಮಸ್ಯೆಗಳು ಇವೆಲ್ಲಾ ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿ ಕಂಡಬರುವ ಹಿಂದು ಮುಸ್ಲಿಂ ಸಮಸ್ಯೆಗಳು. ಆ ಇತಿಹಾಸದ ಜೊತೆಗೆ ತತ್ವಪದಕಾರರ ಪಾತ್ರ, ಅವರ ಹಾಡುಗಳಲ್ಲಿ ಹಿಂದೂ ಮುಸ್ಲಿಂರ ಸಾಮರಸ್ಯ, ಹತಾಶೆ, ಅಂದಿನ ಸರಕಾರದ ದುರಾಡಳಿತ, ಸಾಮಾಜಿಕ ಅಸಮಾನತೆ ಇಂಥ ಹಲವು ರೀತಿಯ ವಿಷಯಗಳನ್ನು ಹೊಸ ರೀತಿಯಲ್ಲಿ ಚರ್ಚೆ ಮಾಡುವುದು ಇಲ್ಲಿನ ಉದ್ದೇಶವಾಗಿದೆ. ವಿಧವಾ ವಿವಾಹ, ಬಾಲ್ಯವಿವಾಹ, ಉಡಿಕಿ ಸಂಪ್ರದಾಯ ಇಂಥ ವಿಷಯಗಳಲ್ಲಿ ಮಹಿಳೆಯ ನೋವುಗಳು, ಸಂಕಟ ಸಂಕೋಲೆಗಳಂಥ ವಿಚಾರಗಳನ್ನು ತತ್ವಪದಕಾರರು ಮುಖಾಮುಖಿಯಾದ ಹಾಗೂ ಭಿನ್ನವಾಗಿ ಪ್ರತಿಕ್ರಿಯಿಸಿದ ರೀತಿಗಳನ್ನು ಕಂಡುಕೊಳ್ಳಲಾಗಿದೆ. ಈ ಅಧ್ಯಯನದ ಮುಖ್ಯ ಸಂಗತಿಯೂ ಹೌದು.

## ಅಧ್ಯಾಯ ೨

# ಮಧ್ಯಕಾಲೀನ ಸಾಹಿತ್ಯದ ಅಧ್ಯಯನದ ನೆಲೆಗಳು, ಮತ್ತು ಪ್ರಸ್ತುತ ಅಧ್ಯಯನಕ್ಕೆ ಸಂರಚಿಸಿಕೊಳ್ಳಲಾದ ತಾತ್ವಿಕ ಭಿತ್ತಿಗಳು

೨.೧. ಭಕ್ತಿಯಹಾಡುಗಳು

೨.೨. ಕಾವ್ಯರೂಪದ ಹಾಡುಗಳು

೨.೩. ಸ್ವರ ವಚನಗಳು

೨.೪. ಕೈವಲ್ಯ ಪದಗಳು

## ೨

# ಮಧ್ಯಕಾಲೀನ ಸಾಹಿತ್ಯಿಕ ಅಧ್ಯಯನದ ನೆಲೆಗಳು ಮತ್ತು ಪ್ರಸ್ತುತ ಅಧ್ಯಯನಕ್ಕೆ ಸಂರಚಿಸಿಕೊಳ್ಳಲಾದ ತಾತ್ವಿಕ ಭಿತ್ತಿಗಳು

ಮಧ್ಯಕಾಲೀನ ಸಾಹಿತ್ಯಿಕ ಅಧ್ಯಯನದ ನೆಲೆಗಳನ್ನು ಕ್ರಿ.ಶ.೧೨ನೇ ಶತಮಾನದ ಶರಣ ಚಳುವಳಿಯ ಮೂಲಕ ಗುರುತಿಸಲಾಗುತ್ತದೆ. ಅಲ್ಲಿಯ ಚಾರಿತ್ರಿಕ ಒತ್ತಡಗಳು, ಧಾರ್ಮಿಕ ವಾಗ್ವಾದದ ಸ್ವರೂಪಗಳು, ಮತ್ತೆ ಮತ್ತೆ ನಮ್ಮನ್ನು ಗಂಭೀರ ಚರ್ಚೆಗೆ ಪ್ರೇರೇಪಿಸುತ್ತವೆ. ಈ ಕಾಲದ ಸಾಹಿತ್ಯಿಕ ರಚನೆಗಳಾದ ಷಟ್ಪದಿ, ರಗಳೆ, ತ್ರಿಪದಿ, ಕಂದ, ಸಾಂಗತ್ಯಗಳಂಥ ಹಲವು ಬಗೆಯ ಛಂದೋಲಯಗಳು ಜನಮುಖಿ ಸಂಸ್ಕೃತಿಯೊಂದಿಗೆ ರೂಪಿತವಾದ ಮಟ್ಟುಗಳು ಎಂಬುದು ಸ್ಪಷ್ಟವಾಗುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಇಂಥ ಸಾಹಿತ್ಯಿಕ ಪ್ರಕಾರಗಳ ಸೂಕ್ಷ್ಮ ರೂಪಿ ತಾತ್ವಿಕ ಸಂರಚನೆಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

## ೨.೧. ಭಕ್ತಿಯ ಹಾಡುಗಳು

ಹಾಡು ಎನ್ನುವುದು ಮನುಷ್ಯನ ಮನಸ್ಸಿನ ಸುಪ್ತಪ್ರಜ್ಞೆಯಿಂದ ಹುಟ್ಟುವ ಒಂದು ಕ್ರಿಯೆ. ಕಾಲ ಕಾಲಕ್ಕೆ ಅದರ ಆಯಾಮಗಳು ಭಿನ್ನವಾದಂತೆ ಹಾಡಿನ ನಾದ ಮತ್ತು ಲಯಗಳು ಭಿನ್ನವಾಗುತ್ತಾ ಬಂದವು. ಕವಿರಾಜಮಾರ್ಗಕಾರನ ಕಾಲದಿಂದ ಹಿಡಿದು ಇತ್ತೀಚಿನ ತತ್ವಪದಕಾರರ ಕಾಲದವರೆಗೂ ಇದನ್ನು ಕಾಣುತ್ತೇವೆ. ಮಾರ್ಗವೆಂದಾಗ ಶಿಷ್ಟ. ದೇಸೀ ಎಂದಾಗ ಪ್ರಾದೇಶಿಕ ವೈಶಿಷ್ಟ್ಯದಿಂದ ಕೂಡಿದ ಸಾಹಿತ್ಯವೆಂದು ಗುರುತಿಸಲಾಗುತ್ತದೆ. ಈ ಕಾಲದ ಸಾಹಿತ್ಯದ ದೇಸೀಯ ನುಡಿಗಳನ್ನು ಲಿಖಿತ ಮಾದರಿಯಲ್ಲಿ ಕಾಣುವ ಪ್ರಯತ್ನಗಳು ನಡೆದಿವೆ. ಈ ರೀತಿಯ ಹಾಡುಗಳು ಮೌಖಿಕ ಅಭಿವ್ಯಕ್ತಿಗಳಾಗಿದ್ದು, ದೇಸೀಯ ನೆಲೆಯಲ್ಲಿ ಹುಟ್ಟಿಕೊಂಡ ಸೃಜನಾತ್ಮಕ ಪ್ರಕಾರಗಳಾಗಿರುವುದರಿಂದ ಅವುಗಳನ್ನು ಜನರ ದೇಸೀ ಮಟ್ಟುಗಳೆಂದು ಹೇಳಲಾಗುತ್ತದೆ. ಛಂದೋಂಬುದಿಯ ಕರ್ತೃವಾದ ನಾಗವರ್ಮನು ದೇಸೀ ಹಾಡುಗಳ ಮಟ್ಟನ್ನು ಕುರಿತು ಹೀಗೆ ಹೇಳಿದ್ದಾನೆ. " ಎರಡು ಪದ್ಯಗಳ ಜೊತೆಗೆ ಒಂದು ಪದ, ಹನ್ನೆರಡು ಪದ ಪುಂಜ ಮೆಲ್ಪಾಡು ಹದಿನೈದರಿಂದ ಇಪ್ಪತ್ತೈದು ಪದಗಳ ಸಮೂಹ ಪಾಡು ಎನ್ನುವನು."[೧] ಪಾಡುಗಳಿಂದ ರಚನೆಗೊಂಡದ್ದು ಹಾಡುಗಬ್ಬವೆಂದು ಹೇಳುವುದನ್ನು ನೋಡಿದರೆ ಭಾಜನಗಬ್ಬ ಮೆಲ್ಪಾಡುಗಳೂ ಜಾನಪದ ಲಯಗಳು

ಎಂದು ಸ್ಪಷ್ಟಪಡಿಸಬಹುದು. ಭಾಜನಗಬ್ಬಗಳು ಜನಪದರು ಹೊಲಗದ್ದೆಗಳಲ್ಲಿ ಕೆಲಸ ಮಾಡುವ ಸಮಯದಲ್ಲಿ ಆಗುವ ದಣಿವು ಮತ್ತು ಬೇಸರಗಳನ್ನು ನೀಗಿಸುವ ಇರಾದೆಯಿಂದ ಇವು ಹುಟ್ಟಿಕೊಂಡಂಥವು. ಈ ಲಯಗಳು ಗ್ರಾಮೀಣ ಜನರ ಜೀವ ನಾಡಿಗಳೆಂಬುದು ಪ್ರಮುಖ ವಿಚಾರ.

ತತ್ವಪದಗಳು ಹೆಸರೇ ಸೂಚಿಸುವಂತೆ ತತ್ವಪ್ರಧಾನವಾದ ಹಾಡುಗಬ್ಬಗಳಾಗಿವೆ. ಮನುಷ್ಯನ ಹಸನಾದ ಬದುಕಿಗೆ ಅವಶ್ಯಕವಾದ ತತ್ವ, ನೀತಿ, ಗುರು, ಮುಕ್ತಿ ಮೊದಲಾದ ಮೌಲ್ಯಗಳನ್ನು ತತ್ವಪದಗಳು ಪ್ರತಿಪಾದಿಸುತ್ತವೆ ಇದು ತತ್ವಪದಗಳ ಮೂಲ ಆಶಯವೂ ಆಗಿದೆ. ಹೀಗಾಗಿ ತತ್ವಪದಗಳು ಮನರಂಜನೆಗಿಂತ ನೀತಿಯನ್ನು ಧಾರ್ಮಿಕ ಅನುಭವಗಳನ್ನು ಪ್ರಧಾನವಾಗಿ ಹೇಳುತ್ತವೆ. ಜನಪದರಲ್ಲಿ ಆಡುನುಡಿ ಸಾಹಿತ್ಯವಾದರೆ, ತತ್ವಪದಕಾರರಲ್ಲಿ ತತ್ವವೇ ಸಾಹಿತ್ಯವಾಗುತ್ತದೆ. ಪದ ಹಾಡಾಗುತ್ತದೆ. ಪದ್ಯವಾಗುತ್ತದೆ. ಗುಂಪಿನಲ್ಲಿ ವಿಸ್ತೃತಗೊಳ್ಳುತ್ತದೆ. ಇವೇ ಮುಂದೆ ಭಜನೆ ಮೇಳವಾಗಿ ಪರಿವರ್ತಿತವಾಗಿದ್ದು ಕಂಡುಬರುತ್ತದೆ.

ಕ್ರಿ.ಶ.ಹತ್ತು ಹನ್ನೊಂದನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಜೈನಧರ್ಮ ಪ್ರಬಲವಾಗಿತ್ತು. ಈ ಧರ್ಮದ ಕ್ಲಿಷ್ಟ ಆಚರಣೆಗಳಿಂದ ಕರ್ನಾಟಕದ ಸೀಮಿತ ಜನರ ಭಕ್ತಿಯ ಆಶೋತ್ತರಗಳು ಧ್ವನಿಗಳಾಗಿಯೇ ಉಳಿದವು. ಇಂತಹ ಸಂಕೀರ್ಣವಾದ ಸಂದರ್ಭದಲ್ಲಿ ತಮಿಳುನಾಡಿನ ನಾಯನ್ಮಾರ್, ಮತ್ತು ಆಳ್ವಾರರು ಶಿವ ಮತ್ತು ವಿಷ್ಣುವನ್ನು ಮುಖ್ಯವಾಗಿಟ್ಟುಕೊಂಡು ಭಕ್ತಿ ಚಳುವಳಿಯನ್ನು ಪ್ರಚುರಪಡಿಸಲು ಕಾರಣರಾದರು. ಅರವತ್ಮೂರು ಜನ ನಾಯನ್ಮಾರರಲ್ಲಿ ರಾಜರು, ಬ್ರಾಹ್ಮಣರು, ಅಸ್ಪೃಶ್ಯರು, ವರ್ತಕರು, ರೈತರು, ಕುರುಬರು, ನೇಕಾರರು, ಬೇಡರಿದ್ದರೆ, ಶೈವ ಧರ್ಮದಲ್ಲಿ ನಂದನಾರ್, ತಿಲಕವತಿಯಾರ್ ಎಂಬ ಭಕ್ತರು ಶ್ರದ್ಧೆ ಹಾಗೂ ಸಮರ್ಪಣಾ ಭಾವಗಳಿಂದ ದಕ್ಷಿಣ ಭಾರತದ ಜನರಿಗೆ ಹತ್ತಿರವಾದರೆಂಬುದು ಇತಿಹಾಸದ ಮೂಲಕ ತಿಳಿದುಬರುತ್ತದೆ. ಈ ಕಾಲದ ಮಿತಿಯನ್ನು ತುಲನೆ ಮಾಡಿದರೆ, ಕನ್ನಡ ಭಾಷೆಗೆ ಸ್ವತಂತ್ರತೆಯಿರದೇ ಇದ್ದದ್ದು ಒಂದಾದರೆ; ಶೈವರ, ವೈಷ್ಣವರ, ಸಂಸ್ಕೃತಿ ಮತ್ತು ಸಾಮಾಜಿಕ ಪದ್ಧತಿಗಳು ಕನ್ನಡ ನಾಡಿನ ಜನರ ಮೇಲೆ ಅಚ್ಚಳಿಯದ ಪ್ರಭಾವಗಳಾಗಿ ಹುಟ್ಟಿಕೊಂಡವು. ಆಸ್ಥಾನದ ಪಂಡಿತರಿಂದ ಹಿಡಿದು ಸಾಮಾನ್ಯ ಶ್ರಮಿಕ ವರ್ಗದವರ ತನಕ ಧರ್ಮ ಜಾಗೃತಿಯನ್ನುಂಟುಮಾಡಿದರೆಂಬ ಜೀವಂತ ಸಂಕಥನಗಳು ದೊರಕುತ್ತವೆ. ಪೇಯ್‌ಗೈ ಆಳ್ವಾರ್, ಪೆರಿಯಾಳ್ವರ್, ವಿಷ್ಣುಪರವಾದ, ಭಾವ ಪ್ರಧಾನವಾದ, ಹಾಡುಗಳ ರಚನೆಗಳನ್ನು ದ್ವಿಗುಣ ನೀತಿಗಳಿಂದ ಪ್ರಚಾರ ಮಾಡಿದ್ದನ್ನು ಗಮನಿಸಬಹುದು. ತಿರುಜ್ಞಾನ, ಸುಂದರ ಮೂರ್ತಿಯಂಥ ಸಂತರು, ಸಾಮಾನ್ಯ ಜನರಿಗೆ ಮನ ಮುಟ್ಟುವಂತೆ ಜಾನಪದ ಗೇಯತೆಯಲ್ಲಿ ಶಿವ ಮತ್ತು ವಿಷ್ಣುಪರವಾದ ಭಕ್ತಿಪರ ಹಾಡುಗಳನ್ನು ಪ್ರಚಾರಗೊಳಿಸಿದರು.

"ತಮಿಳು ನಾಡಿನಿಂದ ಬಂದ ಇನ್ನೊಂದು ಪ್ರವಾಹವೆಂದರೆ ಭೈರಾಗಿಗಳದ್ದು. ಇದು ತುಂಬಾ ಗಮನಾರ್ಹ ಪ್ರವಾಹವೆಂದು ಕಂಡುಬರುತ್ತದೆ. ಕ್ರಿ.ಶ.ಹನ್ನೆರಡನೇ ಶತಮಾನದ ಕರ್ನಾಟಕದ ಚಳುವಳಿಗೆ ಒಂದು ರೀತಿಯಲ್ಲಿ ಪ್ರೇರಣೆ ನೀಡಿದ ಮಹಾನುಭಾವಿಗಳಿವರೆಂದು ಊಹಿಸಬಹುದು. ಈ ಭೈರಾಗಿಗಳು ತಮಿಳುನಾಡಿನ 'ಪಾಣರ್' ಎಂಬ ವಿಶಿಷ್ಟ ಜನವರ್ಗದಿಂದ ಬಂದವರು. ಇವರು ಊರೂರು ಅಲೆಯುತ್ತಾ ಉತ್ತಮ ತತ್ವಪದಗಳನ್ನು ಸುಮಧುರವಾಗಿ ಹಾಡುತ್ತಾ ಭಿಕ್ಷೆಯಿಂದ ಹೊಟ್ಟೆ ಹೊರೆಯುತ್ತಿದ್ದರು. ಏಕನಾದ ಇವರ ಪ್ರಮುಖ ವಾದ್ಯವಾಗಿತ್ತು."[೨] ಇವರ ಸ್ವಭಾವವನ್ನು ಕನ್ನಡ ತತ್ವಪದಗಳ ಮೇಲೂ ಗುರುತಿಸಬಹುದು. ತಮಿಳನಾಡಿನ ಭಕ್ತಿ ಚಳುವಳಿಕಾರರ ಹಾಡುಗಳು ಕರ್ನಾಟಕದ ಶರಣ ಚಳುವಳಿಗೆ ಪ್ರೇರಿತವಾದ ಅಂಶಗಳನ್ನು ಹೀಗೆ ಗುರಿತಿಸಬಹುದು. ಪ್ರಭುತ್ವಕ್ಕೆ ಪ್ರತಿರೋಧ ಆಧ್ಯಾತ್ಮಿಕತೆಯಿಂದ ತುಂಬಿದ ಭಕ್ತಿಯ ಹಾಡುಗಳು. ಸಾಮಾಜಿಕ ಸುಧಾರಣೆ, ಧ್ಯೆಯ, ನೀತಿಗಳು, ಮೋಕ್ಷಕ್ಕಾಗಿ ಹಂಬಲಿಸುವ ವಿಚಾರಗಳು ಇಬ್ಬರಲ್ಲಿಯೂ ಒಂದೇ ಆಗಿದ್ದವು.

ಕರ್ನಾಟಕದ ಸಿದ್ಧ ಪರಂಪರೆಯಲ್ಲಿ ರೇವಣಸಿದ್ಧ ಯತಿಗಳು ಬಹುಮುಖ್ಯರು. ಕ್ರಿ.ಶ.೧೧ನೇ ಶತಮಾನದಲ್ಲಿ ಕರ್ನಾಟಕ ಆಂಧ್ರದಲ್ಲಿ ಅವರು ಸಿದ್ಧಮಾರ್ಗವನ್ನು ಪ್ರಚಲಿತಗೊಳಿಸಿದರು. ತಮಿಳು ಶೈವಭಕ್ತರು ಹೂಡಿದ ಭಕ್ತಿ ಮಾರ್ಗದ ಮೇಲೆ ತಮ್ಮದೆ ಆದ ಪಂಥವೊಂದನ್ನು ಕಟ್ಟಿದ್ದು ಗಮನಾರ್ಹವಾದದ್ದು. ಇಂತಹ ಬಹುರೂಪಿ ಸಂವೇದನೆಗಳು ತೆಲುಗು, ತಮಿಳು, ಕನ್ನಡದ ಸಾಹಿತ್ಯಿಕ, ಸಾಂಸ್ಕೃತಿಕ, ಲೋಕದಲ್ಲಿ ಕಾಣುತ್ತವೆ. ರೇವಣಸಿದ್ಧ ಯತಿಯಗಳಿಂದ ಹಿಡಿದು ಶೈವ, ನಾಥ ಪರಂಪರೆಗಳು ದಕ್ಷಿಣ ಭಾರತದ ಭಕ್ತಿ ಪಂಥಗಳ ಅನುಸಂಧಾನದಲ್ಲಿ ಅಗಾಧ ಕೆಲಸ ಮಾಡಿದ್ದು ಕಾಣುತ್ತದೆ.

"ತಮಿಳುನಾಡಿನಲ್ಲಿ ಈಗಲೂ ಸಿದ್ಧರ ಪಂಗಡವಿದ್ದು, ಅವರು ರೇವಣಸಿದ್ದರ ಗುರುಗಳಾದ ಆಗಸ್ತ್ಯರನ್ನು ತಮ್ಮ ಆದಿ ಗುರುವೆಂದು ಪೂಜಿಸುವರು. ಈ ಸಿದ್ಧರು ಶೈವರಾಗಿದ್ದು, ಜಾತಿ, ಮತ, ಭೇದಗಳನ್ನು ಮೀರಿದವರು. ಇವರು ರಚಿಸಿದ ಹಾಡುಗಳಿಗೆ ಸಿದ್ಧರ ಪದಗಳೆಂದು ಕರೆಯಲಾಗುತ್ತದೆ. ಇಂದಿಗೂ ಸಿದ್ಧರ ಪದಗಳನ್ನು ಬೀದಿಯಲ್ಲಿ ಹಾಡಿಕೊಂಡು ಹೋಗುತ್ತಾರೆ. ಸಿದ್ಧರಲ್ಲಿಯೇ ೧. ಹಾವಾಡಿಗ ಸಿದ್ಧರು ೨. ಒಳಪಿಶಾಚಿ ಸಿದ್ಧರು ೩. ಅಳುಗಣ್ಣುಸಿದ್ಧರು ೪. ಬಟ್ಟಬಯಲ ಸಿದ್ಧರೆಂಬ ವಿಭಾಗಗಳು ಇಲ್ಲಿರುವುದು ಕಂಡುಬರುತ್ತದೆ."[೩]

ಶೈವಧರ್ಮದ ಅನುಯಾಯಿಗಳಾದ ಕಾಪಾಲಿಕ, ಕಾಳಾಮುಖ ಮತ್ತು ಸಿದ್ಧರು ಶಕ್ತಿಯ ಆರಾಧಕರು. ೧೧ನೇ ಶತಮಾನದಲ್ಲಿ ಶೈವ ಮತ್ತು ಬೌದ್ಧ ಧರ್ಮಗಳಲ್ಲಿ ಮಾತ್ರ ಕಂಡುಬಂದ ತಾಂತ್ರಿಕ ಪಂಥ, ಮುಂದೆ ಭಾರತದ ಎಲ್ಲಾ ಧಾರ್ಮಿಕ, ಪಂಥಗಳ ಆಚರಣೆಯಲ್ಲಿ ದಟ್ಟವಾಗಿ ಕಂಡುಬರುವುದನ್ನು ಗುರುತಿಸಬಹುದು. "ಯಾವುದೇ ಮೂಢನಂಬಿಕೆಯನ್ನು ಪೋಷಿಸದೆ ಪರಮಾನಂದವನ್ನೇ

ಗುರಿಯಾಗಿಟ್ಟುಕೊಂಡಿದ್ದ ಈ ಪಂಥಗಳು, ತಮ್ಮ ಸರಳ ಕಟ್ಟುಪಾಡುಗಳಿಂದ, ಆಚರಣೆಗಳಿಂದ ಎಲ್ಲರನ್ನೂ ಆಕರ್ಷಿಸತೊಡಗಿತು. ಮುಂದೆ ೧೮ನೇ ಶತಮಾನದ ಕರ್ನಾಟಕದ ತತ್ವಪದಕಾರನಾದಂಥ ಶಿಶುನಾಳ ಶರೀಫ್‌ಗೆ ಬ್ರಾಹ್ಮಣ ದೀಕ್ಷೆ ತೊಡಿಸಿ ವೇದ ಉಪನಿಷತ್ತುಗಳನ್ನೆ ಪ್ರಶ್ನಿಸಿ, ಧರ್ಮ ಸಂಘರ್ಷಕ್ಕೆ ಕಾರಣನಾದ ಗೋವಿಂದಭಟ್ಟ ಅಪ್ಪಟ ಶಾಕ್ತ. ಕಾಪಾಲಿಕ ತಾನು ಆರಾಧಿಸುವ ದೇವಿಯ ಕೃಪೆಯನ್ನು ಬೇಕಾದಾಗ, ಬೇಕಾದ ರೂಪದಲ್ಲಿ ಪಡೆಯಬಲ್ಲೆನೆಂಬ ವಿಶ್ವಾಸ ಹೊಂದಿದ. ಗೋವಿಂದ ಭಟ್ಟ ತಾಂತ್ರಿಕ ಸಂಪ್ರದಾಯವನ್ನು ಅನುಸರಿಸಿದ ಹಠಯೋಗಿ. ಲೌಕಿಕರ ಮಡಿ ಮೈಲಿಗೆಯನ್ನು ಧಿಕ್ಕರಿಸಿ ನಿತ್ಯ ಸೇವನೆಯ ಮದ್ಯ 'ಶಂಕರಿ' ಎಂಬ ಬಿಜಾಕ್ಷರ ನೀಡಿ, ಸಂಪಾದಿಸಿದ ಶಕ್ತಿಯನ್ನು ಸದುದ್ದೇಶಕ್ಕೆ ಮಾತ್ರ ಬಳಸುತ್ತಿದ್ದ."[೪] ಶಿಶುನಾಳ ಶರೀಫ್‌ರ ಈ ಹಾಡಿನಲ್ಲಿ "ನಾಕಂಡೆನೀಗ ಶಾಕಂಬರಿಯೆ| ಶಾಂಬವಿ ಶಂಕರಿಯ| ನಾಕದಿಂದಿಳಿದು ಭೂತಳದಿ ಭಕ್ತರನು| ನೀ ಕಾಯಬೇಕೆಂದೆನುತ ವಿಲಾಸದಿ|"[೫] (ಶಿ.ಸ.ಪ.೨೫) ಇಂಥಲ್ಲಿ ತಮಿಳುನಾಡಿನ ಸಿದ್ಧರಿಗೂ ಕನ್ನಡದ ತತ್ವಪದಕಾರರಿಗೂ ಎಂತಹ ಹೋಲಿಕೆ ಇದೆ ಎಂಬುದನ್ನು ಗಮನಿಸಬಹುದು.

೧೩ನೇ ಶತಮಾನದ ಹರಿಹರನ ರಗಳೆಗಳು ಹಾಡಿನ ಮಟ್ಟದಲ್ಲಿ ಪ್ರಧಾನತೆಯನ್ನು ಸ್ಥಾಪಿಸಿಕೊಂಡವು. ಹರಿಹರನಿಗೆ ತಮಿಳು, ಭಕ್ತರ ಬಗ್ಗೆ ಅಪಾರವಾದ ವಿಶ್ವಾಸವಿತ್ತು. ಆದ್ದರಿಂದ ಅರವತ್ತೂಮ್ರು ಜನ ನಾಯನ್ಮಾರರಂಥ, ಅನುಭಾವಿ ಸಂತರೊಂದಿಗೆ ಅಷ್ಟೇ ಅಧಿಕಾರಯುತವಾಗಿ ರಗಳೆಗಳ ಮೂಲಕ ಮಾತನಾಡಿದನು. ನಾಯನ್ಮಾರರಂಥ ಆಳ್ವಾರರ ಹಾಡುಗಳು ಕರ್ನಾಟಕದಲ್ಲೂ ಖ್ಯಾತವಾಗಿ ೧೨ನೇ ಶತಮಾನದ ವಚನಕಾರರ ಜೀವನಕ್ಕೆ ಆದರ್ಶವಾಗಿದ್ದವು. ಇವರ ಕ್ರಾಂತಿಕಾರಕ ವಿಚಾರಗಳು ಕರ್ನಾಟಕದ ಶರಣರ ಧಾರ್ಮಿಕ ಆಂದೋಲನಗಳು ಒಂದೇ ಆದ ಸಾಮ್ಯತೆಯನ್ನು ನೋಡುತ್ತೇವೆ. ಸುರಂಗ ಕವಿ (೧೮ನೇ ಶತಮಾನ), ವೀರಭದ್ರ, ಚತುರ್ಮುಖ ದೊಮ್ಮರ, (೧೬ನೇ ಶತಮಾನ) ಇವರೆಲ್ಲಾ ತಮಿಳು ಭಕ್ತ ಕವಿಗಳನ್ನು ದೇಶೀ ಕಥನ ಮಾದರಿಗಳಂತೆ ರೂಪಿಸಿದ್ದನ್ನು ನೋಡಬಹುದು. ಇಲ್ಲಿನ ತತ್ವಪದಕಾರರು ಮುಂದಿನ ಸಮುದಾಯದ ತತ್ವಪದಕಾರರಿಗೆ ಬಂಧುತ್ವ ಋಣವನ್ನು ಅರ್ಪಿಸಿದರು. ತಮ್ಮ ಪರಂಪರೆಯ ನಾದವನ್ನು ಸಂರಚನಾತ್ಮಕವಾಗಿ ತತ್ವಪದ ಸಂಸ್ಕೃತಿಯೊಂದಿಗೆ ಬೆಸೆದರು.

ಕರ್ನಾಟಕದಲ್ಲಿ ೧೨ನೇ ಶತಮಾನದ ವಚನಗಳನ್ನು ಲಯ ಮಾದರಿಯ ಹಾಡುಗಳೆಂದು ಕರೆಯುವುದು ಬಲು ಸೂಕ್ತ. ವಚನ ಕಾಲದ ಶರಣರಿಗೆ, ಸಂಗೀತ ಜ್ಞಾನದ ಪಾಂಡಿತ್ಯವಿತ್ತು. ಅವರ ಸುಪ್ತ ಸಂವೇದನೆಯನ್ನು ತಿಳಿಯಲು ವಚನಗಳಲ್ಲಿ ಬರುವ ಸಂಗೀತದ ರಾಗಗಳ ಪ್ರಸ್ತಾಪವನ್ನು ಗಮನಿಸಬೇಕು. ಒಂದು ಕಡೆ ಬತ್ತೀಸರಾಗದ ಪ್ರಸ್ತಾಪವಿದೆ. ವಾದ್ಯಗಳನ್ನು ಪ್ರತೀಕವಾಗಿ ಬಳಸಿದ ಉದಾಹರಣೆಗಳು ಕಂಡುಬರುತ್ತವೆ. "ಎನ್ನ ಕಾಯವ ದಂಡಿಗೆ ಮಾಡಯ್ಯ| ಎನ್ನ ಶಿರವ ಸೋರೆಯ ಮಾಡಯ್ಯ| ಬತ್ತೀಸ ರಾಗವ ಹಾಡಯ್ಯ | ಕೂಡಲ ಸಂಗಮ ದೇವ.[೬] ಇಲ್ಲಿ 'ಹಾಡಯ್ಯಾ' ಎನ್ನುವುದು

ಪದದ ಸಂವಹನ ಕ್ರಿಯೆಯಾಗಿದೆ. ತನ್ನ ಹಿಂದಿದ್ದ ಚಂಪೂವಿನ ಭಾಷಿಕ ಬದಲಾವಣೆಯ ಪ್ರಕ್ರಿಯೆ ಎಂದು ಗುರುತಿಸಬಹುದು.

“ಶ್ರೀಗುರು ಪೇಳ್ದ ಮಹಾವಿದ್ಯೆಯೊಳು | ರಾಗಿಪ ಶಿಷ್ಯನ ಬೋದಾಬ್ದಿಯೊಳ್” ಎನ್ನುವ ತತ್ವಪದ, ವಚನಕಾರರ ತತ್ವಗಳನ್ನು ನಿರೂಪಿಸುತ್ತದೆ. ರಾಗ ಮತ್ತು ಸಂಗೀತ ಮಾಧ್ಯಮದ ಹಾಡಿನೊಂದಿಗೆ ಗ್ರಹಿಸಬೇಕಾಗುತ್ತದೆ. ಆದ್ದರಿಂದ ಸಂಗೀತದ ಧರ್ಮವು ಪ್ರಧಾನ ತತ್ವಕ್ಕೆ ಬದ್ಧವಾಗುತ್ತದೆ. ಇವು ತಮ್ಮ ಲಯದ ಕಸುವಿನಿಂದ ಪುನರ್ ಸೃಷ್ಟಿಗೊಂಡಂಥವುಗಳು. ವಚನಕಾರರ ಸಂಗೀತ ಪರಿಕರಗಳನ್ನು ಭೀಮ ಕವಿಯ ಬಸವಪುರಾಣ ಕಾವ್ಯದಲ್ಲಿ “ವೀಣೆಯ ಬಾರಿಸಿ ಸಕಳೇಶ್ವರರಿಗೊಂದು ಗೀತವ ಪಾಡೆನೆ? ಸಕಳೇಶ್ವರ ಶರಣನೆಂದು ವೀಣಾವಾದ್ಯವ ಬಾರಿಸುವ ಆಡಿ ಹಾಡುವ ಸಖನೆಂದು ಒಪ್ಪಿವಿರೋ” ಎಂದು ಶ್ರೀಶೈಲದಲ್ಲಿ ಹೇಳಿದ್ದಾರೆ. ಸಕಳೇಶನು ಶ್ರೇಷ್ಠ ಹಾಡುಗಾರನೆಂದು ಒಪ್ಪಿಕೊಳ್ಳಲೇಬೇಕು. ಭೀಮಕವಿಯು ಬಸವಪುರಾಣ ಕಾವ್ಯದಲ್ಲಿ ಹಲವಾರು ವೀಣೆಗಳ ಪ್ರಸ್ತಾಪವನ್ನು ಕೊಡುವನು. ಬ್ರಹ್ಮವೀಣೆ, ಲಾವಣ್ಯವೀಣೆ. ಕೈಲಾಸವೀಣೆ, ಕೂರ್ಮ ವೀಣೆಗಳನ್ನು ಸಕಳೇಶ ನುಡಿಸುತ್ತಿದ್ದನೆಂಬ ವಿವರ ಬರುತ್ತದೆ.”[೭]

ಆದ್ದರಿಂದ ವಚನಗಳು ಅನುಭಾವಿಯುಗದಲ್ಲಿ ‘ದೇಸೀ’ ಮಟ್ಟನಿಂದ ಪ್ರಾರಂಭವಾದ ಗೀತ ಗಳೆಂದು ಗುರುತಿಸಬೇಕಾಗುತ್ತದೆ. ವಚನಕಾರರು ಶಿಷ್ಟ ಸಮಾಜದ ಒಳಗೆ ಹಾಡಿದರೆ, ತತ್ವಪದಕಾರರು, ಶ್ರಮಿಕ ಸಮಾಜದೊಳಗೆ ಹಾಡಿದರು. ತಾಳ, ದಮ್ಮಡಿ, ಏಕತಾರಿ, ತುಂತುಣಿ ವಾದ್ಯಗಳನ್ನು ತತ್ವಪದ ಹಾಡುಗಳಲ್ಲಿ ಬಳಸಿದ ನಿದರ್ಶನಗಳು ದೊರಕುತ್ತವೆ. ಈ ತತ್ವಪದಕಾರರು ಗ್ರಾಮೀಣ ಜನರ ಸಾಮೂಹಿಕ ಸಂಕಥನದ ಪ್ರತೀಕವಾಗಿದ್ದಾರೆ. ಅವರು ಜನಮುಖಿ ಹಾಡಿನ ಸ್ಥಾನದಲ್ಲಿ ಸ್ಥಾನ ಪಡೆದಿರುವುದನ್ನು ಗುರುತಿಸಬಹುದು.

“ಬಸವಣ್ಣನ ಕಾಯಕದ ಕಾಲದಲ್ಲಿ ವಚನಗಳನ್ನು ಮೌಖಿಕವಾಗಿ ಹಂಚಿಕೊಳ್ಳುವುದು ಕಂಡುಬರುತ್ತದೆ. ಅಂದರೆ ಅವುಗಳ ತತ್ವವನ್ನು ಹೇಳುತ್ತಿದ್ದರು. ಕೇಳುವ ಸಂಸ್ಕೃತಿಯ ನೀತಿಗೆ ವಚನಗಳು ರೂಪಕವಾಗಿ ಮಾರ್ಪಟ್ಟಿದ್ದವು. ಹೀಗಾಗಿ ಕೆಳ ಸಮುದಾಯಗಳು ಮೌಖಿಕ ಪರಂಪರೆಯ ಅಭಿವ್ಯಕ್ತಿ ಸಾಧ್ಯತೆಯನ್ನು ತಾತ್ಕಾಲಿಕವಾಗಿ ವಚನಗಳ ಶೈಲಿಯಲ್ಲಿ ಕಂಡುಕೊಂಡಿದ್ದವು. ಕಾಯಕ ತತ್ವಕ್ಕೆ ಹೊಂದುವಂತಹ ಈ ರಚನೆಗಳು ಕೆಳಸಮುದಾಯಗಳ ನೀತಿಯಿಂದಲೇ ಬಂದವುಗಳಾಗಿದ್ದವು. ಒಂದರ್ಥದಲ್ಲಿ ವಚನ ಚಳುವಳಿಯು ದೇಶೀಯ ಪೂರ್ವ ಮಾದರಿಗಳ ಪರಿಷ್ಕೃತ ರೂಪವಾಗಿತ್ತು. ವಚನಗಳು ಹಾಗಾಗಿಯೇ ಪರಿಷ್ಕೃತ ಜಾನಪದ ಅಭಿವ್ಯಕ್ತಿಯೇ ಆಗಿದ್ದವು.”[೮] ಏಕೆಂದರೆ ವಚನಗಳಲ್ಲಿ ಕಂಡುಬರುವ ರೂಪಕ, ಪ್ರತಿಮೆ, ದೃಷ್ಟಾಂತಗಳನ್ನು ಮುಕ್ತ ಮನಸ್ಸಿನಿಂದ ಗ್ರಹಿಸಲು ಸಾಧ್ಯವಾಗುವುದು. ವಚನಕಾರರ ತಾತ್ವಿಕ ಜೀವನಕ್ಕೂ ತತ್ವಪದಕಾರರ ಜಾನಪದ ಜೀವನಕ್ಕೂ ಅವಿನಾಭಾವ ಸಂಬಂಧಗಳಿರುವುದನ್ನು ಕಾಣಬಹುದಾಗಿದೆ.

ಕಿನ್ನರಿ ಬೊಮ್ಮಯ್ಯನ ಕಾಯಕವೇ ಸಂಗೀತ ಮತ್ತು ನೃತ್ಯ. ಇವನ ವೇಷ ಮುಂಜುಟ್ಟು, ಹಣೆಗೆ ವಿಭೂತಿ, ಕಿವಿಯಲ್ಲಿ ಕೆಂದಳಿರ ಧರಿಸಿ, ಕಾವಿಯ ಕಪ್ಪಡವನ್ನುಟ್ಟು ಎಡದ ಪಾದದಲ್ಲಿ ಅಂದುಗೆ, ಬಲದ ಪಾದದಲ್ಲಿ ಗೆಜ್ಜೆ, ದಕ್ಷನ ಕುರಿ ತಲೆಯ ಕೋಡಿನ ತೆರದಲ್ಲಿದ್ದ ಕೊಂಬು ಎಡಗೈಯಲ್ಲಿ, ಬಲಗದುಗೆ ಬಲಗೈಯ್ಯಲ್ಲಿ ಹಿಡಿದು ತಿರುಗುತ್ತಾ ಮುಗುಳ್ನಗುತ್ತಾ ಶಿವಭಕ್ತರ ಮನೆಗೆ ಭೃಂಗೀಶನಂತೆ ಕೋಡಂಗಿಯಾಟವನಾಡುತ್ತಾ ಇದ್ದವನು ಕಿನ್ನರಿ ಬೊಮ್ಮಯ್ಯ. ಜೋಗಿ ಸಂಪ್ರದಾಯದ ಮೂಲಕ ಕೆಳ ಸಮುದಾಯದ ಜನರಿಗೆ ಹತ್ತಿರವಾಗುವುದನ್ನು ಗುರುತಿಸಬಹುದು. ತಾಳ ಮತ್ತು ದಮ್ಮಡಿಗಳ ಮೂಲಕ ಹಾಡು ಹೇಳುವ ತತ್ವಪದಕಾರರೂ ಇಂಥಾ ವಚನಕಾರರ ಪ್ರೇರಣೆ ಪಡೆದಿರಲೇಬೇಕು.

ಸಂಗೀತ ವಿದ್ಯೆಯು ಸಂಗಡವೇ ಬಂದದ್ದು | ಲಿಂಗಿಗಳ ಹಿರಿಮೆ ಹಾಡುತಲಿ | ಕಲ್ಯಾಣ ಲಿಂಗವ ಮಂಟಪವ ಕೂಡಿಪನು | ಶಿವಕೋಟಿ ಕಿನ್ನರ | ಭವದಲ್ಲಿ ನುಡಿಸುತಲಿ | ಎಂದು ಜನಪದರು ಕಿನ್ನರಿ ಬೊಮ್ಮಯ್ಯನನ್ನು ಕುರಿತು ಹಾಡು ಕಟ್ಟಿದರು. ಕಿನ್ನರಿ ಬ್ರಹ್ಮಯ್ಯನ ಪ್ರೇರಣೆ, ತತ್ವಪದಕಾರರಿಗೂ ಆಗಿರಲೇಬೇಕು. ಮೋಟ್ನಳ್ಳಿ ಹಸನ್‌ಸಾಬ್‌ನ ಈ ತತ್ವಪದ "ಇವ ಎಂಥಾ ಗಾರುಡಿಗ ಹಾನೇ ಅವ್ವಯ್ಯ| ನೋಡೇ ಇವ ಎಂಥಾ ಗಾರುಡಿಗ | ತಂತು ತಿಳಿದು ಇವನ ಹಂತೇಕ ಹೋದರೆ | ಪಂಥ ಗೆಲಿಸುವನು."[೯]

ತಾಳ, ದಮ್ಮಡಿ ತಂತಿವಾದ್ಯಗಳು ತತ್ವಪದಕಾರರ ಸಂಗೀತ ಪರಿಕರಗಳಾಗುವವು. ತಂತಿವಾದ್ಯ ಚರ್ಮ ವಾದ್ಯಗಳ ಹಿನ್ನೆಲೆಯಲ್ಲಿ ಹಿಮ್ಮೇಳದ ಆಶ್ರಯದಲ್ಲಿ ಪ್ರಾರ್ಥನೆಯಾಗುವುದು, ಭಜನೆಯಾಗುವುದು, ತತ್ವಪದವಾಗುವುದು. ವಚನಕಾರರ, ತತ್ವಪದಕಾರರ ಬದುಕು ಹಾಗೂ ಅವರ ಧಾರ್ಮಿಕ, ಸಾಮಾಜಿಕ, ಆಚರಣೆಗಳನ್ನು ನೋಡಿದಾಗ ತತ್ವಪದ ಸಂಸ್ಕೃತಿಯ ಮತ್ತು ವಚನ ಸಂಸ್ಕೃತಿಯಲ್ಲಿ ಹಲವಾರು ಗುಣಾತ್ಮಕ ಸಾಹಚರ್ಯಗಳು ಕಾಣುತ್ತವೆ. ಇವರು ರೂಪಿಸಿಕೊಂಡ ಮಾಧ್ಯಮ ಹಾಡೆಂಬುದರಲ್ಲಿ ಅನುಮಾನವೇ ಇಲ್ಲ.

ಕೀರ್ತನೆಗಳು ಹರಿದಾಸರಿಂದ ರೂಪಿತವಾದವುಗಳು. ಹರಿದಾಸರಿಗೆ ಹರಿಗೆ ದಾಸರಾಗುವ ಅವಕಾಶ ಲಭ್ಯವಾದರೆ, ತತ್ವಪದಕಾರರು ಒಂದು ನಿರ್ದಿಷ್ಟವಾದ ದೇವರಿಗೆ ದಾಸರಾದ ಘಟನೆಗಳು ಯಾವ ತತ್ವಪದಕಾರರ ಜೀವನದಲ್ಲಿ ದೊರಕುವುದಿಲ್ಲ. ಕೆಲ ತತ್ವಪದಕಾರರು ತಮ್ಮ ಜಾತಿಯನ್ನು ಧಿಕ್ಕರಿಸಿದಂತಹ ಘಟನೆಗಳು ೧೪ನೇ ಶತಮಾನದ ಕೀರ್ತನಕಾರರಿಂದ ಕಲಿತ ಹೊಸ ಪಾಠವಾಗಿರಬೇಕು. ಖೈನೂರು ಕೃಷ್ಣಪ್ಪನ ಜೀವನವೇ ಉದಾಹರಣೆಯಾಗಿದೆ. "ಕಡಕೋಳು ಮಡಿವಾಳಪ್ಪನನ್ನು ಗುರುವಾಗಿ ಸ್ವೀಕರಿಸಿದ ಕೃಷ್ಣಪ್ಪನು ಅಂದಿನ ಪುರೋಹಿತರಿಗೆ ಕಂಟಕ ವ್ಯಕ್ತಿಯಾದನೆಂದು ಸ್ಮರಿಸಬಹುದು. ತಾಯಿಯ ಶವಸಂಸ್ಕಾರದ ವಿವಾದದಲ್ಲಿ ಬ್ರಾಹ್ಮಣ್ಯತ್ವವನ್ನು ತೊರೆದು ಕಡಕೋಳು ಮಠಕ್ಕೆ ಮರಳಿ ಬಂದ ನಿದರ್ಶನಗಳು ಸ್ಪಷ್ಟವಾಗುತ್ತವೆ. ಕೃಷ್ಣಪ್ಪನಿಗೆ ಅಂದಿನ ಸಮಾಜ ವಿರೋಧವಾದರೆ ಮತ್ತೊಂದೆಡೆ ಮೌಲ್ಯಗಳ ಆಂತರಿಕ

ಘರ್ಷಣೆಗಳು ಮುಂದೆ ಕೃಷ್ಣಪ್ಪನನ್ನು ಅಂತರ್ ಮುಖಿಯಾಗಿಸಿದ್ದು ಕಂಡುಬರುತ್ತದೆ. ಜೀವನದಲ್ಲಿ ನಿರಾಶೆ ಹೊಂದಿ ಜಲಸಮಾಧಿಯಾದರೆಂದು ಗುರುತಿಸಬಹುದು.''[೧೦]

ಕನಕದಾಸ, ಪುರಂದರದಾಸರ ಹಾಡುಗಳಲ್ಲಿ ಜಾತಿ ವ್ಯವಸ್ಥೆಯ ಸಾಮಾಜಿಕ ನಿಯಮಗಳ ಧಿಕ್ಕರಿಸುವಿಕೆಯನ್ನು ಕಾಣಬಹುದು. ''ಕುಲ ಕುಲ ಕುಲವೆನ್ನುತಿಹರು, ಕುಲವಾವುದು ಸತ್ಯ ಸುಜನರಿಗೆ'' ೧೮ನೇ ಶತಮಾನದ ರಾಯಚೂರಿನ ಗೋನವಾರದ ರಾಮದಾಸನ ಪದ್ಯವು - ಕುಲವಂತನೇ ನೀನು ಎಲೋ ಪರಮಾನಂದ ಕುಲಹೀನನೇ ನಾನು ಪೇಳೆಲವೋ ಸ್ವಾಮಿ. ಹೊಲೆಯ ಪೆದ್ದಯ್ಯನಿಗೆ ಒಲಿದವನ ಆಳಾದಿ, ಕುಲದಿ ಮಾದಿಗರ ಹರಳಯ್ಯನ ಮನೆಯಲುಂಡಿ''. ಕುಲದ ಪ್ರಸ್ತಾಪದಲ್ಲಿ ವಚನಕಾರನಾದ ಹರಳಯ್ಯನ ಪ್ರಸ್ತಾಪವನ್ನು ರಾಮದಾಸರು ತೆಗೆದುಕೊಂಡಿದ್ದರೆ, ದಾಸರು ತಮ್ಮ ಬಹುರೂಪಿ ವಿಚಾರಗಳನ್ನು ತಮ್ಮ ಪರಂಪರೆಯ ಅಗತ್ಯತೆಗೆ ಅನುಗುಣವಾಗಿ ಮೌಲ್ಯಗಳನ್ನು ಮುಂದುವರಿಸಿಕೊಂಡು ಹೋಗುವುದು ಒಂದಾದರೆ, ಕಾಲದ ಜೊತೆಗೆ ಒಪ್ಪಂದವನ್ನು ರೂಪಿಸಿಕೊಂಡು ಜನಪದ ಸಮಾಜದೊಂದಿಗೆ ಏಕವಾಗುವುದು ಒಪ್ಪುವಂತವುಗಳು. ಇವು ಭಕ್ತಿಕಾಲದ ಸಂತರ ಸಾಮೂಹಿಕ ಸಂಕಥನಗಳ ಜವಾಬ್ದಾರಿಯಾಗಿರಬಹುದೆ? ದಾಸರು ಕೀರ್ತನೆಗಳಲ್ಲಿ ಜಾನಪದ ವಾದ್ಯಗಳ, ಪರಿಕರಗಳ ಕಲಾತ್ಮಕಬಳಕೆಯನ್ನು ಗುರುತಿಸಬಹುದು.

ಭಾಗವಂತಿಕೆ ಮೇಳವು ಜಾನಪದ ಮತ್ತು ತತ್ವಪದಗಳ ಆಶಯಗಳನ್ನೇ ವ್ಯಕ್ತಪಡಿಸುತ್ತದೆ. ಈ ಮೇಳದವರು ವಿಷ್ಣುವಿನ ಹತ್ತು ಅವತಾರಗಳನ್ನು ನಿರೂಪಿಸುತ್ತಾರೆ. ರಂಗನಾಥ, ಗರುಡಾಳ, ಬೇಟೆರಾಯ, ಹನುಮಂತ ಮೊದಲಾದ ದೈವಗಳ ಮಹಿಮೆಯನ್ನು ಕೊಂಡಾಡುತ್ತಾರೆ. ಹತ್ತು ಅವತಾರಗಳ ಕೊನೆಯ ಪದ್ಯದಲ್ಲಿ ಡೊಳ್ಳು, ತಾಳ ಮತ್ತು ಹಾಡುಗಾರರನ್ನು ಪ್ರಸ್ತಾಪಿಸುತ್ತಾರೆ''. 'ಡೊಳ್ಳಿನ ಮೇಲ್ ಕೈಯ ಬರಮಪ್ಪ ಹಾಕ್ಯಾನ, ತಾಳವ ಶಿವನಪ್ಪ ತಟ್ಯಾನ, ಒಳ್ಳೊಳ್ಳೆ ಪದಗಳ ಹನುಮಪ್ಪ ಹಾಡ್ಯಾನ, ಚೆಲುವ ಕನಕಪ್ಪ ಕುಣಿದಾನು.'

ಗ್ರಾಮೀಣ ಡೊಳ್ಳುಮೇಳ ಕಲಾವಿದರನ್ನು ಕುರಿತಾಗಿ ಹೇಳಿದಂತಿದೆ ಈ ಸಾಲು. ಇಲ್ಲಿನ ಭಾಷಾ ಗ್ರಹಿಕೆಯು ಜಾನಪದ ಗೀತೆಯಂತೆ ನಿರೂಪಣಾ ಮಾದರಿಯಲ್ಲಿ ಕಾವ್ಯತ್ವವನ್ನೂ ಕಟ್ಟಿಕೊಡುತ್ತದೆ. ಭಾಗವಂತಿಕೆ ಮೇಳಕ್ಕೆ ಪ್ರತಿಯಾಗಿ ತತ್ವಪದ ಮೇಳಗಳನ್ನು ಉದಾಹರಿಸಬಹುದು. ತತ್ವಪದ ಹಾಡುಗಾರರ ಮೇಳಗಳಲ್ಲಿ ವಚನಗಳಿಗಿಂತ ದಾಸರ ಹಾಡುಗಳನ್ನು ಹಾಡುವ ತತ್ವಪದಕಾರರ ತಂಡಗಳನ್ನು ನೋಡುತ್ತೇವೆ. ಪ್ರತಿ ಹಳ್ಳಿಗಳಲ್ಲಿ ಈ ತಂಡಗಳು ಸೋಮವಾರ, ಶುಕ್ರವಾರ ಹಾಗೂ ಅಮಾವಾಸ್ಯೆಯ ದಿನಗಳಲ್ಲಿ ಭಾವಪೂರ್ಣವಾಗಿ ಭಜನೆ ಮಾಡುವುದನ್ನು ಸ್ಮರಿಸಬಹುದು. ದಾಸರಲ್ಲಿಯೂ ಕೆಲ ಅನಕ್ಷರಸ್ಥರು ಮೌಖಿಕವಾಗಿಯೇ ಕೀರ್ತನೆಗಳನ್ನು ಹಾಡುತ್ತಿದ್ದಿರಬೇಕು. ಇದರಿಂದ ಹಲವಾರು ಪ್ರತಿಭಾವಂತ ದೇಸೀಯ ಕವಿಗಳು, ಕಲಾತ್ಮಕವಾಗಿ ಗಮಕ ಹಾಡಲು ಸಫಲರಾದರು. ಡಾ.ವೀರೇಶ ಬಡಿಗೇರರು ಹೇಳುವಂತೆ

''ಜನಪದರ ಮೌಖಿಕ ಸಂಸ್ಕೃತಿಗಿಂತ ಭಿನ್ನವಾದ ತೋಂಡಿ ಸಂಪ್ರದಾಯ ಹುಟ್ಟಿತು. ಈ ತೋಂಡಿ ಸಂಪ್ರದಾಯವು ಕನಕದಾಸರಲ್ಲಿ ಸ್ಪಷ್ಟವಾಗಿ ಗುರುತಿಸಲ್ಪಡುತ್ತದೆ.''[೧೧]

ಹರಿದಾಸರ ಹಾಡುಗಳು ತತ್ವಪದ ಸಂಸ್ಕೃತಿಯೊಂದಿಗೆ ಪುನರ್‌ಸೃಷ್ಟಿಗೊಂಡು, ಮೌಖಿಕ ಪ್ರಪಂಚದ ಅನುಸಂಧಾನದೊಂದಿಗೆ ಬೆಸೆದವುಗಳೆಂದು ಹೇಳಬೇಕಾಗುತ್ತದೆ. ಹರಿದಾಸರಲ್ಲಿಯೇ ಮುಖ್ಯರಾದಂತ ಶ್ರೀಪಾದರಾಯರ ಭ್ರಮರ ಗೀತೆಗಳು, ಗೋಪಿಗೀತೆಗಳು, ವೇಣುಗೀತೆಗಳು ಮುಖ್ಯವಾದರೆ, ಕೀರ್ತನ ಪ್ರಕಾರದಲ್ಲಿ ಸುಳಾದಿ, ಉಗಾಭೋಗ, ವೃತ್ತನಾಮಗಳು ಶಾಸ್ತ್ರೀಯ ಚೌಕಟ್ಟನ್ನು ರೂಪಿಸುತ್ತವೆ. ಪಲ್ಲವಿ ಮತ್ತು ಅನುಪಲ್ಲವಿಯೊಂದಿಗೆ ಆಧ್ಯಾತ್ಮದ ಒಲವನ್ನು ಪ್ರಕಟಿಸುತ್ತವೆ. ದಾಸರ ರಚನಾವಿನ್ಯಾಸಗಳು ಸಂಗೀತದೊಂದಿಗೆ ತತ್ವಪದಕಾರರ ಅನುಕರಣೆಯೊಂದಿಗೆ ಸಂಬಂಧವಿದೆಯೆಂದು ಒಡೆದು ತೋರುತ್ತದೆ. ''ಅಳುತಿದ್ಯ ಕಂದ | ಅಳುತಿದ್ಯಾ ನೀನು | ತಿಳಿಯದೆ ಮರ್ತ್ಯಕೆ ಬಂದೆನೆಂದು | ಮಾಯದ ತೊಟ್ಟಿಲೊಳು| ಕೈಕಾಲು ಒತ್ತುತಾ | ಮೋಹದ ಒಂಟಿಯೊಳು ಹೊರಳಾಡುತ | ಜೀವ ಮನಸು ಎಂಬ | ತಗಣೆ ಉಂಗಟಕ ಹತ್ತಿ | ದೇಹಕ್ಕೆ ಎಳ್ಳಷ್ಟು ಸುಖವಿಲ್ಲವೆಂದು|''[೧೨] ತತ್ವಪದಕಾರ ತನ್ನ ಸಂಗೀತದ ಹಂಬಲದೊಂದಿಗೆ ಮನುಷ್ಯನ ಆತ್ಮಕ್ಕೆ ಎಚ್ಚರಿಕೆ ಕೊಡುವುದಾಗಿದೆ. ಪ್ರತಿ ತತ್ವಪದಕಾರ ತನ್ನ ಮೌಲಿಕ ವ್ಯಕ್ತಿತ್ವವನ್ನು ಹರಿದಾಸ ಪಂಥದಲ್ಲಿ ತಾನು ಗುರುತಿಸಿಕೊಳ್ಳಬೇಕೆಂದು ಬಯಸುತ್ತಾನೆ. ಶಿಷ್ಟವರ್ಗದವರೊಂದಿಗೆ ಸ್ಪರ್ಧಾ ಮನೋಭಾವವವನ್ನು ರೂಪಿಸಿಕೊಳ್ಳುತ್ತಾನೆ. ಶಿಷ್ಟ ಹರಿದಾಸರ ಭಾವುಕ ಭಕ್ತಿಯು ದೇವರಿಗೆ ದಾಸನಾಗುವ, ಒಂದಾಗುವ ಬೆಸುಗೆ ಈ ತರಹ ವ್ಯಕ್ತವಾಗುತ್ತದೆ.

''ಒಲ್ಲೆನವ್ವಾ ನನ್ನ ನಲ್ಲ ಬಾರದಿರೆ
ತನು ಹೊರಯನೊಲ್ಲೆನವ್ವಾ
ಹಾರ ಕೊರಳಿಗೆ ಭಾರ ಹೂವಿನ
ಭಾರ ಸೈರಿಸಲಾರೆನೆ?''[೧೩]

ಈ ಹಾಡು ಮುಖ್ಯವಾಗಿ ಕೇಳು ಸಂಸ್ಕೃತಿಯ ದಾರ್ಶನಿಕ ಸಂಬಂಧಗಳನ್ನು ನಮಗೆ ಒಪ್ಪಿಸುತ್ತವೆ. ಪ್ರಾಸ, ಲಯಯುತವಾದ ಶಬ್ದಗಳು ನಿಚ್ಚಳವಾಗಿ ನಮ್ಮ ಮುಂದೆ ನಿರೂಪಿಸುತ್ತಾ ಕವಿಯ ಅಭಿವ್ಯಕ್ತಿಯು ಸಮಕಾಲೀನ ಸಂವಹನದ ಧೋರಣೆಗಳು ಸಂರಚನಾತ್ಮಕವಾಗಿಯೇ ಪ್ರಕಟವಾಗುವುವು. ನಾದ ಮತ್ತು ಗೇಯಗುಣಗಳು ವಾಸ್ತವದಲ್ಲಿ ಮುಖಾಮುಖಿಯಾದ ಸಮರ್ಥನೆಯನ್ನು ಇಲ್ಲಿ ಕಾಣಬಹುದು.

ಹಾಡಿನ ಮೌಖಿಕತೆಯೆನ್ನುವುದು ಬರೀ ಒಂದು ಪ್ರದೇಶಕ್ಕೆ ಮಾತ್ರ ಸೀಮಿತವಾಗದೇ, ಅದು ಸಂತರಿಂದ ಸಂತರೊಂದಿಗೆ ದ್ವಿಗುಣ ಪ್ರಾಶಸ್ತ್ಯವನ್ನು ಪಡೆಯುತ್ತಾ ಸಾಗುತ್ತದೆ. ''ಅಂಬಿಗಾ ನಾ ನಿನ್ನ ನಂಬಿದೆ'' ಎಂಬ ಹಾಡು ವಚನಕಾರ್ತಿಯಾದ ಅಕ್ಕಮಹಾದೇವಿಯಿಂದ ಹಿಡಿದು, ದಾಸರು ಮತ್ತು ತತ್ವಪದಕಾರರಲ್ಲಿ ಪ್ರತಿಬಿಂಬಿತವಾಗುತ್ತದೆ. ಪುರಂದರದಾಸರಲ್ಲಿ ''ಅಂಬಿಗಾ ನಾನಿನ್ನ ನಂಬಿದೆ

ಜಗದಂಬಾರಮಣವು ನಿನ್ನ ನಂಬಿದೆ.'' ತತ್ವಪದಕಾರರಲ್ಲಿ ''ಹೊಳೆಯ ದಾಂಟಿಸು ಅಂಬಿಗರಣ್ಣಾ ನಿನ್ನ ಬೆಂಬಳಿಗೊಂಡು ನಾ ಬಂದ ಕಾಣ''(ವೀಣೆ ಗುರುಬಸವ.ಆರ್) ಆದ್ದರಿಂದ ''ಮೌಖಿಕತೆಯು ಮಧ್ಯಕಾಲೀನ ಸಾಹಿತ್ಯದಲ್ಲಿ ಭಕ್ತಿ ಪರಂಪರೆಯ ಭಾಗವಾಗಿ ರೂಪಕ ಮತ್ತು ನುಡಿಗಟ್ಟುಗಳನ್ನು ಯಾವ ಎಗ್ಗೂ ಇಲ್ಲದೇ ಬಳಸಿಕೊಳ್ಳುತ್ತವೆ. ಹೌದಪ್ಪಾ ಹೌದು ನೀನೇ ದೇವರು ಎನ್ನುವ ಹಾಡು ಶಿಶುನಾಳ ಶರೀಫ್ ಮತ್ತು ಕಡಕೋಳು ಮಡಿವಾಳಪ್ಪನವರಿಬ್ಬರಲ್ಲೂ ದೊರಕುತ್ತದೆ.''[೧೪] ಹಂಪೆಯ ಜಾತ್ರೆಯನ್ನು ತೋರಿಸುವ ಪವಾಡಗಳು ಅನೇಕ ತತ್ವಪದಕಾರರಲ್ಲಿ ಬರುತ್ತವೆ. ಆದ್ದರಿಂದ ಮೌಖಿಕತೆ ಎನ್ನುವುದು ಶಬ್ದಗಳ ಪುನರಾವರ್ತನೆಯೆಂದು ಪರಿಗಣಿಸದೆ ಸಮುದಾಯದ ಜನರ ಮೌಲಿಕ ಸಂಬಂಧವೂ ಆಗಿದೆ ಎಂದು ಗುರುತಿಸಬೇಕಾಗುತ್ತದೆ.

ದಾಸ ಪಂಥದ ಉದ್ದೇಶ ಮಾತ್ರ ಕೃಷ್ಣನಾಗಿದ್ದು; ನರಹರಿ, ಮುಕುಂದ, ಮುರಾರಿ ಎಂದು ವರ್ಣಿಸುತ್ತಾ ಹಾಡುವುದನ್ನು ಕಾಣುತ್ತೇವೆ. ''ಯಾರು ಭಗವಾನ್ ವಾಸುದೇವ ಕುರಿತು ಏಕಾಗ್ರ ಚಿತ್ತರಾಗುವರೋ ಯಾವನಲ್ಲಿ ಆಶೆ ಆಲೋಚನೆಗಳಿಲ್ಲವೋ ಅವನೇ ಉತ್ತಮೋತ್ತಮ ಭಾಗವತನೆಂದು ತಿಳಿದುಬರುತ್ತದೆ. ಭಾಗವತ ಸಂಸ್ಕೃತಿಯ ವಿವರ ಹೀಗಿದೆ. ಮೂರ್ತಿಪೂಜೆಗಳಿಂದ, ವ್ರತಾಚರಣೆಗಳಿಂದ, ಪುರಾಣ, ಪುಣ್ಯಕಥಾಶ್ರವಣಗಳನ್ನು ಪಾಲಿಸುವವನು ನಿಜವಾದ ಭಾಗವತನೆಂದು ಮೇಲಿನ ವಿವರಗಳಿಂದ ಗುರುತಿಸಬಹುದು.''[೧೫] ದಾಸರಲ್ಲಿ ಭಾಗವತ ಆಚರಣೆಗಳಿದ್ದರೆ, ತತ್ವಪದಕಾರರು ಆಚರಣೆಗಳನ್ನು ಬಿಟ್ಟಂಥವರು. ಆತ್ಮವೇ ದೈವವೆಂದು ಒಪ್ಪಿಕೊಂಡು ಸಾಮಾಜಿಕ ಬೋಧನೆ, ಮೂಢ ನಂಬಿಕೆಗಳ ಖಂಡನೆಗಳನ್ನು ವಿಸ್ತೃತವಾಗಿ ತಮ್ಮ ಹಾಡುಗಳಲ್ಲಿ ಬಳಸಿದ್ದನ್ನು ಗುರುತಿಸಬಹುದು. ಶರೀಫ್‌ರ ಜೀವನದ ಘಟನೆಗೆ ಸಂಬಂಧಿಸಿದಂತೆ.

> ''ಹಾಕಿದ ಜನಿವಾರವ ಸದ್ಗುರುನಾಥ| ಹಾಕಿದಾ ಜನಿವಾರವ
> ಹಾಕಿದ ಜನಿವಾರ ನೂಕಿದ ಭವಭಾರ ಬೇಕೆನುತಲಿ
> ಬ್ರಹ್ಮಜ್ಞಾನ ಉಚ್ಛರಿಸೆಂದ ''[೧೬] (ಶಿಶುನಾಳ ಶರೀಫ್)
> (ಇನ್ನೊಬ್ಬ ತತ್ವಪದಕಾರ)
> ''ಜಾತ ಹೊಲೆಯನೆಸುವವರೆ | ಮಾತನಾಡು ತಾವಿಲ್ಲ
> ನೀತಿ ಕುಲಭೇದಕೂ ಜಾತಿ ಅರಿಯೆ''[೧೭]

ಶರೀಫರು ವೈದಿಕ ಧರ್ಮದ ಪಾವಿತ್ರತೆಯನ್ನು ಮತ್ತು ಕುಲ ಸಂಪ್ರದಾಯದ ಸಾಧ್ಯತೆಗಳನ್ನು ತಮ್ಮ ಆಶಯಗಳಿಗೆ ತಕ್ಕಂತೆ ಸಂವಹನಗೊಳಿಸುವರು. ಅಂದರೆ ಒಂದು ಕಡೆ ಆಕ್ರೋಶ ಇನ್ನೊಂದೆಡೆ ನಮ್ರ ಚಿಂತನೆಯೊಂದಿಗೆ ಪ್ರಶ್ನಿಸುವರು. ಈ ಮೇಲಿನ ಘಟನೆ ಭಾಗವತಕ್ಕೆ ವಿರುದ್ಧ ಪ್ರತಿಕ್ರಿಯೆ ಎಂದು ಸ್ಪಷ್ಟವಾಗುತ್ತದೆ.

ಸಮೂಹ ಅಥವಾ ಪಂಥ ಅದರ ಭಾಷೆ ಸಮಾಜ ಮುಖಿಯೇ ಎಂಬ ಪ್ರಶ್ನೆ ಬರುತ್ತದೆ. ಏಕೆಂದರೆ ಶಿಷ್ಟರ ಸಂವಹನಕ್ಕಿಂತ ಅನಕ್ಷರಸ್ಥರ ಸಂವಹನವು ಬಹಳ ಮುಖ್ಯವಾಗುತ್ತದೆ. ಇವುಗಳು ಓದುವ ಪಠ್ಯಗಳಲ್ಲ. ಹಾಡುವ ಪಠ್ಯಗಳಾಗಿ ಜನಮನ್ನಣೆಗಳಿಸಿದ್ದನ್ನು ಗುರುತಿಸಬಹುದು. ಅವರು ಜನಪದ ಸಂಸ್ಕೃತಿಯ ಶ್ರಮಿಕರು ಮತ್ತು ಮುಗ್ಧ ಭಾವುಕ ಹಾಡುಗಾರರೆಂದು ಹೇಳಬಹುದು. "ಕುರಿತೋದದೆಯಂ ಕಾವ್ಯ ಪ್ರಯೋಗ ಪರಿಣತ ಮತಿಗಳ್ - ಸಶಬ್ದವಾಗಿ ಓದುವುದು, ಅಂದರೆ ಗಮಕ, ಕೀರ್ತನೆ, ಹಾಡು ಪ್ರವಚನ ಇತ್ಯಾದಿಗಳ ಮೂಲಕ ಸಶಬ್ದವಾಗಿ ಕೇಳುವಂಥ ಪಠ್ಯಗಳೆಂದು ಹೇಳುವರು."[೧೮] ಓದುವ ಮತ್ತು ಕೇಳುವ ತಾತ್ವಿಕತೆಗಳು ತತ್ವಪದಕಾರರ ಜೀವನದಲ್ಲೂ ತಮ್ಮ ಸಂಬಂಧಗಳನ್ನು ರೂಪಿಸಿಕೊಂಡಿದ್ದವು. ಇಲ್ಲಿಯ ಆಧಾರ ಹೀಗಿದೆ, 'ಘನಮಠಾರ್ಯರು' ಚಿಕ್ಕವರಾಗಿದ್ದಾಗ ದೋರವಾಡ ಗ್ರಾಮದ ಪೆದ್ದ ಮಠಕ್ಕೆ ಅನೇಕ ಭಕ್ತರು ಓದುವವರು ಮತ್ತು ಕೇಳುವವರು ಬರುತ್ತಿದ್ದರೆಂಬ ಪ್ರಸ್ತಾಪ ಬರುತ್ತದೆ. ಇದು ಸಾಮೂಹಿಕ ಚಿತ್ತಶುದ್ಧಿಯೊಂದಿಗೆ ವಿಚಾರ ವಿನಿಮಯದ, ಸಂಮಿಶ್ರರೂಪ ಪ್ರತಿಕ್ರಿಯೆಯೊಂದಿಗೆ ಪ್ರಕಟವಾಗುತ್ತದೆ. ಅವರು ಶ್ರಮಿಕ ರೈತನೆಂಬುದರಲ್ಲಿ ಅನುಮಾನವೇ ಇಲ್ಲ. ಈ ಕೇಳಿಸಿಕೊಳ್ಳುವ ಸ್ವಭಾವವು ತನ್ನ ಸುತ್ತಲಿನ ಸಮಾಜದ ಜೊತೆಗೆ ಇತರರೊಂದಿಗೆ ಸಂಬಂಧ ಹೊಂದುವುದು ಎಂದಾಗುತ್ತದೆ. ಅದು ತತ್ವಪದಕಾರನ ಮನಸ್ಸಿನ ಸ್ಥಿತ್ಯಂತರ ಮತ್ತು ಸಾಧನೆ ಎಂದು ಗುರುತಿಸಬೇಕಾಗುತ್ತದೆ.

## ೨.೨. ಕಾವ್ಯರೂಪದ ಹಾಡುಗಳು

ಕಾವ್ಯ ತಾನು ಹುಟ್ಟಿಕೊಂಡ ಕಾಲಕ್ಕೆ ಇರುವ ಪಠ್ಯ ಹೇಗಿದೆಯೋ? ಅದನ್ನು ವಾಚಿಸುವ ಕಾಲಕ್ಕೂ ಪಠ್ಯವಾಗಿದ್ದು ತಿಳಿದು ಬರುತ್ತದೆ. ಮಾರ್ಗ ಪಠ್ಯವು ತನ್ನ ಸ್ವಂತಿಕೆಯನ್ನು ಉಳಿಸಿಕೊಳ್ಳಲು ಸೋತಾಗ ದೇಸೀ ಪಠ್ಯಗಳು ಆ ಸ್ಥಾನವನ್ನು ತುಂಬಿದ್ದನ್ನು ಗುರುತಿಸಬಹುದು. ಇಂಥಾ ಜಟಿಲ ಸನ್ನಿವೇಶದಲ್ಲಿ ರಾಘವಾಂಕ, ಕುಮಾರವ್ಯಾಸ, ಚಾಮರಸ, ಲಕ್ಷ್ಮೀಶರಂಥ ಕಾವ್ಯಕವಿಗಳು ಗ್ರಾಮೀಣ ಜನರಿಗೆ ಬಹು ಸಮೀಪವಾದರು. ಶಿಷ್ಟ ಎಂಬ ಕ್ಲಿಷ್ಟತೆಯನ್ನು ಸರಳಗೊಳಿಸಿದವರೇ ಈ ಕಾವ್ಯದ ಕವಿಗಳೆಂದು ಸ್ಮರಿಸಬಹುದು.

ಕಾವ್ಯ ಮೂಲತಃ ಸೃಜನಶೀಲತೆಯ ಸೃಷ್ಟಿ. ಯಾವುದೇ ಅಭಿವ್ಯಕ್ತಿಗೆ ಶ್ರೇಷ್ಠತೆಯ ಪವಿತ್ರತೆಯ ಅಂಶವನ್ನು ಬೆರಿಸಿದ ಕೂಡಲೇ ಅದಕ್ಕೆ ದೈವಿಕ ಶಕ್ತಿ ಬಂದು ಬಿಡುತ್ತದೆ. ಈ ದೈವಿಕ ಕಾವ್ಯಗಳು ನೀತಿ ಸಾಹಿತ್ಯಗಳಾಗುತ್ತವೆ. ದೇಸೀ ಕಥನಗಳಾಗುತ್ತವೆ. ಪಂಪ, ಕುಮಾರವ್ಯಾಸರಂಥ ಕಾವ್ಯಕವಿಗಳಿಗೆ ರಾಜಾಧಿಪತಿಯ ಸ್ಥಾನ ಬಂದಿದ್ದು ಹೀಗೆಯೇ ಇರಬೇಕು. ನಾದ ಪರಂಪರೆಯ ಎಲ್ಲಾ ಸೂಕ್ಷ್ಮ ನುಡಿಗಳು ಶಿಷ್ಟ ಪರಂಪರೆಯ ಜೊತೆಗೆ ಸೇರಿದವೆಂದು ಹೇಳಬಹುದು. ಅವು ನಿಜನೇಮೀಶ, ಬಸವಪುರಾಣ, ಹರಿಕಥಾಮೃತ ಸಾರಗಳಂಥ ಕಾವ್ಯಗಳು ಗ್ರಾಮೀಣರಿಗೆ ಭಕ್ತಿಯ ಆತ್ಮವಿಶ್ವಾಸದೊಂದಿಗೆ ಮನರಂಜನೆಯನ್ನು ಕೊಡುತ್ತಿದ್ದವು.

ಈ ಅನುಸಂಧಾನವು ತತ್ವಪದಕಾರರ ನಾಯಕರುಗಳಾದ ಜನಪದ ಸಾಂಸ್ಕೃತಿಕ ವೀರರ ಕಾವ್ಯಗಳೊಂದಿಗೆ ಮುಖಾಮುಖಿಯಾಗುತ್ತವೆ. ಮಂಟೇಸ್ವಾಮಿ, ಜುಂಜಪ್ಪ, ಮಲೆಮಾದೇಶ್ವರನ ಕಾವ್ಯಗಳು, ಶಿಷ್ಟಕಾವ್ಯಗಳಿಗೆ ಪ್ರತಿಯಾಗಿ, ಜನಪದರಿಂದ ಸೃಷ್ಟಿಯಾದಂಥವುಗಳು. "ಇಡೀ ಮೌಖಿಕ ಪರಂಪರೆಯು ತನ್ನ ದೇಸೀ ಕಥನಗಳ ಸಂಸ್ಕೃತಿಯನ್ನು ಹಾಡಿನ ಮೂಲಕ ಆಚರಿಸುವುದು. ನೀಲಗಾರರು, ಚೌಡಿಕೆಯವರು, ತಂಬೂರಿಯವರು, ಗಣೆಯವರು ಮುಂತಾದ ಭಿನ್ನ ಚಹರೆಯ ಹಾಡುಗಾರರು ಜನಪದ ಕಾವ್ಯಗಳನ್ನು ಸೃಷ್ಟಿ ಮಾಡಿದಂಥವರು."[೧೯]

ರಾಯಚೂರು ಭಾಗದ ಕವಿಗಳು ಹರಿಹರ ರಾಘವಾಂಕರ ನೀತಿಯನ್ನು ಆದರ್ಶಯುತವಾಗಿ ಬಳಸಿಕೊಂಡದ್ದನ್ನು ನೋಡಬಹುದು. ದೇವದುರ್ಗ ತಾಲ್ಲೂಕಿನ ಜಾಲಹಳ್ಳಿಯ ವೀರಭದ್ರ ಕವಿಯು ಘನಮಠ ನಾಗಭೂಷಣರ ಅಪ್ಪಣೆಯ ಮೇರೆಗೆ ಅರವತ್ತೂಮೂರು ಪುರಾತನರ ಕಾವ್ಯ ಪುರಾಣವನ್ನು ರಚಿಸಿದ ಆಧಾರಗಳು ದೊರಕುವವು. ಚಾಗಿ ಚನ್ನಬಸವೇಶ್ವರ ಶಾಸ್ತ್ರಿಗಳು ವೀರಭದ್ರೇಶ್ವರನ ಕಾವ್ಯ ಪುರಾಣವನ್ನು ಭಾಮಿನಿ ಷಟ್ಪದಿಯಲ್ಲಿ ರಚಿಸಿದ ಮಾಹಿತಿಗಳು ಲಭಿಸುವುವು". ಎಂ.ಚಂದ್ರಶೇಖರ ಶಾಸ್ತ್ರಿಗಳು ಕರಡಿಕಲ್ಲು ಬಿಲ್ಲಮರಾಜನ ಪುರಾಣ ಕಾವ್ಯವನ್ನು ಮತ್ತು ಶ್ರೀ ಚೆನ್ನವೀರ ಶರಣರು ಶ್ರೀ ಸೂಗೂರೇಶ್ವರನೆಂದು ದೇವಸೂಗೂರಿನಲ್ಲಿ ಪೂಜೆಗೊಳ್ಳುತ್ತಿರುವ ಶ್ರೀ ಸೂಗೂರೇಶ್ವರ ಪುರಾಣ ಕಾವ್ಯವನ್ನು ರಚಿಸಿದರು. ಈ ಕಾವ್ಯಗಳು ಸಮೂಹ ಜನರ ಆಸಕ್ತಿ ಹಾಗೂ ಆಗ್ರಹದ ಮೇಲೆ ರಚಿತವಾದವುಗಳೆಂಬುದಕ್ಕೆ ರಾಯಚೂರಿನ ಆದೋನಿ ಎಲೆಬಸ್ಸಪ್ಪನವರು ಶ್ರೀ ಸೂಗೂರೇಶ್ವರ ಕಾವ್ಯವನ್ನು ಶ್ರೀ ಎಂ.ಚಂದ್ರಶೇಖರ ಶಾಸ್ತ್ರೀಗಳಿಗೆ ಒತ್ತಾಯಿಸಿ ಬರೆಯಿಸಿದರೆನ್ನುವುದಕ್ಕೆ ಈ ಕಾವ್ಯದಲ್ಲಿಯೇ ಸಮರ್ಥನೆಯನ್ನು ಗುರುತಿಸಬಹುದು. "ಆದವಾನಿ ಬಸಪ್ಪನವರು ಆದಿ ಸೂಗೂರೇಶ್ವರನ ಅನುಪಮ ಸಾದರದ ಪುರಾಣ ಬರೆಯಿಸಿಟ್ಟಿರಲು, ಮೀತಿ ಬಾದಯಿಂಗೆ ಜೀರ್ಣವಾಗಿರೆ"[೨೦] ಇವು ಮಧ್ಯಕಾಲೀನ ಸಂದರ್ಭದಲ್ಲಿ ಸಮೂಹದ ಜನರು ಏಕಕಾಲಕ್ಕೆ ಪ್ರಾಚೀನ ಕಾವ್ಯಗಳನ್ನು ನವೀನ ದೃಷ್ಟಿಯಲ್ಲಿಟ್ಟುಕೊಂಡು ನೋಡಿದ ಮರು ರೂಪಗಳ ಕಾವ್ಯವೆಂದು ನಿರ್ಣಯಿಸಬಹುದು. ಈ ಸಂಗತಿಗಳನ್ನು ಕುಮಾರವ್ಯಾಸನ ಕಾವ್ಯದಲ್ಲೂ ಕಾಣಬಹುದು. "ಒದ್ದೆ ಬಟ್ಟೆ ಆರುವವರೆಗೆ ಕಾವ್ಯ ಬರೆಯುತ್ತಿದ್ದ ಕುಮಾರವ್ಯಾಸ ಲಿಪಿಕಾರ ನಾನು ಕವಿ ವೀರನಾರಾಯಣ ಎಂದು ಹೇಳುವಲ್ಲಿ ಕಾವ್ಯ ಶ್ರವಣತೆ ಹೇಗಿತ್ತೆಂಬುದನ್ನು ತಿಳಿಯಬಹುದು. ಪಂಪನಿಂದ ಹಿಡಿದು ಮುದ್ದಣ್ಣನವರಗೆ ಇನ್ನಷ್ಟು ವಿಸ್ತರಿಸಿದರೆ ಕಂಬಾರರವರೆಗೂ ಗೇಯಾಂಶ ಪ್ರಧಾನವಾದ ಹಾಡು ಲಯಗಳೊಂದಿಗೆ, ಅಕ್ಷರ ವೃತ್ತಗಳೊಂದಿಗೆ ಬಳಕೆಯಾದದ್ದನ್ನು ಕಾಣುತ್ತೇವೆ."[೨೧] ಹರಿಹರನು 'ಮನುಜರ ಮೇಲೆ ಸಾವವರ ಮೇಲೆ ಪದ್ಯಮಂ' ಎಂದು ಹಾಡಿದನು. ಚಾಮರಸನು "ಸತ್ತವರ ಕತೆಯಲ್ಲ ಜನನದ ಕುತ್ತದಲಿ ಕುದಿ ಕುದಿದು ಕರ್ಮದ ಕತ್ತಲೆಗೆ ಸಿಲುಕುವವರ ಸೀಮೆಯ ಹೊಲಬು ತಾನಲ್ಲ, ಹೊತ್ತು ಹೋಗದ ಪುಂಡರಾಲಿಪ ಮತ್ತ ಮತಿಗಳ ಗೋಷ್ಠಿಯಲ್ಲಿ ಈ ಪ್ರಭುಲಿಂಗ

ಲೀಲೆ'' ಎಂದು ಹೇಳುವನು. ಹರಿಹರ ''ಪದ್ಯಮಂ'' ಎಂದು ಬಳಸಿದನು. ಚಾಮರಸನು ''ಪುಂಡರಾಲಿಪ'' -ಇದು ರಾಗದ ಆಲಾಪವೇ. ಈ ರೀತಿ ಎಲ್ಲಾ ಕಾವ್ಯಕಾರರು ಲಾಲಿತ್ಯಪೂರ್ಣವಾದ ಸಂವಹನ ಶೀಲ ಗುಣವುಳ್ಳ ಕಾವ್ಯವನ್ನು ಹೊಸೆದರೆಂದು ಹೇಳಬಹುದು.

ಶೈವ ಸಂಸ್ಕೃತಿ ಹರಿಹರನ ರಗಳೆಗಳ ಮೂಸೆಯಿಂದ ಹೊರಬಂದರೂ ಅದು ಚಂಪೂವಿನ ವಿರುದ್ಧದ ಹೋರಾಟವೆಂದು ತಿಳಿಯಬಹುದು. ರಾಘವಾಂಕ ಮತ್ತು ಹರಿಹರರ ಕಾವ್ಯಗಳು ಮೌಖಿಕ ಜಗತ್ತನ್ನು ಪರಿಚಯಿಸಿದ್ದು ಇಲ್ಲಿಯ ಕತೆಗಳು ಇಂದಿಗೂ ಮೌಖಿಕ ಕತೆಗಳಾಗಿವೆ. ಹರಿಹರನ ಕೋಳೂರು ಕೊಡಗೂಸು, ಮಾದಾರ ಚೆನ್ನಯ್ಯನ ಕತೆಗಳು ಹಳ್ಳಿಗರಲ್ಲಿ ಜನಪದರ ಕತೆಗಳಾಗಿ ಪ್ರಾಶಸ್ತ್ಯ ಪಡೆದು ಕೊಂಡಿವೆ. ಈ ಕತೆಗಳನ್ನು ಕೇಳುತ್ತೇವೆ. ಕಾವ್ಯಗಳೊಂದಿಗೆ ಹಾಡುತ್ತೇವೆ. ಇವು ಬರೀ ಮನೋರಂಜನೆಯೆಂದು ಗ್ರಹಿಸದೇ ಧ್ವನಿಪೂರ್ಣವಾದ ಆಧ್ಯಾತ್ಮಿಕ ಸತ್ವಗಳ ನಿವೇದನೆಗಳೆಂದು ಗುರುತಿಸಬೇಕು. ಜನಪದರು ಮಡಿವಾಳ ಮಾಚಿದೇವ, ಚನ್ನಬಸವಣ್ಣನಂಥ ವಚನಕಾರರನ್ನು ಬಳಸಿಕೊಂಡು ಕಾವ್ಯ ಕಟ್ಟಿದರು. ಈ ಕಥಾ ಕಾವ್ಯಗಳನ್ನು ಹಾಡುವ ವೃತ್ತಿಗಾಯಕರು ಕಂಡುಬರುತ್ತಾರೆ. ಮಡಿವಾಳ ಮಾಚಯ್ಯನನ್ನು ವೀರಭದ್ರನೇ ಮಾಚಯ್ಯನಾಗಿ ಹುಟ್ಟಿದಂತೆ ಗ್ರಹಿಸಿ ಹೇಳುವುದು ಒಂದಾದರೆ; ಚನ್ನಬಸವಣ್ಣ ಹರಳಯ್ಯನವರ ಮಠದ ಪ್ರಸಾದದಿಂದ ಜನಿಸಿದ ಕತೆಯನ್ನು ಪ್ರಸ್ತಾಪಿಸುವುದನ್ನು ಕಾಣಬಹುದು.

''ಗುರುವೇ ನೀ ಕೇಳೋ ಚನ್ನಬಸವಣ್ಣಾ | ಲಿಂಗವಂತರು ನೀವು ಚೆನ್ನಾಗಿ ಕೇಳಿರಿ|
ಕಂಬಳಿ ಮರಳಾರು ಕಕ್ಕಯ್ಯಗೆ | ಉಂಬುವ ಪ್ರಸಾದವನು
ಉದ್ಭವಿಸಿದಾತನಿಗೆ | ಅಂಬಿಗರ ಚೌಡಯ್ಯನ ಘಟ ಘಟ್ಟಿವಾಳಗೆ |
ಹಂಬಲಿಸಿ ಎರಗುವ ಶರಣರಿಗೆ''[೨೨]

ಈ ಪದ್ಯದಲ್ಲಿ ಬಂದ ವಚನಕಾರರು ಕಾವ್ಯಪುರಾಣಗಳ ನಾಯಕರುಗಳಾಗಿ ತತ್ವಪದಕಾರರ ಸೃಜನಶೀಲತೆಯಲ್ಲಿ ಮರುರೂಪ ಪಡೆಯುತ್ತಾರೆ.

''ಕಾಯ ಬಲಿದೊಡೆ ಮಾಯೆ ಬಲಿವುದು| ಛಾಯೆ ಬಲಿದೊಡೆ ಛಾಯೆ ಒಲಿವುದು | ಕಾಯೆ ಛಾಯೆ ಮಾಯೆ ಒಲಿದೊಡೆ ಸಿದ್ಧನವನಲ್ಲ''(ರಾಘವಾಂಕ) ಇಲ್ಲಿನ ಸಂರಚನೆಗಳು ತನ್ನ ಸಂವಹನ ನಿರೂಪಣಾ ಕ್ರಮದೊಂದಿಗೆ ಪ್ರಭಾವ ಬೀರುತ್ತವೆ. ಇವು ಜಾನಪದ ಹಾಗೂ ಕಥನ ಕ್ರಮಕ್ಕೆ ಹೊಂದಿಕೆಯಾದ ಅಂಶಗಳೆಂದೂ ಹೇಳಬೇಕಾಗುತ್ತದೆ. ಮಂಟೇಸ್ವಾಮಿಯ ಧರೆಗೆ ದೊಡ್ಡವರ ಕತೆಯ ಹಾಡಿನಲ್ಲಿ ಅನೇಕ ತಾತ್ವಿಕ ಅರ್ಥಗಳು ಪ್ರತಿಮೆಗಳು ದೊರಕುತ್ತವೆ. 'ಎತ್ತಿಗೊಲ್ಲಿಂಗಪ್ಪ ಕತ್ತೆಗೊಲ್ಲಿಂಗಪ್ಪ ಕೋಳಿ, ಕೊತ್ತಿ, ಲಿಂಗ, ನಾಯಿ, ನರಿ, ಇದು ಜನರ ಆಡು ನುಡಿಯ ಪರಂಪರೆಯಲ್ಲಿ ಉಳಿದು ಬಂದಿದೆ. ಇಲ್ಲಿನ ಅನೇಕ ವಿಚಾರಗಳು ತಾತ್ವಿಕವಾಗಿ ರೂಪಗೊಳ್ಳುವುದನ್ನು ಸ್ಪಷ್ಟಪಡಿಸಬಹುದು.

ಕುಮಾರವ್ಯಾಸ ವಾಚನ ಸಂಸ್ಕೃತಿಯನ್ನು ನಿರ್ಮಾಣ ಮಾಡಿದರೂ "ಗದುಗಿನ ಭಾರತವನ್ನು" ಭಾಗವತ ಭಾರತವೆಂದೇ ಬಳಸುವೆವು. ಭಾರತ ಪ್ರಸಂಗದಲ್ಲಿ "ಕೇಳು ಜನಮೇಜಯ ಮಹಿಪತಿ ಎಂದು ಒಂದೊಂದು ಪಾತ್ರದ ಸಂದರ್ಭದಲ್ಲಿ ಆತ ನುಡಿಯುವುದು ಮತ್ತೆ ಮತ್ತೆ ಮೌಖಿಕ ಪರಂಪರೆಯ ಅನುಸಂದಾನಕ್ಕಾಗಿಯೇ ಎಂದು ತಿಳಿಯಬಹುದು. ಕೇಳಿಸಿಕೊಳ್ಳುವ ಹಾಗೂ ವಾಚಿಸುವ ಕ್ರಮ ದೇಸೀ ಭಾಷೆಯ ಬೆಡಗಿನೊಂದಿಗೆ ಸಾಗುತ್ತವೆ. ವೈಶಂಪಾಯನ ಮುನಿಯ ಮೂಲಕ ಕೇಳೂ ಜನಮೇಜಯವೆಂದು, ಮೌಖಿಕ ಪಠ್ಯವನ್ನು ವಾಚಿಸುವಂತೆ ಮಾಡುತ್ತಿದ್ದುದನ್ನು ಗಮನಿಸುತ್ತೇವೆ. ಇದು ಕೇಳವ ಪಠ್ಯದ ತಂತ್ರವಲ್ಲ. ಇದು ಸಂವಹನದ ದ್ವಿಗುಣ ಪರಿಚಯದೊಂದಿಗೆ ಗ್ರಹಿತವಾಗುತ್ತದೆ."[೨೩]

ಒಂದು ಸಮೂಹ ಸಮ್ಮೋಹನಗೊಳ್ಳಬೇಕಾದರೂ ಸಹೃದಯರ ಪಾತ್ರವೂ ಅಷ್ಟೇ ಮುಖ್ಯವಾದದ್ದು. ಕತೆ, ಕಾವ್ಯ, ನಾಟಕ ನಿರ್ಮಿತವಾದದ್ದು. ಹೀಗೆ ಒಬ್ಬ ಭಾಗವತಕಾರ ಅಭಿನಯಿಸುತ್ತಾನೆ ಮುಗ್ಧ ಸಹೃದಯ ತನ್ನ ಶ್ರಮವನ್ನು ಮರೆಯುತ್ತಾನೆ. ಜನಪದರ ಶ್ರೀ ಕೃಷ್ಣಪಾರಿಜಾತ, ರಾಧಾನಾಟಗಳ ರಚನೆಯೂ ಹೀಗೆಯೇ ಆಗಿರಬೇಕು. ಶ್ರೀ ಕೃಷ್ಣಪಾರಿಜಾತದ ಅಪರಾಳ ತಮ್ಮಣ್ಣನ ಪ್ರಸ್ತಾಪದೊಂದಿಗೆ ಇದನ್ನು ಗಮನಿಸಬಹುದು. ರಾಯಚೂರು ಜಿಲ್ಲೆಯ ಅಪರಾಳ ಗ್ರಾಮದ ತಮ್ಮಣ್ಣನ ಧರೆಯೊಳು ರಾಯಚೂರು ಸೀಮೆಯೊಳು | ವರದ ಅಪರಾಳ ತಮ್ಮಣ್ಣನು ವಿರಚಿಸಿದ | ಪಾರಿಜಾತವು ಕೊರವಂಜಿಯು ಸಿರಿ ಸತ್ಯಭಾಮೆಗೆ ತ್ಯಾಗವನು"[೨೪] ಇವು ಪರಂಪರೆಗಳ ಜೊತೆಗೆ ನಡೆಯುತ್ತಾ ವ್ಯಾಖ್ಯಾನಿಸುತ್ತಾ ಸಾಗುತ್ತವೆ. ಮುಂದೆ ತತ್ವಪದಕಾರರು, ಸ್ವೀಕೃತ ಭಾವನೆಯಿಂದ ತಮ್ಮ ಆಶಯಗಳಿಗೆ ತಕ್ಕಂತೆ ಪೋಷಿಸಿದರೆಂದು ಹೇಳಬಹುದು.

"ತಂದಿಯ ಮಾತು ಕೇಳಿ ತಾಯಿಯ ಶಿರವು ತೆರದಿ
ಬಂದ ಕಂಪನ ಭಯವ ಪರಿಹರಿಸಿದಿ ದೇವಾದಿದೇವಾ"[೨೫]

ಕೃಷ್ಣನ ದೈವತ್ವವನ್ನು ತತ್ವ ಪದಕಾರ ನಿರೂಪಿಸುವನು. ಇಲ್ಲಿಯ ಪುನರ್‌ಸೃಷ್ಟಿಕಾವ್ಯಗಳಲ್ಲಿ ಕಾಣುತ್ತದೆ. ಪಂಪ ಭಾರತವೆ ಬೇರೆ, ಕುಮಾರವ್ಯಾಸನ ಭಾರತವೆ ಬೇರೆ, ಭೈರಪ್ಪನ ಪರ್ವವೆ ಬೇರೆ. ವಸ್ತು, ಆಶಯ ಒಂದೇ ಆದರೂ ಸಂವಾದಿಸುವ ಜನಪರ ಸಂಸ್ಕೃತಿಗಳು ಬೇರಾಗುವವು. ಕುಮಾರವ್ಯಾಸನ ಭಾರತದಲ್ಲಿ "ಹಸಿದ ಮಾರಿಯ ಮಂದೆಯಲಿ ಕುರಿ ನುಸುಳಿದಂತಾದೆನು" ಎನ್ನುವ ಮಾತು ಮಾರಿಗೌತಣವಾಯಿತು. ನಾಳಿನ ಭಾರತವು ಚತುರಂಗ ಬಲದಲಿ ಎನ್ನುವ ಜಾನಪದ ಭಾಷೆಯ ಬಳಕೆ ವಿಶಿಷ್ಟವಾಗಿ ಗಮನ ಸೆಳೆಯುವುದು. ಜನಪದರ ಕ್ಷುದ್ರದೇವತೆಗಳು ಕೃಷಿಯ ವಿವರಗಳು ಉಡುಗೆ ತೊಡುಗೆ ವಿವಾಹಗಳಂಥ ಮೌಖಿಕ ರೂಪಕಗಳನ್ನು ಕುಮಾರವ್ಯಾಸನು ಬಳಸಲು ಕಾರಣ ಕಾವ್ಯಕಾರನಿಗೆ ಮಹಾಭಾರತದ ಪವಿತ್ರತೆಯನ್ನು ಉಳಿಸುವುದು ಒಂದಾದರೆ ಜನಪದರ ಸೃಜನ ಮನಸ್ಸುಗಳಿಗೆ ತಟ್ಟಲಿ

ಎಂದಿರಬಹುದು. ಈ ಮೌಖಿಕ ಸಂಸ್ಕೃತಿಯ ಶಬ್ದಗಳು ಸಮಾಜದ ಒಡಲಿನಿಂದ ಹುಟ್ಟಿ ಅಲ್ಲಿಯ ತತ್ವಗಳೊಂದಿಗೆ ಮಾತನಾಡುವ ಪರಿಯನ್ನು ಗುರುತಿಸಬಹುದು.

"ಊರ ದೇವರ ಮಾಡಿ ಉಣಲಿಲ್ಲ| ನಮ್ಮ ಮನೆಯೊಳು ನೂರೊಂದು ಕೋಳಿಗಳ| ಕೋದೆವಲ್ಲಮ್ಮಾ
ಹಸೆಯ ಹಂದರಕೆ ಗೂಟಗಳೆಂಟು ಕಡಿಸಿದೆವು| ಹಸನಾಗಿ ನಾವು ಹಂದರ ಹಾಕಿದೆವು"[೨೬]

ಅನೇಕ ವಿಚಾರಗಳನ್ನು ತತ್ವಪದಕಾರರು ತಮ್ಮ ಹಾಡುಗಳಲ್ಲಿ ಬಿಡಿಸಿ ತೋರಿಸಿದ್ದಾರೆ.

ಕಾವ್ಯದ ಛಂದ ಲಯಗತಿಗಳು ಆಡು ಭಾಷೆಯ ಬೆಡಗಿನಿಂದ ಕೂಡಿದರೂ, ಸೃಜನಾತ್ಮಕ ಗುಣವಂತು ಇದ್ದೇ ಇರುತ್ತದೆ. ಇಲ್ಲಿನ ಅನುಸಂಧಾನಗಳು ಕಲಾತ್ಮಕವಾಗಿ ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ಬಬ್ರುವಾಹನ ಲವಕುಶರ ಯುದ್ಧದ ವರ್ಣನೆಗಳು ತಾಮ್ರಧ್ವಜನ ಕತೆಗಳು, ಶ್ರಮಿಕರ ಧಣಿವಿಗೆ ಸಮಾಧಾನ ತರುವುದನ್ನು ಕಾಣಬಹುದು. ಜನಪದರ ನೀತಿಯ ಕತೆಗಳು, ಮೌಖಿಕ ಕಾವ್ಯಗಳಲ್ಲಿ ಸಂರಚನೆಗಳಾಗುವುದನ್ನು ಗಮನಿಸಬಹುದು. ಪಂಚತಂತ್ರದ ಕತೆಗಳು, ಅತಿಮಾನುಷ ಕತೆಗಳು, ದಡ್ಡರ ಕತೆಗಳು, ಗಾದೆಗಳು ಮುಖ್ಯವಾದರೂ ಫಲಿತ ಮಾತ್ರ ವೀರ ಸಮಾಜವನ್ನು ಸೃಷ್ಟಿಸುವುದಾಗಿತ್ತು. ಈ ಬಗೆಯ ವಿವಿಧ ಅಂಶಗಳನ್ನು ತತ್ವಪದಗಳಲ್ಲಿ ಕಾಣಬಹುದು. ನಿದರ್ಶನಕ್ಕೆ ಹಾಡುಗಳನ್ನು ಗಮನಿಸಬಹುದು.

ಕಾನ್ ಕಾನ್ ಉತ್ತತ್ತಿ ಎಲ್ಲಿಗೆ ಬಂತು ಸಂಗಯ್ಯ
ಸಂಗಯ್ಯನಾಟ ಅಂಗೈ ಮೇಲೆ | ಅಂಗೈಯಾಟ
ಮುಂಗೈ ಮೇಲೆ| ಹಾಂಗೂ ಹೀಂಗೂ ಮಾಡಿ ನಿಜಲಿಂಗಯ್ಯನ ನೋಡೋದು ಬಂತು|[೨೭]

ಇದು ಧಾರ್ಮಿಕ ಪ್ರಜ್ಞೆಯು ಲಿಂಗಾರ್ಚನೆಯ ಪೂಜಾವಿಧಿವಿಧಾನವನ್ನು ತಿಳಿಸುತ್ತದೆ. ಆದರೆ ತತ್ವಪದಕಾರರು ದಾರ್ಶನಿಕ ಸಂಗತಿಗಳನ್ನು ಸಹಜ ಭಾಷೆಯ ಆತ್ಮೀಯತೆಯತೆಯಿಂದ ಹೇಳುತ್ತಾರೆ. ಏಕ ವಚನದಲ್ಲಿ ದೇವರನ್ನು ಮಾತನಾಡಿಸುವರು. ಈ ಹಾಡು ಮಕ್ಕಳ ಆಟದ ಅನುಭವ ರಚನಾವಿನ್ಯಾಸವನ್ನು ಹೊಂದಿದೆ. ಹಾಡುವುದರೊಂದಿಗೆ ಕೇಳುವುದರೊಂದಿಗೆ ಗಮನಸೆಳೆಯುವುದನ್ನು ನೋಡಬಹುದು. ಜನಪದ ಕತೆಗಳೇ ತತ್ವಪದಗಳಲ್ಲಿ ಹಾಡುಗಳಾಗಿದ್ದನ್ನು ಕಾಣುತ್ತೇವೆ. ಕತೆಗಳ ವಸ್ತುವಿನೊಡನೆ ಉಂಟಾದ ಅವಿನಾಭಾವ ಚಾರಿತ್ರಿಕ ಧ್ವನಿ ತತ್ವಪದ ಸಾಹಿತ್ಯಕ್ಕೆ ಪ್ರೇರಣೆಯಾಗಿದ್ದನ್ನು ಸೂಕ್ಷ್ಮವಾಗಿ ಕಾಣಬಹುದು. ಈ ಸೂಕ್ಷ್ಮತೆಯು ಹೀಗೆ ಇರಬಹುದು. ಇಂದು ಕಾವ್ಯಗಳು ಉಪೇಕ್ಷೆಗೆ ಒಳಪಟ್ಟದ್ದನ್ನು ಗಮನಿಸಬಹುದು. ತತ್ವಪದಗಳು ಹಾಗಲ್ಲ? ಇಂದಿಗೂ ಅಸಂಖ್ಯಾತ ಗ್ರಾಮೀಣ ಶ್ರೋತೃವರ್ಗವನ್ನು ವಶವಾಗಿಸಿಕೊಳ್ಳುವ ಕಲಾತ್ಮಕತೆ ಈ ಸಾಹಿತ್ಯಕ್ಕಿದೆ. ಗ್ರಾಮದಲ್ಲಿ ಯಾರೇ ಮರಣಿಸಿದರೂ ಭಜನೆ ಹಾಡುಗಳಿಂದ ಸತ್ತ ವ್ಯಕ್ತಿಯ ಆತ್ಮಕ್ಕೆ ಮುಕ್ತಿ ಕೊಡುವುದು ಈಗಲೂ ಕಂಡುಬರುತ್ತದೆ. ಇದು ತತ್ವಪದಕಾರರ ಸಂಸ್ಕೃತಿ. ಇವತ್ತಿನ ಸಂದರ್ಭದಲ್ಲಿ ತತ್ವಪದಗಳು ದೇಸೀ ಸಂಕಥನದ ಜೀವಂತ

ಸಂಸ್ಕೃತಿಯೆಂದು ಹೇಳಬೇಕಾಗುತ್ತದೆ. ಇವು ಮಧ್ಯಕಾಲೀನ ಸಾಹಿತ್ಯಿಕ ಸಂದರ್ಭದ ತಾತ್ವಿಕ ಸಂರಚನೆಗಳಾಗಿದ್ದರೂ ಉಪೇಕ್ಷೆಗೆ ಒಳಗಾಗಿದ್ದು ಕಾಣುತ್ತದೆ.

## ೨.೩. ಸ್ವರವಚನಗಳು

ಕನ್ನಡ ರತ್ನಕೋಶದಲ್ಲಿ ಸ್ವರದ ಅರ್ಥವನ್ನು ಈ ತೆರನಾಗಿ ಗುರುತಿಸಬಹುದು. 'ಸ್ವರ'ವೆಂದರೆ ನಾದ, ಸಂಗೀತದಲ್ಲಿ ಸ, ರಿ, ಗ, ಮ, ಪ, ದ, ನಿ ಎಂಬ ಅರ್ಥಗಳು ಈ ಪದಕ್ಕಿವೆ. 'ವಚನ' ಎಂದರೆ ಮಾತು ಎಂದರ್ಥ. ಸ್ವರವಚನಕಾರರು ವಚನಗಳನ್ನು ರಾಗ, ತಾಳಗಳಿಗೆ ಹೊಂದುವಂತೆ ರಚನೆ ಮಾಡಿದರು. ಸ್ವರವಚನಗಳನ್ನು ಹಾಡುವುದರ ಮೂಲಕ ಜನರಿಗೆ ತಮ್ಮ ಸಂದೇಶವನ್ನು ತಿಳಿಸಲಾಯಿತು. ಹಾಗಾಗಿ ಸ್ವರವಚನಗಳು ಸಹಜವಾಗಿಯೇ ಜನರ ಮೆಚ್ಚುಗೆಯನ್ನು ಪಡೆದುಕೊಂಡಿವೆ.

ವಚನಕಾರರ ಕಾಲದಲ್ಲಿ ವಚನಗಳನ್ನು ಹಾಡಲ್ಪಡುತ್ತಿದ್ದರೆಂಬುದಕ್ಕೆ ಹಲವಾರು ಉದಾಹರಣೆಗಳು ದೊರಕುತ್ತವೆ. ಬಸವಣ್ಣನ "ಆನು ಒಲಿದಂತೆ ಹಾಡುವೆ, ಆನಂದದಿಂದ ಹಾಡುವೆ. ಅಕ್ಕಮಹಾದೇವಿಯ ಈ ವಚನ "ಅಯ್ಯ ನೀನು ಕೇಳಿದಡೆ ಕೇಳು, ಕೇಳದಡೆ ಮಾಣು ಆನು ನಿನ್ನ ಹಾಡಿದಲ್ಲದೆ ಸೈರಿಸಲಾರೆನಯ್ಯ". ಅಕ್ಕಮ್ಮನ ವಚನದಲ್ಲಿ "ತಾ ಮಾಡಿಕೊಂಡ ಕುತ್ತಕ್ಕೆ ಹಾಡಿ ಮದ್ದನೆರದಂತೆ". ಇಂತಹ ಹಾಡುವ ಮತ್ತು ಕೇಳುವ ವಚನಗಳು ವಚನಕಾರರಲ್ಲಿ ದೊರಕುತ್ತವೆ. ಆದರೆ ಅನೇಕ ಸಂಶೋಧಕರು ವಚನಗಳೇ ಹಾಡುಗಳೆಂದು ತೀರ್ಮಾನಿಸಿ, ಅವು ಹನ್ನೆರಡನೆಯ ಶತಮಾನದ ವಚನಗಳಿಗಿಂತ ಭಿನ್ನವಾದವುಗಳೆಂದು ಅಭಿಪ್ರಾಯಪಟ್ಟಿದ್ದಾರೆ. "ಶೈವ ತೇವಾರಂ ಹಾಡುಗಳು, ಶಿವಶರಣರ ಹಾಡುಗಳಿಗೆ ಮಾದರಿಯಾಗಿದ್ದರೂ ತೇವಾರಂ ಹಾಡುಗಳನ್ನು ಹೋಲುವ ರಚನೆಗಳಿದ್ದರೆ ವಚನ ಸಾಹಿತ್ಯದಲ್ಲಿ ಅಲ್ಲ. ಬಸವ, ಚೆನ್ನಬಸವಣ್ಣ, ಸಿದ್ಧರಾಮ ಮುಂತಾದವರು ಹಾಡಿದರೆಂದು ರಾಗ ನಿರ್ದೇಶನದೊಂದಿಗೆ ಅವರವರ ಅಂಕಿತಗಳೊಂದಿಗೆ ಶೂನ್ಯಸಂಪಾದನೆಯಲ್ಲಿ ಸಿಗುವ ಪದಗಳಾಗಿವೆಯೆಂದು"[೨೭] ಎಂ.ಚಿದಾನಂದ ಮೂರ್ತಿಯವರು ಅಭಿಪ್ರಾಯ ಪಡುತ್ತಾರೆ.

ವಚನಕಾರರ ತತ್ವಗಳು ತೋಂಡಿಯಾಗಿ ಹರಿದಾಡಿದ ನುಡಿಗಳೆಂದು, ಅವು ಸ್ವರವಚನಗಳೆಂದು, ಡಾ. ಶಿವಾನಂದ ವಿರಕ್ತಮಠ ಅಭಿಪ್ರಾಯಪಡುವರು. ಗೀತ, ವಚನ, ಹಾಡು ಸ್ವರಪದದ ಹಾಡು ಎಂಬುದಕ್ಕೆ ಬಳಕೆಯಾಗಿರಬೇಕು. ನಂತರ ಛಂದೋಬದ್ಧವಾದ ರಾಗ ತಾಳ ಸಹಿತವಾದ ಸ್ವರಪದ, ಬಳಕೆಯಾಗಿರಬೇಕೆಂದು ಡಾ.ವೀರೇಶ ಬಡಿಗೇರರು ಅಭಿಪ್ರಾಯ ಪಡುತ್ತಾರೆ."[೨೮] ಆದ್ದರಿಂದ ವಚನ ಮತ್ತು ಗೀತ ಎಂಬ ಎರಡೂ ಪದಗಳು ಒಂದೇ ಎನ್ನುವಂತೆ ತೀರ್ಮಾನಿಸಿದ ವಿಚಾರಗಳು ಅನೇಕ ಸನ್ನಿವೇಶದಲ್ಲಿ ವ್ಯಕ್ತವಾಗುತ್ತವೆ. ಸ್ವರವಚನಗಳು ದೇಸೀ ಸೊಗಸಿನ ಗೀತಗುಣಗಳೆಂದು ಮೂರು ಇಲ್ಲವೆ ಐದು ನುಡಿಗಳ ಒಪ್ಪವಿಟ್ಟವುಗಳೆಂದು ಡಾ.ಬಸವಲಿಂಗ ಸೊಪ್ಪಿಮಠ ಸಮರ್ಥಿಸುತ್ತಾರೆ.

ಸ್ವರವಚನಗಳು ವಚನಗಳಲ್ಲಿ ಬರುವ ಆಧ್ಯಾತ್ಮಿಕ ಸಹಿತವಾದ ಮೌಖಿಕರೂಪದ ಹಾಡುಗಳೆಂದು ಹೇಳಬಹುದು. ಕ್ರಿ.ಶ.ಹದಿನಾರನೇ ಶತಮಾನದ ಪ್ರೌಢದೇವರಾಯನ ಕಾಲದ ಸ್ವರವಚನಕಾರರನ್ನು ಶೂನ್ಯ ಸಂಪಾದನೆಯಲ್ಲಿ ಬರುವ ನೂರೊಂದು ವಿರಕ್ತರೆಂದು ಗುರುತಿಸುತ್ತಾ ಬಂದಿದ್ದೇವೆ. ಏಕೆಂದರೆ ಸ್ವರವಚನಕಾರರು ಸಂಕಲನ ಯುಗದಲ್ಲಿ ಪುರಾತನ ನೆಲೆಗಳೊಂದಿಗೆ ಮಾತನಾಡಿದ್ದನ್ನು ಗುರುತಿಸಬಹುದು. ಈ ಸಂದರ್ಭದಲ್ಲಿ ವೀರಶೈವ ಧರ್ಮ ಸಾಂಸ್ಥೀಕರಣಗೊಂಡು ವಚನ ಚಳುವಳಿ ಮೂಲ ಆಶಯವನ್ನು ಒಡೆದು ಬಿಟ್ಟಿತ್ತು. ಆಗ ವಚನ ಸಂಕಲನಗಳ ಪುಷ್ಟತೆಯೊಂದಿಗೆ ಜಡ ಸಂಸ್ಕೃತಿಯನ್ನು ಹೋಗಲಾಡಿಸಿದ್ದು ಸ್ವರವಚನಕಾರರ ಕಾಲ ಎಂದು ಹೇಳಬಹುದು.

ಈ ಕಾಲದ ಸಂದರ್ಭದಲ್ಲಿ ವಚನ ಸಂಕಲನಗಳ ಪಾತ್ರ ಹೀಗಿದೆ. ೧. ಧರ್ಮದ ಅನುಸಂಧಾನ ೨. ಸೃಜನ ಅನುಸಂಧಾನ. "ವಚನಗಳ ಜೊತೆಗೆ ನಡೆಸಿದ ಅನುಸಂಧಾನದ ಫಲವಾಗಿ ಸಿದ್ಧಾವಸ್ತುಗಳೊಂದಿಗೆ ವಚನ ಸಂಕಲನಗಳು ಮರುರೂಪ ಪಡೆದವೆಂದು ಹೇಳಬಹುದು. ವಿರಕ್ತರು, ಕವಿಗಳು, ತಮಗೆ ಬೇಕಾದ ಶರಣರನ್ನು ಮತ್ತು ಅವರ ವಚನಗಳನ್ನು ಆಯ್ಕೆ ಮಾಡಿಕೊಂಡಿರುವುದರ ಹಿಂದಿನ ಉದ್ದೇಶ ವೀರಶೈವೀಕರಣದ ಒತ್ತಡವೆಂದು, ನಿರ್ಣಯಿಸಬಹುದು."[೩೦] ಇಲ್ಲಿನ ಕವಿಗಳು ಷಟ್‌ಸ್ಥಲಗಳ ಆಯ್ಕೆಯೊಂದಿಗೆ ಸಂಸ್ಕೃತದ ವೇದ ಉಪನಿಷತ್ತುಗಳನ್ನು ಸರಳವಾಗಿಯೇ ಶಾಸ್ತ್ರೀಯ ಪರಿಕಲ್ಪನೆಯ ಮೂಲಕ ಹಾಡಿದರು. ಕನ್ನಡದ ವೇದಗಳೆಂದರೆ ಸ್ವರವಚನಗಳೆಂದು ಬಹು ಜನರ ನಾಲಿಗೆಯ ಮೇಲೆ ಉಳಿದವು. ಅಕ್ಕಮಹಾದೇವಿ, ಚೆನ್ನಬಸವಣ್ಣನ ಹಾಡುಗಳನ್ನು ಇಂದಿಗೂ ದೇವಾಲಯಗಳಲ್ಲಿ, ಮಠಗಳಲ್ಲಿ ಹಾಡುವುದನ್ನು ನೋಡಬಹುದು.

"ಆದಿಯುಗದ ಮಹಾ ಘನಲಿಂಗವು | ಇನ್ನೇನಿನ್ನೇನು|
ಸಾಧಿಸಿಹನೆಂದಡೆ ಸಾಧಿಸಲಳವಲ್ಲ | ಇನ್ನೇನಿನ್ನೇನು"[೩೧] ||ಪ||

ಹೀಗಾಗಿ ಸ್ವರವಚನ ಸಾಹಿತ್ಯದಲ್ಲಿ ವಚನಗಳು ಯಾವುವು? ಎಂದು ಸ್ಪಷ್ಟಪಡಿಸುವುದು ಕಷ್ಟವಾಗುತ್ತದೆ. ಹನ್ನೆರಡನೇ ಶತಮಾನದ ವಚನಕಾರರ ಜೀವನವನ್ನು ಕಲ್ಪಿಸಿ, ಜೋಡಿಸಿ, ದರ್ಶನಗಳನ್ನು ನಿರೂಪಿಸಿದ ಇವರ ಶೈಲಿ ಇಲ್ಲಿಯ ಸಂವಾದಗಳ ಪ್ರಕ್ರಿಯೆಗಳನ್ನು ಎರಡು ರೀತಿಯಿಂದ ಗುರುತಿಸಬಹುದು. "ವಚನಕಾರರು ವಾಗ್ಗೇಯಕಾರರಾಗಿ ಸಂಗೀತಬಳಸಿದರೆ, ಲಾಕ್ಷಣಿಕರಾದ ಸೋಮೇಶ್ವರ ಮತ್ತು ಶಾರ್ಙ್ಗ ದೇವರು ಸಂಗೀತ ಶಾಸ್ತ್ರವನ್ನು ನೆಲೆಗೊಳಿಸುವ ಪ್ರಯತ್ನ ಮಾಡಿದರೆಂದು ಡಾ. ವೀರೇಶ ಬಡಿಗೇರರು ಸಮರ್ಥಿಸುವರು.

ವಚನಗಳು, ಸ್ವರವಚನಗಳು, ತತ್ವಪದಗಳ ಸಂಬಂಧಗಳ ಅರ್ಥೈಸುವಿಕೆಯನ್ನು ಹೀಗೆ ಗುರುತಿಸ ಬಹುದು. ತಾತ್ವಿಕತೆಯನ್ನು ಗುರುತಿಸಲು ಹೋದಾಗ, ಶೂನ್ಯಸಂಪಾದನೆಯ ರಚನೆಗಳು ಸಮಕಾಲೀನ ಸಂದರ್ಭದಲ್ಲಿ, ಸಾಮಾಜಿಕ, ಸಾಂಸ್ಕೃತಿಕ ಒತ್ತಡಗಳೊಂದಿಗೆ ಅವು ಅಪೂರ್ಣವಾಗಿಯೇ ಕಂಡುಬರುತ್ತವೆ.

ವಚನಗಳಾಗಲೀ ತತ್ವಪದಗಳಾಗಲೀ ಜನಸಾಮಾನ್ಯರ ಹತ್ತಿರ ಬಂದು ಶಿಕ್ಷಿತ ವರ್ಗಗಳನ್ನೂ ಪೋಷಿಸಿದಂಥವುಗಳು. ಸ್ವರವಚನಗಳು ವೀರಶೈವರ ಪಠ್ಯಗಳೆಂಬ ವಿಭಾಗೀಕರಣವನ್ನು ಗಮನಿಸಿದಾಗ ಇವು ಅಧ್ಯಯನಕಾರರು ನಿರ್ಮಿಸಿದ ಚೌಕಟ್ಟಾಗಿರಬೇಕು. ಆದ್ದರಿಂದ ಶೂನ್ಯಸಂಪಾದನೆಯ ಹಾಡುಗಳನ್ನು ಸಾಮಾನ್ಯ ಜನರು ಗ್ರಹಿಸಲು ಸಾಧ್ಯವಾಗದೆ ಅವುಗಳು ಕಂದಕವಾಗುತ್ತಾ ನಡೆದವೆಂದು ಹೇಳಬಹುದು.

ಅನೇಕ ಸ್ವರವಚನಕಾರರು ತಮ್ಮ ಹಾಡುಗಳಲ್ಲಿ ಅಲ್ಲಮನ ಜೀವನದ ಅನೇಕ ಘಟನೆಗಳನ್ನು ಅವನ ವ್ಯಕ್ತಿತ್ವವನ್ನು ಅಲ್ಲಮನ ಭಾಷೆಯ ಬೆಡಗನ್ನು ಹೀಗೆ... ಸಾಕಷ್ಟು ಸಂಗತಿಗಳನ್ನು ಸ್ಪಷ್ಟಪಡಿಸುತ್ತಾ ಹೋಗುತ್ತಾರೆ. ಬಸವಣ್ಣನಿಂದ ಅಲ್ಲಮನಿಗೆ ಮುಖ್ಯಸ್ಥಾನ ಕೊಡುವುದರ ಹಿಂದಿನ ಉದ್ದೇಶ ಏನಾಗಿರ ಬಹುದು? ಶೂನ್ಯಸಂಪಾದನೆಯ ಈ ಹಾಡು

"ಸ್ಪಟಿಕದ ಘಟದಂತೆ ಒಳ ಹೊರಗಿಲ್ಲ ನೊಡಾ
ವಿಗಡ ಚರಿತ್ರಕ್ಕೆ ಬೆರಗಾದನು, ನೋಡುವರೆ ಕಾಣಬರುತ್ತಿದೆ
ಮುಟ್ಟುವರ ಕೈ ಸಿಲುಕದು, ಹೊದ್ದವರ ಸಮೀಪ,
ಹತ್ತ ಸಾರಿ ಅತ್ತಿತ್ತ ತೋರುತ್ತದೆ. ಆಕಾರ ನಿರಾಕಾರವ ನುಂಗಿ
ಬಯಲ ಸಮಾಧಿಯಲ್ಲಿ ಸಿಲುಕಿತ್ತು ನೋಡಾ"[೩೨]

ಶೂನ್ಯ ಸಂಪಾದನೆಯಲ್ಲಿ ಬರುವ ಅಲ್ಲಮನೆ ಬೇರೆ, ವಚನಕಾರ ಅಲ್ಲಮನೆ ಬೇರೆ. ಅಲ್ಲಮನ ಪಾತ್ರದ ಒಂದು ಉದ್ದೇಶವನ್ನು ಚಿತ್ರಿಸುತ್ತದೆ. ಮುಂದೆ ವೀರಶೈವ ಧರ್ಮದ ಸಾಂಸ್ಥೀಕರಣದ ಅನುಸಂಧಾನಗಳನ್ನು ಪ್ರಮಾಣೀಕರಿಸುತ್ತಾ ಮುನ್ನಡೆದಿರಬೇಕು. ತತ್ವಪದಕಾರರೂ ಅಲ್ಲಮನನ್ನು ತಾತ್ವಿಕ ವಿಚಾರಗಳಿಂದ ಗುರುತಿಸುವಾಗ

"ಹರಿಹರ ಏನಾಯಿತು ನಿಮಗೆ ಪ್ರಭುರಾಯ, ಏನಾಯಿತು
ನಿಮಗೆ ಮಾಯಿಯ ನೋಡುತಾ, ಮಾಯಿಯ ಕಾಡುತಾ,
ಮಾಯಿ ಬಿಟ್ಕೊಡೆ ದನಿಯಿತ್ತೆ ಗುರುವೆ"[೩೩]

ಇದು ಅಲ್ಲಮನ ಜೀವನದ ವಿಸ್ತಾರತೆಯನ್ನು ರೂಪಿಸುತ್ತದೆ. ಜನಸಾಮಾನ್ಯರಾದಂಥ ತತ್ವಪದಕಾರರಿಗೆ ಅಲ್ಲಮನನ್ನು ಕಲ್ಪನೆಯ ನಾಯಕನ್ನನಾಗಿಸುವುದು ಅಂದಿನ ಸಮಾಜಕ್ಕೆ ಪರಿಣಾಮಕಾರಿ ಯಾದ ತಿರುವಾಗಿರಬೇಕೆಂದು ನಿರ್ಣಯಿಸಬೇಕಾಗುತ್ತದೆ. ಕರ್ನಾಟಕದ ಎಲ್ಲಾ ತತ್ವಪದಕಾರರು ಅಲ್ಲಮನ ತತ್ವದಿಂದ ಪ್ರೇರಿತರಾದರೆಂಬುದು ಅಷ್ಟೇ ಗಮನಾರ್ಹವಾದದ್ದು. ಭಕ್ತಿಗಿಂತ ಸಾಧನೆಗೆ ಯೋಗದಿಂದ ಸಿದ್ಧಿಗೆ ಇವರು ಕ್ರಿಯಾತ್ಮಕವಾದ ತಿರುವನ್ನು ಕೊಟ್ಟವರೆಂದು ನಂಬಬಹುದು.

ನೂರೊಂದು ವಿರಕ್ತರ ನೆಲೆಯಾದ ಹಂಪೆಯ ಪರಿಸರದಲ್ಲಿಯೂ ಅಲ್ಲಮನ ಅನುಯಾಯಿಗಳು ಅವತರಿಸಿದ್ದು ತಿಳಿದುಬರುವುದು. ಕಾರಣ ಆ ಪರಿಸರದಲ್ಲಿ ಗುಹೆಗಳಿಂದ ನಿರ್ಮಿತವಾದ ಗುಡ್ಡಗಳು

ನಾಥ, ಸಿದ್ಧ, ಆರೂಢರಿಗೆ ಅವರ ಏಕಾಂತ ಪರಿಸರಕ್ಕೆ ಪ್ರಾಸ್ತ್ಯ ಸ್ಥಳವಾಗಿದ್ದವು. ಇವರ ಗುಪ್ತ ಚಟುವಟಿಕೆಗಳಿಗೆ ಮನುಷ್ಯರಿಂದ ಯಾವುದೇ ಕಿರುಕುಳಕ್ಕೆ ಈ ಪ್ರದೇಶದಲ್ಲಿ ಆಸ್ಪದವಿಲ್ಲವಾಗಿತ್ತು. ಆದ್ದರಿಂದ ಈಗಲೂ ಅನೇಕ ಸಾಧು ಸಂತರು. ತುಂಗಭದ್ರಾ ನದಿ ತಟದ ಸ್ಥಳವನ್ನು ಅರಸಿ ಬರುವುದನ್ನು ಕಾಣುತ್ತೇವೆ. ನೂರೊಂದು ವಿರಕ್ತರು ಜೀವಿಸಿದ ಸಂದರ್ಭದಲ್ಲಿಯೇ ಜಲದುರ್ಗದಲ್ಲಿ ಸಂಗಮನಾಥ ಕಾಣಿಸಿಕೊಂಡನು. ಹೈದ್ರಾಬಾದ್ ಕರ್ನಾಟಕದ ಭಾಗದಲ್ಲಿ ಕೃಷ್ಣಾನದಿ ತೀರದಲ್ಲಿ ಕೊಡೇಕಲ್ ಬಸವಣ್ಣನು ಕಾಲಜ್ಞಾನದ ಹಾಡುಗಳನ್ನು ಹಾಡುತ್ತಾ ಬೆಳೆದನೆಂಬುದು ಅಷ್ಟೇ ಸತ್ಯ. ಈ ಆರೂಢರ ಪ್ರೇರಣೆಯ ತತ್ವಪದಕಾರರಿಗೆ ಆದ ನಿದರ್ಶನಗಳು ದೊರಕುವವು. ಕೊಡೇಕಲ್ ಬಸವಣ್ಣ ಮತ್ತು ತಿಂತಿಣಿ ಮೋನಪ್ಪನನ್ನು ಅನೇಕ ತತ್ವಪದಕಾರರು ತಮ್ಮ ಹಾಡುಗಳಲ್ಲಿ ಧ್ವನಿಪೂರ್ಣವಾಗಿ ಅಭಿವ್ಯಕ್ತಿಸುವುದನ್ನು ನೋಡಬಹುದು. ಕಡಕೋಳು ಮಡಿವಾಳಪ್ಪನೂ ಇವರ ಪ್ರೇರಣೆ ಪಡೆದಿರುವ ಸಾಧ್ಯತೆಯಿದೆ.

ಹೈದ್ರಾಬಾದ್ ಕರ್ನಾಟಕದ ಭಾಗದಲ್ಲಿ ಕಡಕೋಳು ಮಠ, ಕಾಡಸಿದ್ದೇಶ್ವರ ಮಠಗಳು ಈಗಲೂ ಪ್ರಸಿದ್ಧವಾದ ಮಠಗಳು. ವಚನಕಾರನಾದ ಕಾಡಸಿದ್ದೇಶ್ವರ ಮಠ ಸಿದ್ಧಗಿರಿಯ ಮೂಲ ಕಾಡಸಿದ್ದೇಶ್ವರರ ಪರಂಪರೆಯಾಗಿದ್ದು, "ಈ ಪರಂಪರೆಯವರು ತೋಂಟದ ಸಿದ್ದಲಿಂಗೇಶ್ವರ, ಸ್ವತಂತ್ರ ಸಿದ್ದಲಿಂಗೇಶ್ವರರ ಶಿಷ್ಯರು ನಾವೆಂದು ಹೇಳಿಕೊಳ್ಳುತ್ತಾರೆ. ಇವರು ಕಾಡಸಿದ್ದೇಶ್ವರನನ್ನು ಕುಲಗುರುವೆಂದು ಪೂಜಿಸುತ್ತಾರೆ. ಈ ಮಠದ ಸ್ವಾಮಿಗಳು ಜಂಗಮರಾಗಿದ್ದು, ಕಾಡಸಿದ್ದೇಶ್ವರ ಮಠಕ್ಕೆ ನಡೆದುಕೊಳ್ಳುವ ಶಿಷ್ಯರು, ಡೋಹರರು, ಬುರುಡರು, ಮಾಳಿಗಳಾಗಿರುವರೆಂದು ತಿಳಿದುಬರುತ್ತದೆ."[೩೪] ಡೋಹರರು, ಬುರುಡರು ಬೆಟ್ಟಗುಡ್ಡ ಪ್ರದೇಶಗಳಲ್ಲಿ ವಾಸಮಾಡುವ ಜನರಾಗಿದ್ದು ನಾಥ, ಕಾಪಾಲಿಕ, ಸಿದ್ಧಪಂಥದಿಂದ ಪ್ರಭಾವಿತರಾದವರೆಂದು ಗುರುತಿಸಬೇಕಾಗುತ್ತದೆ. ಇವು ತತ್ವಪದಕಾರರ ತನಕ ವಿಸ್ತರಿಸಿರಬೇಕೆನಿಸುತ್ತದೆ.

> "ತಾಯಿ ನುಡಿದಾದ ತಲಕಾಯಿ ಮ್ಯಾಗ ಟೆಂಕಾಯಿ ನುಡಿದಾದ
> ಬಲಿತ ಕಾಯಿ ತಲೆಯ ಮ್ಯಾಗ | ನುಡಿದಾದ ಶಿದ್ದಪ್ಪಸ್ವಾಮಿ
> ಕೊಟ್ಟಕಾಯಿ ನುಡಿದಾದ".[೩೫]

ಈ ಪದ್ಯದಲ್ಲಿ ಸಿದ್ದಪ್ಪ ಸ್ವಾಮಿ ಕೊಟ್ಟ ಕಾಯಿ ಎಂಬುದನ್ನು ಗಮನಿಸಬೇಕು.

ನೂರೊಂದು ವಿರಕ್ತರ ಸಂಸ್ಕೃತಿಗೂ, ತತ್ವಪದಕಾರರ ಸಂಸ್ಕೃತಿಗೂ ಇಂಥಲ್ಲೆ ವ್ಯತ್ಯಾಸ ಕಾಣಬಹುದು. ಆದರೆ ತತ್ವಪದಗಳು ಮೌಖಿಕ ಆಕರಗಳಾಗಿ ಕೆಳವರ್ಗದವರಲ್ಲಿ ಮಾನವೀಯ ತತ್ವವನ್ನು ಬಿಂಬಿಸುವುದು ಸ್ಪಷ್ಟವಾಗಿ ಕಂಡುಬರುತ್ತವೆ.

ಸ್ವರವಚನಕಾರರ ಪರಂಪರೆ, ಧರ್ಮದ ಅಗತ್ಯತೆಯನ್ನು ವಿಶ್ಲೇಷಿಸಬೇಕಾದರೆ, ಬರೀ ಧರ್ಮದ ತಾತ್ವಿಕತೆಯನ್ನು ಮುಂದಿಟ್ಟುಕೊಂಡು ನಿರೂಪಿಸಲು ಸಾಧ್ಯವಾಗುವುದಿಲ್ಲ. ಆ ಪರಂಪರೆಯ ಮುಖ್ಯ

ವ್ಯಕ್ತಿಯ ಆದರ್ಶಗಳೊಂದಿಗೆ, ಜನತೆಗೆ ಮುಟ್ಟಬಲ್ಲ ಮೌಲ್ಯಗಳು ಅವನಲ್ಲಿರಬೇಕು. ಅಂದಾಗ ಮಾತ್ರ ಇವುಗಳನ್ನು ಗುರುತಿಸಿಯೇ ನಾವು ಪ್ರೌಢದೇವರಾಯನ ಕಾಲವನ್ನು ಸಂಕಲನ ಯುಗವೆಂದು ಒಪ್ಪಿಕೊಂಡೆವು. ಇಲ್ಲಿಯ ಸತ್ಯದ ಹಿಂದಿನ ಪಾತ್ರಗಳನ್ನು ಪ್ರಭುತ್ವ ರೂಪಿಸಿದ ಜವಾಬ್ದಾರಿಯನ್ನು ಪೋಷಿಸುವುದು ಎಂದು ಹೇಳಬೇಕಾಗುತ್ತದೆ. ತನ್ನ ಅನುಯಾಯಿ, ಕವಿಗಳ ಸಿದ್ಧಾಂತಗಳನ್ನು ಸಮೂಹವನ್ನು ಪ್ರೌಢದೇವರಾಯನು ಅರಿತಿದ್ದನು. ಮಂತ್ರಿಯಾದ ಲಕ್ಕಣ್ಣ ದಂಡೇಶನ ಸಮಕಾಲೀನನಾದ ಗುರುಬಸವನು ಸ್ವರವಚನ ಸಾಹಿತ್ಯದ ಧೋರಣೆಗಳನ್ನು ವಿಸ್ತಾರವಾಗಿಸಿದನು. "ಉದಿತ ವೇದಾಗಮೋಕ್ತದೊಳು ಉಪನಿಷತ್ತು ಗಳೊಂದಿಸಿದ ಸಮ್ಮತದ ಸಂಗ್ರಹವಿದು ಎಂಬ ತತ್ವವನ್ನು ಹೆಮ್ಮೆಯಿಂದ ಹೇಳಿಕೊಳ್ಳುತ್ತಾನೆ. ಇದು ಯೋಗಿಗೆ ಸಹಜವಾದ, ಸ್ವಂತಿಕೆ. ಸೃಜನ ಸಂಯೋಜಿತ ಜ್ಞಾನವಿರಬಹುದು. ವೇದಗಳ ಛಾಯೆಯು ಇವರ ಕನ್ನಡದ ಸ್ತೋತ್ರಗಳನ್ನು "ಬಸವಸ್ತೋತ್ರ, ಮಿಶ್ರಸ್ತೋತ್ರ" ಎಂದು ಗ್ರಹಿಸುವಂತೆ, ಈ ಕವಿಗಳು ಸೃಷ್ಟಿಮಾಡಿದ್ದನ್ನು ಗಮನಿಸಬೇಕು. ಜಕ್ಕಣ್ಣಾರ್ಯನ ಏಕೋತ್ತರ ಶಟ್‌ಸ್ಥಲದ ಹಾಡುಗಳನ್ನು ಸ್ವರವಚನಗಳೆಂದು ತಿಳಿಸುತ್ತಾನೆ. ಗಿರೀಂದ್ರನು "ನಾಲ್ಕಡಿಂಗಳಿಂದ ಒಪ್ಪವಿಟ್ಟ ವಚನಗಳು" ಎಂದು ಜನರಿಗೆ ತಕ್ಷಣ ಮನಮುಟ್ಟುವ ಸಂದೇಶ ಕೊಡುತ್ತಾನೆ. ಶಿವಗಣ ಪ್ರಸಾದಿಯು "ಪರಮ ವೀರಶೈವ ಸಿದ್ಧಾಂತ, ತತ್ವಜ್ಞಾನ, ವೀರಶೈವಾಚಾರ ದಿವ್ಯ ವೇದಾಂತವೆಂದು ಅಭಿಪ್ರಾಯ ಮಂಡಿಸುತ್ತಾನೆ. ನೂರೊಂದು ವಿರಕ್ತರ ಸಿದ್ಧಾಂತಗಳನ್ನು ೧೭ನೇ ಶತಮಾನದ ಜನಪದರು ಸ್ವೀಕರಿಸಿರಲೇಬೇಕೆಂದು ಮಾಹಿತಿಗಳು ದೊರಕುತ್ತಿವೆ. "ಉತ್ತರ ಕರ್ನಾಟಕದ ಒಕ್ಕಲಿಗರು ಕಲ್ಯಾಣದ ಶರಣರ ಪ್ರಭಾವಕ್ಕೆ ಒಳಗಾದದಂತೆ, ನೂರೊಂದು ಶರಣರ ಪ್ರಭಾವಕ್ಕೆ ಒಳಗಾಗಿ ಹಾಡುಕಟ್ಟಿದ್ದಾರೆ. ನೂರೊಂದು ವಿರಕ್ತರಲ್ಲಿ "ಒಕ್ಕಲು ಶಾಂತ"ನೆಂಬ ಶರಣನ ಪ್ರಸ್ತಾಪ ಬರುತ್ತದೆ.

> "ನೂರೊಂದು ಶರಣಾರು ನೂರೊಂದು ಬಂದಾರು
> ಸಾರಿ ಹೇಳ್ಯಾನೋ ಒಕ್ಕಲಿಗೋ ಹೊಲಸುಗ್ಗಿ
> ಧೀರ ಕಾಯಕದ ದಿನವೆಂದು"[೩೬]

ಈ ವಿಚಾರಗಳನ್ನು ನೋಡಿದಾಗ ಅನುಭಾವಿ ಜಗತ್ತಿನ ರೈತನು, ತಾನೂ ಸಮುದಾಯದ ಪ್ರತಿನಿಧಿಯೆಂದು, ತನ್ನ ಕಾಯಕವನ್ನು ಧ್ಯಾನಿಸುತ್ತಾನೆ. ಜನಸಂಸ್ಕೃತಿಯ ತತ್ವಗಳು ಶೂನ್ಯ ಸಂಪಾದನೆಯ ಹಾಡುಗಳು, ಸಾಂಕೇತಿಕತೆಯೊಂದಿಗೆ ಹೊಸ ಹೊಸ ಅರ್ಥ ಪರಂಪರೆಯನ್ನು ಸದಾ ಪೋಷಿಸುತ್ತಲೇ ಸಾಗುವವು. ಆದರೆ ರಾಜತ್ವ, ಅನ್ಯದೇವರುಗಳ ಆರಾಧನೆಯನ್ನು ಸಾಂಸ್ಥಿಕ ಧರ್ಮಗಳು ಪ್ರತಿಭಟಿಸಿದ್ದರಿಂದ ಶರಣರನ್ನು ಅವಗಹನವಾದ ದಾರ್ಶನಿಕ ವಿಚಾರಗಳನ್ನು ಪ್ರಭುತ್ವದ ಮೇರು ರೂಪಕದ ಮೂಲಕವೇ ಕಟ್ಟಿಕೊಡುವುದು ಕಾಳಜಿ ಪರ ವಿಚಾರವೆಂದು ಸಮರ್ಥಿಸಬಹುದು.

ಆದರೆ ತತ್ವಪದಕಾರರು ತಾವು ಸಾಂಸ್ಥಿಕ ಧರ್ಮದವರೆಂದು ಎಲ್ಲಿಯೂ ಹೇಳಿಕೊಂಡಿಲ್ಲ. ಅಂಥ ಪ್ರಸ್ತಾಪಗಳು ಯಾವ ತತ್ವಪದಕಾರರ ಜೀವನದಲ್ಲಿಯೂ ಬಂದಿಲ್ಲ. ಆದರೆ ಇತ್ತೀಚಿನ ವಿಶ್ಲೇಷಣಾಕಾರರು ತತ್ವಪದಕಾರರ ಬದುಕಿನ ತತ್ವಕ್ಕೆ(ಸಾಂಸ್ಥಿಕ) ಮುದ್ರೆ ಒತ್ತುವುದು ತಪ್ಪಾಗುತ್ತದೆ. ಗ್ರಾಮೀಣರು ಹಾಡುವ ಈ ತತ್ವಪದಗಳನ್ನು ಸ್ವರವಚನಗಳೆಂದು ಶಿಕ್ಷಿತರು ಕರೆಯುತ್ತಾರೆ. ಆದರೆ ಹಳ್ಳಿಯ ಜನರು ಪ್ರಾರ್ಥನಾ ಪದ್ಯಗಳಿಗೆ, ಸ್ತೋತ್ರಾವಳಿಗಳಿಗೆ ಭಜನೆ ಹಾಡುಗಳೆಂದೇ ಸ್ಪಷ್ಟಪಡಿಸುವರು. ತಮ್ಮ ಹಾಡುಗಳ ಶಾಬ್ದಿಕ ರಚನೆಗಳನ್ನು ಮೌಖಿಕ ತತ್ವಪದಕಾರರು ಜನಪರ ನೀತಿಯೊಂದಿಗೆ ಸ್ವೀಕರಿಸಿದರೆಂದು ಗುರುತಿಸಬೇಕಾಗುತ್ತದೆ. ಇವೆಲ್ಲವೂ ಪುಷ್ಟೀಕೃತ ಲಯಜಗತ್ತಿನ ಮಾಹಿತಿಗಳೆಂದು ನಿರ್ಣಯಿಸಬೇಕಾಗಿದೆ. ಇಲ್ಲಿನ ಸಂರಚನೆಯು ನೂರೊಂದು ವಿರಕ್ತರ ಸಂಸ್ಕೃತಿಯು, ಜನಪದ ಸಂಸ್ಕೃತಿಯನ್ನೇ ತಮ್ಮ ಕಾಯಕ ಮಾಡಿಕೊಂಡಂಥ ಮದ್ದಳೆಯ ಶಾಂತ, ಬುಡುಬುಡುಕೆಯ ಶಾಂತ, ಡಂಗುರ ಶಾಂತರ ವ್ಯಕ್ತಿತ್ವವನ್ನು ಗುರುತಿಸುವಾಗ ಜನಪದ, ತತ್ವಪದ, ಸ್ವರವಚನಕಾರರ ಮಿಶ್ರ ಪ್ರತಿಕ್ರಿಯೆಗೆ ಇಲ್ಲಿ ಅವಕಾಶ ಮಾಡಿಕೊಡುತ್ತದೆ. ತನ್ನ ಹಿಂದಿನ ಪಾರಂಪರಿಕ ಸಂಬಂಧಗಳ ಅನುಭೂತಿಯನ್ನು ಮುಂದು ಮಾಡುತ್ತದೆ. "ನನ್ನ ಅಂಗಾಂಗದಲ್ಲಿ ಅಲ್ಲಮನೆ ಬಂದು ನಾಟ್ಯವಾಡುತ್ತಾನೆಂದು ಮದ್ದಳೆಯ ಶಾಂತನು ಹೇಳಿದರೆ, ಡಮರುಗ ಕೈಯಲ್ಲಿ ಹಿಡಿದು ಭವಿಷ್ಯ ನುಡಿಯುವ ಬುಡುಬಡುಕೆಯ ಶಾಂತನು ವಿಜಯ ನಗರದ ಬೀದಿಯಲ್ಲಿ "ಏಕದೇವೋ ಶಿವನೆಂದು" ಡಂಗುರ ಸಾರುವ, ಡಂಗುರ ಶಾಂತರಂಥ ವಿರಕ್ತ ಜನಪದರು, ತತ್ವಪದ ಹಾಡಿನ ಕಾಯಕದೊಂದಿಗೆ ಗುರುತಿಸಿಕೊಳ್ಳುತ್ತಾರೆ."[೩೭] ಲಿಖಿತ ಪರಂಪರೆಯ ವ್ಯವಸ್ಥೆಯು ಸೃಜನಶೀಲ ಮನಸ್ಸುಗಳಿಗೆ ಮುದ ನೀಡುವುದರೊಂದಿಗೆ ಅಲ್ಲಮನ ಪರಂಪರೆಯನ್ನು ಮುಂದುವರಿಸುವ ಸಾದೃಶ್ಯತೆಯನ್ನು ನೆನಪಿಸುತ್ತದೆ. ಸ್ವರವಚನಕಾರರ ಶಾಬ್ದಿಕ ನುಡಿಗಳು ತತ್ವಪದಗಳಾಗಿ ಮುಂದಿನ ಮೌಖಿಕ ಸಂತರಿಗೆ ಪ್ರೇರಣೆಯಾಗಿದ್ದವೆಂದು ಹೇಳಬೇಕಾಗುತ್ತದೆ.

## ೨.೪. ಕೈವಲ್ಯ ಪದಗಳು

ಕ್ರಿ.ಶ.ಹದಿನೈದನೇ ಶತಮಾನದಲ್ಲಿ ನಿಜಗುಣ ಶಿವಯೋಗಿಗಳು ಜೀವಿಸಿದ್ದರೆಂದು ತಿಳಿದುಬರುತ್ತದೆ. ಶೈವ, ವೀರಶೈವ ಎಂಬ ಸಮತೆಯಿಂದ ಹುಟ್ಟಿಕೊಂಡಂಥ ಇವರ ಹಾಡುಗಳು ಅಂತರಂಗದ ಹಾಡುಗಳೆಂದು ಗುರುತಿಸಿ ಅನುಭಾವದ ಪದಗಳೆಂದು ಕರೆಯುವ ಪ್ರತೀತಿಯಿದೆ. ಆಕರಗಳ ಅರ್ಥದಲ್ಲಿ ಸ್ವರವಚನಗಳಂತೆ ಕಂಡರೂ, ಕೈವಲ್ಯದ ಹಾಡುಗಳು ಮೋಕ್ಷದ ಪದಗಳೆಂದು ಸ್ಪಷ್ಟವಾಗುತ್ತದೆ.

ಕನ್ನಡದಲ್ಲಿ ಕೈವಲ್ಯವೆಂಬ ಮಾತನ್ನು ಹುಟ್ಟು ಹಾಕಿದವರು ನಿಜಗುಣಶಿವಯೋಗಿಗಳೇ ಅಥವಾ ಅದಕ್ಕೂ ಪೂರ್ವದಲ್ಲಿ ಬರುವ ಸಕಲೇಶ ಮಾದರಸನೇ? ಎಂಬ ಪ್ರಶ್ನೆಗಳು ಬರುತ್ತವೆ. ಸಕಲೇಶ ಮಾದರಸನ ಹಾಡಿನಲ್ಲಿ ಕೈವಲ್ಯವೆಂಬ ಪದ ಸಿಗುವುದರಿಂದ "ಹುಟ್ಟಿದೆಡೆಯ ಬಿಟ್ಟಿಮರನೆ, "ಕೈವಲ್ಯಕೆ"

ಪುಷ್ಪವಾದ ಹೆಮ್ಮರನೇ, ಮೆಟ್ಟಿ ತ್ರಿಪುಟಿಯ ಕೀಲ ಬೆಚ್ಚಿದ ಮರನೆ'' ಸಕಲೇಶನ ಹಾಡಿನಲ್ಲಿ ಕೈವಲ್ಯ ಪದದ ಸಾಧ್ಯತೆಗೆ ಇಲ್ಲಿ ಮರುವಿವೇಚನೆ ಮಾಡಬೇಕಾಗುತ್ತದೆ.ಈ ಶಾಬ್ದಿಕ ಆಕೃತಿಯನ್ನು ಮನಗಂಡು, ಇಲ್ಲಿ ಹೀಗೆ ಊಹಿಸಬಹುದು.

ಹನ್ನೆರಡನೇ ಶತಮಾನದ ಶರಣರ ವಚನಗಳಲ್ಲಿ ಎಲ್ಲಿಯೂ ಕೈವಲ್ಯವೆಂಬ ಪ್ರಸ್ತಾಪವಿಲ್ಲ. ಈ ಕೈವಲ್ಯವೆಂಬ ಪದದ ಬಳಕೆ ತತ್ವಪದಕಾರರ ಹಾಡುಗಳ ಶೀರ್ಷಿಕೆಯ ತನಕ ಮುಂದುವರಿದಿದೆಯೆಂದು ಗಮನಿಸಲೇಬೇಕಾಗುವುದು. ಉದಾ : ಗಬ್ಬೂರು ಹಂಪಣ್ಣನ ಕೈವಲ್ಯ ದೀವಿಗೆ, ಹೇರೂರು ವಿರುಪಣ್ಣನ ಕೈವಲ್ಯ ಪದ, ಶಂಕರಾನಂದರ ಕೈವಲ್ಯನವನೀತ, ಬಾಲರಾಮಪ್ಪನವರ ಕೇವಲಾತ್ಮಕ ಶತಕಮು, ಆದಿ ಅಮಾತ್ಯಪ್ಪನ ಕೈವಲ್ಯ ನವನೀತ ಪದಗಳ ಸಮೀಕರಣಗಳು ತತ್ವಪದಕಾರರ ಶೀರ್ಷಿಕೆಗಳಲ್ಲಿಯೇ ಕಾಣುತ್ತೇವೆ. ನನ್ನ ಗ್ರಹಿಕೆಯಂತೆ ಪ್ರಧಾನ ಕೈವಲ್ಯ ಸಂಸ್ಕೃತಿಯ ಅಂಶಗಳು, ಶೈಲಿ, ಛಂದೋಬದ್ಧ ಲಯ, ನಾದಗಳು, ಕೈವಲ್ಯ ಮತ್ತು ತತ್ವಪದಕಾರರ ನಡುವಿನ ಸಂಸ್ಕೃತಿಯ ಮುಖಾಮುಖಿಯು ಆಗಿರಲೇಬೇಕು. ಈ ಜನಮುಖಿ ಮಾಧ್ಯಮವು ಪುನರ್‌ಸೃಷ್ಟಿಯೊಂದಿಗೆ ಶ್ರವಣ ಸಂವಹನದಲ್ಲಿ ವಾಚಿಸುವ ಪಠ್ಯಗಳೆಂದು ನಿಶ್ಚಿತ ಅರ್ಥದಲ್ಲಿ ಅಭಿಪ್ರಾಯ ಪಡಬಹುದು.

ಕೈವಲ್ಯದ ಹಾಡುಗಳು ಗುರುಸ್ತುತಿಯ ಮೂಲಕವೇ ಪ್ರಾರಂಭವಾಗುತ್ತವೆ. ಮುಂದೆ ಸ್ಥಲ ಗತಿಗಳಲ್ಲಿ ವಿಂಗಡಣೆಯಾಗುತ್ತಾ ಸಂಗೀತಶಾಸ್ತ್ರದ ದಾರಿಯನ್ನು ತೋರಿಸುವುದು ಕಂಡುಬರುತ್ತದೆ.

''ಶ್ರೀ ಗುರು ವಚನೋಪದೇಶವನಾಲಿಸಿದಾಗಳಹುದು ನರರಿಗೆ ಮುಕುತಿ'' ಎನ್ನುವ ಪ್ರಾಮಾಣಿಕ ವಿಚಾರದಲ್ಲಿ ಮುಪ್ಪುರಿಗೊಂಡದ್ದನ್ನು ನೋಡಬಹುದು. ಇಲ್ಲಿಯ ಒಂದೊಂದು ಸ್ಥಲದ ಉಪದೇಶಗಳು ಸ್ವಪ್ರಜ್ಞೆಯ ಮೂಲಕ ಅರ್ಥಪೂರ್ಣವಾಗಿ ಭಾಜನವಾದವುಗಳೆಂದು ಹೇಳಬಹುದು.

> ''ಶ್ರೀ ಗುರು ವಚನದಿಂದಧಿಕ ಸುಧೆಯುಂಟೆ?
> ರಾಗದಿಂ ಬೇರಿನ್ನು ಭುವಬೀಜಮುಂಟೆ?
> ನರಜನ್ಮದಿಂದಿಹದೊಳು ಮಿಗಿಲುಂಟೆ?''[೩೮]

ಕೈವಲ್ಯ ಸಾಹಿತ್ಯದಲ್ಲಿ ಗುರು ಮುಖ್ಯವಾಗಿದ್ದನ್ನು ನಾವಿಲ್ಲಿ ಗಮನಿಸಬಹುದು. ಅಂದಿನ ಗುರುವಿನ ಮಾತಿನ ಸುಧೆಯಿಂದ ಸಂಗೀತ ರಾಗದ ನಾದದಿಂದ ಈ ಸಂಸಾರವನ್ನು ಗೆಲ್ಲಬಹುದೆಂಬ ನಂಬಿಕೆಯನ್ನು ನಿಜಗುಣರು ಹುಟ್ಟು ಹಾಕಿದರು. ಈ ನರಜನ್ಮಕ್ಕೆ ಮುಕ್ತಿ ದೊರಕಬೇಕಾದರೆ ಮೋಕ್ಷ ಹೊಂದಬೇಕಾದರೆ ಗುರುಬೇಕೆನ್ನುವ ಮೌಲ್ಯಗಳು ಅಂದಿನ ಭಕ್ತನ ನಿಷ್ಠತೆಯನ್ನು ತಿಳಿಸುತ್ತದೆ.

ವಚನಕಾರರಾಗಲೀ, ಸ್ವರವಚನಕಾರರಾಗಲೀ, ಗುರುವನ್ನು ಪ್ರಧಾನವಾಗಿ ಕಂಡ ಘಟನೆಗಳು ಬಹಳ ಕಡಿಮೆ. ದಾಸರಾದರೇ ಈ ನೋವನ್ನುಂಡಿದ್ದರೆಂದು ಕನಕದಾಸ ಪುರಂದರದಾಸರ ಹಾಡುಗಳಲ್ಲಿ

ನೋಡಬಹುದು. "ಗುರುವಿನ ಗುಲಾಮನಾಗುವ ತನಕ, ದೊರೆಯದಣ್ಣಾ ಮುಕುತಿ" ಗುರುಶಿಷ್ಯ ಸಂಬಂಧವನ್ನು ಗುಲಾಮ ಅಥವಾ ಆಜ್ಞಾಪಾಲಕ ನೆಲೆಯಲ್ಲಿ ಗ್ರಹಿಸುವ ಪರಂಪರೆ ದಾಸರಲ್ಲಿ ನಿರ್ಮಾಣವಾಗಿತ್ತು. ತತ್ವಪದಕಾರನು "ಗುರುರಾಯ ಒಲಿದ ಮೇಲಮ್ಮ ಎನ್ನ ಶರೀರದ ಜಾತ್ರೆಯ ಮಾಡಿದನಮ್ಮ" ಶರೀರದ ಜಾತ್ರೆಯೆಂದಾಗ, ಸೊಕ್ಕಿದ ಅಷ್ಟಮದಗಳನ್ನು, ಗುರು ಶಾಂತ ಮಾಡಿಸಿದನೆಂಬ ತತ್ವ. ಈ ತತ್ವ ಪದಕಾರನಲ್ಲಿದೆ.

ಖೈನೂರು ಕೃಷ್ಣಪ್ಪ ಹೀಗೆ ಹೇಳುವನು. "ಗುರುವಿನ ಮಗನಾದ ಗುರುತವ ತಿಳಿಯಬೇಕು. ಗುರುವಿಲ್ಲದೆ ಕುರುಹೆಲ್ಲಿದಣ್ಣಾ". ಇಲ್ಲಿ ವೀರಶೈವನಿಗೂ, ಬ್ರಾಹ್ಮಣನಿಗೂ, ಸಾಮಾನ್ಯ ವರ್ಗದ ಗುರುವಿಗೂ, ವ್ಯತ್ಯಾಸವನ್ನು ಗಮನಿಸಬಹುದು. ಆದರೆ ನಿಜಗುಣರು ಅರಿತ ಗುರುವು ತತ್ವಪದಕಾರರು ಕಂಡ ಗುರುವು ಭಿನ್ನರಾಗಿದ್ದರೆಂದು ಸ್ಪಷ್ಟಪಡಿಸಬಹುದು. ಇವರ ಆಧ್ಯಾತ್ಮಿಕ ಬದುಕಿನ ಅನುಭವಗಳು, ಬೇರೆಯಾಗಿದ್ದವೆಂದು ಹೇಳಬಹುದು. ಅಲಕ್ಷಿತ ಅವೈದಿಕನಾದ ತತ್ವಪದಕಾರನು ತನ್ನ ಸಂಸ್ಕೃತಿಯ ಜನರಿಗೆ, ತನ್ನ ನೋವಿನ ಅನುಭವಗಳನ್ನು ಹೇಳಿಕೊಳ್ಳುವ ಸಂದರ್ಭಗಳು ದೊರಕದಾದಾಗ, ಸಮಾಜದ ಶಾಪದಿಂದ ಮುಕ್ತವಾಗುವ ಹಂಬಲದಿಂದ ತತ್ವಪದಗಳಲ್ಲಿ ಹಾಡಿದನೆಂದು ತಿಳಿಯಬಹುದು.

ನಿಜಗುಣ ಶಿವಯೋಗಿಗಳು ತಮ್ಮ ಹಾಡುಗಳನ್ನು ರಾಗ ಮಾಧ್ಯಮಗಳಿಗಾಗಿ ಬರೆದರೆ? ಅಥವಾ ಜೀವಿಯ ಕರ್ಮ ಸಿದ್ಧಾಂತಗಳನ್ನು ನೀತಿ ಮಾರ್ಗದಲ್ಲಿ ಹೇಳಲು ಪ್ರಯತ್ನಪಟ್ಟರೆ? ಎಂಬ ವಿಚಾರಗಳು ಬರುವುದು ಸಹಜ. ಏಕೆಂದರೆ ಸ್ವರವಚನಗಳಾಗಲಿ, ತತ್ವಪದಗಳಾಗಲಿ, ಕೈವಲ್ಯ ಸಾಹಿತ್ಯವಾಗಲಿ, ಭಿನ್ನವಾದ ಐತಿಹಾಸಿಕ ಸಂದರ್ಭಗಳಲ್ಲಿ ನಿರ್ಮಾಣವಾದಂಥವುಗಳು. ಇದಕ್ಕೆ ಸಮರ್ಥವಾದ ಆಧಾರಗಳು ನಿಜಗುಣರ ಕೈವಲ್ಯ ಪದ್ಧತಿ ಕೃತಿಯಿಂದ ಲಭ್ಯವಾಗುವುದು. ಸ್ವರವಚನಕಾರರ ಕಾಲದಲ್ಲಿಯೇ ಬರುವ ನಿಜಗುಣರನ್ನು ತೋಂಟದ ಸಿದ್ದಲಿಂಗ ಸಂತರಂತೆ ಏಕರೂಪದಿಂದ ಕಾಣಲು ಸಾಧ್ಯವಾಗುವುದಿಲ್ಲ. ತೋಂಟದ ಸಿದ್ದಲಿಂಗರ ಕುರಿತು ಪುರಾಣಗಳು ಪವಾಡಗಳು ಸೃಷ್ಟಿಯಾದಂತೆ ನಿಜಗುಣರ ಕುರಿತಾಗಿ ರಚನೆಗಳಾದದ್ದು ಬಹಳ ಕಡಿಮೆ. "ಸಿದ್ದೇಶ್ವರ ಪುರಾಣದಲ್ಲಿ ಸಿದ್ದಲಿಂಗೇಶ್ವರರು, ಹರದನಹಳ್ಳಿಯ ಮಠಕ್ಕೆ ಚನ್ನಬಸವೇಶ್ವರರಿಂದ ದೀಕ್ಷೆ ಪಡೆದರೆಂಬ ಪ್ರಸ್ತಾಪ ಬರುವುದು. ತುಮಕೂರಿನ ಗುಬ್ಬಿಯಲ್ಲಿರುವ ಸಿದ್ಧಲಿಂಗೇಶ್ವರರ ಗದ್ದುಗೆಗೆ ಈಗಲೂ ಭಕ್ತರು ಭಕ್ತಿಪೂರ್ವಕವಾಗಿ ನಡೆದುಕೊಳ್ಳುವುದನ್ನು ಕಾಣಬಹುದು. ಆದರೆ ನಿಜಗುಣರಿಗೆ ಯಾವುದೆ ರೀತಿಯಾದ ಗದ್ದುಗೆಯಿಲ್ಲ. ಇವರು ಧ್ಯಾನ ಮಾಡಿದ ಬೆಟ್ಟವನ್ನು ಶಂಭುಲಿಂಗನ ಬೆಟ್ಟವೆಂದು ಗುರುತಿಸಲಾಗುತ್ತದೆ.

ನಿಜಗುಣರು ಬದುಕಿದ ಕಾಲದ ಸಮಸ್ಯೆಗಳು, ರಾಜಕೀಯ ಮತ್ತು ಮಾನವತಾವಾದ ತತ್ವಗಳು ಒಂದು ರೀತಿಯಲ್ಲಿ ಭಾರತೀಯ ಭಕ್ತಿಪಂಥದ ಜೊತೆಗೆ, ಸಾಗುವ ಪ್ರಯತ್ನವೆ ಆಗಿದೆ. ಕವಿ ಬದುಕಿದ ಕಾಲದ ಮೌಲ್ಯಗಳನ್ನು ನಿರ್ಧರಿಸುವಾಗ ಇನ್ನೂ ಉತ್ತಮವಾದಂಥ ಊಹೆಯನ್ನು ಇಲ್ಲಿ ಮಾಡಬಹುದು.

ಅಂದಿನ ವೈಚಾರಿಕತೆಯ ಚೌಕಟ್ಟನ್ನು ರೂಪಿಸುವ ಪ್ರಯತ್ನದ ಹಿಂದೆ ಭಾಷಿಕ ಪಠ್ಯ ಕ್ರಮವನ್ನು ಅಂದಿನ ಕಾಲದಲ್ಲಿ ನಿಜಗುಣರು ಪರಿಣಾಮಕಾರಿಯಾಗಿ ಬಳಸಿಕೊಂಡರು. ಇವರಿಗೆ ದ್ರಾವಿಡ ದೇಶದ ಭಕ್ತಿಯ ಸಮತ ಪ್ರಯತ್ನ ಒಂದಾದರೆ. ಶೈವರ ಅರವತ್ತ್ಮೂರು ಜನ ಪುರಾತನರ ಸ್ತೋತ್ರಗಳನ್ನು ಕನ್ನಡದಲ್ಲಿ ಹಾಡಿದರು. ಭಿನ್ನ ಭಿನ್ನ ಆಲೋಚನಾ ಕ್ರಮಗಳೊಂದಿಗೆ ವ್ಯವಸ್ಥೆಯ ಜೊತೆಗೆ ಮುಂದುವರಿಸಿಕೊಂಡು ಹೋದರು. ಕನ್ನಡದಲ್ಲಿ ಕೈವಲ್ಯವೆಂಬ ಕಂಕಣ ಕಟ್ಟಿದ ಇವರ ಹಾಡುಗಳು ನಾಥ ಪರಂಪರೆಗೆ ಹೊಸ ಸಂಗತಿಯಾಗಿತ್ತೆಂದು ಹೇಳಬಹುದು. ಇವರ ಪುರಾತನ ತ್ರಿವಿಧಿ ಕೃತಿಯಲ್ಲಿ ಒಬ್ಬೊಬ್ಬ ಭಕ್ತನ ಜೀವಿತದ ಘಟನೆಗಳನ್ನು ಹಾಡುವಂಥ ಪ್ರೇರಣೆ ನಿಜಗುಣರಿಗೆ ಅಂದಿನ ಸಮಾಜದ ಜವಾಬ್ದಾರಿಯಾಗಿರಬೇಕು. ಮುಂದೆ ಪ್ರಭುತ್ವಗಳ ಶಕ್ತಿಯಿಂದ, ನೊಂದು, ಪಲಾಯನವಾದಿಯಾಗಿ ಕೈವಲ್ಯ ಮಾರ್ಗದ ಸೂಕ್ಷ್ಮತೆಯಲ್ಲಿ ಮರೆಯಾಗಿರಬೇಕು.

ಕನ್ನಡದ ಪ್ರಮುಖ ಕೈವಲ್ಯಕಾರರಾಗಿ ಸರ್ಪಭೂಷಣ, ಬಾಲಲೀಲ ಮಹಾಂತ, ಮುಪ್ಪಿನ ಷಡಕ್ಷರಿ ಶಿವಯೋಗಿಗಳು, ಕಾಣಿಸಿಕೊಳ್ಳುತ್ತಾರೆ. "ಸಕಲಕೆಲ್ಲಕೆ ನೀನೇ ಅಕಳಂಕ ಗುರುವೆಂದು ನಿಖಿಲಶಾಸ್ತ್ರವ ಪೇಳುತಲಿರೆ" ಈ ಹಾಡಿನಲ್ಲಿ ಕವಿಯ ಪ್ರಸನ್ನಯುತವಾದ ಆತ್ಮ ನಿವೇದನೆಯನ್ನು ನೋಡುತ್ತೇವೆ. ಮತ್ತು ಕೈವಲ್ಯ ಸಿದ್ಧಾಂತಗಳ ಮೂಲಕ ಸಂವಾದಗಳನ್ನು ಗ್ರಹಿಸುತ್ತೇವೆ.

ನಿಜಗುಣ ಶಿವಯೋಗಿಗಳು ಅಂದಿನ ಸಮಾಜದ ಜನರೊಂದಿಗೆ ತಾದಾತ್ಮಕ ಸಂಬಂಧ ಹೊಂದಬೇಕೆಂಬ ಹಂಬಲದಿಂದ ಶೈವತ್ವವನ್ನು ಮುಂದು ಮಾಡುತ್ತಾರೆ. ಆದರೆ ಏಕದೇವೋಪಾಸನ ತತ್ವದಿಂದ ವೀರಶೈವ ಧರ್ಮಕ್ಕೆ ಮುಖಾಮುಖಿಯಾಗುತ್ತಾರೆ. ಸಮಾಜದಲ್ಲಿ ಬೇರು ಬಿಟ್ಟಂಥ ಪರಮಾನುಭಾವ ಭೋದೆ, ಪಾರಮಾರ್ಥಿಕ ಗೀತೆ, ಅನುಭವಸಾರ ಹಾಡಿನ ಕೃತಿಯಲ್ಲಿ ಬೇರೆ ಬೇರೆ ರಾಗಗಳ ಪ್ರಸ್ತಾಪವು ಮುಂದಿನ ಹಾಡಿನ ಪರಂಪರೆಗೆ ಸಂಗೀತವನ್ನು ಶಾಸ್ತ್ರೀಯತೆಯ ಮೂಲಕ ಗ್ರಹಿಸಲು ಸಾಧ್ಯವಾಗುವುದು, ನಿಜಗುಣರ ಕೈವಲ್ಯ ಪದ್ಧತಿಯಿಂದ ನಿರ್ಣಯಿಸಬೇಕಾಗಿದೆ.

> "ವನಿತೆಯೊರಲಾಲವ, ನೆಲೆಯೆಂದು ಮೋಹವನು
> ಮಾಡುವರು, ಮುಕ್ತಿ ಪಡೆಯರಿ ನರರು ||ಪ||
> ಬಯಸುವುದು ಚಿತವಿತ್ತ ಚೆಲುವನೆನಿಸಿ, ನಿಂತವನಾಂತು
> ಒಲಿಸಿದೊಡನಿರುತಿರಲು, ಅನ್ಯರತಿಗೆ, ಹಂಬಲಿಸುವವರಂಬು
> ಜಾಕ್ಷಿಯರೆಡೆವಿಡದ"[1]

ಪುರುಷನು ಸ್ತ್ರೀಯ ಮೋಹದಿಂದ ಮುಕ್ತಿ ಪಡೆಯಲು ಸಾಧ್ಯವಿಲ್ಲ. ಆದ್ದರಿಂದ ಕೈವಲ್ಯವೆನ್ನುವುದು ವಿಶಾಲವಾದ ಅರ್ಥದಲ್ಲಿ ತಾತ್ವಿಕ ಸಂವಹನದ ಮಾಧ್ಯಮವೆಂದು ಸ್ಪಷ್ಟಪಡಿಸಬಹುದು. ನಿಜಗುಣರ ಮೌಲ್ಯಗಳು ಎಂದರೆ ನಾದದ ಪರಿಕರಗಳೆಂದು ಗ್ರಹಿಸಬೇಕಾಗುತ್ತದೆ.

ಕೈವಲ್ಯದ ನಿರೂಪಣೆಯ ಅರ್ಥಗಳು ಪರಸ್ಪರ ಗ್ರಹಿಕೆಯ ತತ್ವಗಳಾಗಿವೆ. ಅರ್ಥ ಜೀವವಾದರೆ ಮಾತು ದೇಹವಾಗುತ್ತದೆ. ಜೀವ ಮತ್ತು ದೇಹಗಳ ಸಂಬಂಧ ಮಧ್ಯಕಾಲೀನ ಸಾಹಿತ್ಯದಲ್ಲಿ ಬಹು ಚರ್ಚಿತ ಸಂಗತಿಯಾಗಿತ್ತು ಎನ್ನುವುದು ಮುಖ್ಯ ವಿಚಾರವಾಗಿದೆ. ಅವು ತತ್ವಗಳು ಮತ್ತು ಆಧ್ಯಾತ್ಮಿಕ ಹಾಡುಗಳಾಗಿವೆ. ಈ ಭಕ್ತಿಯ ಅನುಸಂಧಾನದಲ್ಲಿ ಸ್ವೀಕಾರ ಮತ್ತು ನಿರಾಕರಣೆಯ ಎರಡೂ ಮೌಲ್ಯಗಳು ಕೆಲಸ ಮಾಡಿವೆ. ಸ್ವೀಕಾರ ಅನಕ್ಷರಸ್ಥರ ಮೌಖಿಕ ತತ್ವಪದಗಳಲ್ಲಿ ಉಳಿದು ಬರುತ್ತದೆ.

"ಗುಡಿಯ ನೋಡಿರಣ್ಣಾ, ದೇಹದ ಗುಡಿಯ ನೋಡಿರಣ್ಣಾ" ಇಂಥಹ ತಾತ್ವಿಕ ವಿಚಾರಗಳನ್ನು ತತ್ವಪದಕಾರರು ಬಳಸಿದರು.

ವಚನಕಾರರೂ ದೇಹವನ್ನು ಗುಡಿಯಾಗಿ ಕಂಡವರು "ಕಾಲೇ ಕಂಬ ದೇಹವೇ ದೇಗುಲ, ಶಿರಹೊನ್ನ ಕಳಶವಯ್ಯ" ಶರಣರ ತತ್ವವನ್ನೆ ತತ್ವಪದಕಾರರು ಕಂಡಂಥ ನಿದರ್ಶನ ಈ ಮೌಖಿಕ ಹಾಡಿನಲ್ಲಿ ದೊರಕುತ್ತದೆ. ದೇಹದ ಚಿತ್ರಕ್ಕೆ ಕಾರಣ, ಅಂದಿನ ಕಾಲದ ಪರಿಸರ ಹಾಗೂ ಆಧ್ಯಾತ್ಮಿಕ ಸಂವೇದನೆಗಳ ಭಿನ್ನ ಆಯಾಮಗಳೆಂದು ಹೇಳಬಹುದು. ಮುಂದೆ ಈ ಸಾಹಿತ್ಯವು ಶಿಷ್ಟಜನರಿಗೆ ಮತ್ತು ಮಧ್ಯಮವರ್ಗದವರಿಗೆ ಪ್ರಧಾನವಾಗುತ್ತದೆ. ಸಾಮಾನ್ಯ ಜನರಿಗೆ ಪರಕೀಯವಾಗುತ್ತಾ ದೂರವಾಗುವುದನ್ನು ಸ್ಮರಿಸಬಹುದು. ಕಾರಣ ಅದ್ವೈತ ತತ್ವದ ಕ್ಲಿಷ್ಟ ನಿರೂಪಣೆಯ ಅನಿವಾರ್ಯತೆಯೆಂದು ಸ್ಪಷ್ಟಪಡಿಸಬಹುದು.

ಅಂದಿನ ಪ್ರಭುತ್ವ ಸಂಹಿತೆಯಲ್ಲಿ ಜಾತಿಯ ನಿಷ್ಟಸಂಬಂಧಗಳು ಬೇರೆಡೆಗೆ ಉಸಿರಾಡುತ್ತವೆ. ಜೈನ ರಾಜರ ಆಳ್ವಿಕೆ ಮುಗಿದರೂ, ಜೈನ ಸಂಸ್ಕೃತಿಮುಖಿಯಿಂದ ಜೈನ ಹಾಡುಗಳು ತಮ್ಮ ಸ್ವಸ್ಥಾನವನ್ನು ಉಳಿಸಿಕೊಂಡದ್ದನ್ನು ಗಮನಿಸಬಹುದು. ಪಂಪನ ಕಾಲದ ಶಾಸ್ತ್ರಸಾಹಿತ್ಯಕ್ಕೆ ಜೈನ ಹಾಡುಗಳು ಲಯ ಪರಿಕರಗಳು ಭಾಷಿಕ ಆಕೃತಿಯನ್ನು ಪುನಃ ನಿರ್ಮಿಸಿದ್ದನ್ನು ಕಾಣಬಹುದು. ರತ್ನಾಕರವರ್ಣಿಯಂಥ ಜೈನ ಕವಿಯು ಜೈನಧರ್ಮವನ್ನು ವಾಚಿಸುತ್ತಲೇ, ಅಂದಿನ ವೀರಶೈವ ಧರ್ಮಕ್ಕೆ ಮುಖಾಮುಖಿಯಾಗುತ್ತಾ, ಜೈನ ತತ್ವದ ಆಶಯಗಳನ್ನು ಜೀವಂತಗೊಳಿಸುವುದನ್ನು ಸ್ಮರಿಸಬಹುದು. ಪಂಪ ಮತ್ತು ರನ್ನ ಕವಿಗಳು ವಾಚಿಸಿದ ತೀರ್ಥಂಕರರ ಕತೆಗಳನ್ನು ಭಕ್ತಿಪಂಥದಲ್ಲಿ ರತ್ನಾಕರವರ್ಣಿಯು ಅನುಸಂಧಾನ ಮಾಡಲು ಪ್ರಯತ್ನಿಸಿರಲೇಬೇಕು. ಅಂದಿನ ನಿರ್ಣಾಯಕ ಸಂಘರ್ಷ ಭಕ್ತಿಪಂಥವು ಕವಲು ದಾರಿಗಳಿಗೆ ಆಶ್ರಯಕೊಟ್ಟಿತು. ಅವು ಮೌಖಿಕ ತೀರ್ಥಂಕರ ಹಾಡುಗಳಾದವು.

> "ತವರೂರ ಮರೆಯಿಸಿ, ನಿದ್ರೆಯ ತೊರೆಯಿಸಿ
> ಸವಿಗಳನರಯಿಸಿ, ನಮ್ಮ ದಿನರಾತ್ರಿಯೆನ್ನದೆ
> ಸುಖದೊಳೊಲಾಡಿಸುವ ವಗಡ ಯಾತರಿಂದಾಯಿತು."[೮೦]

ಜೈನ ಅಭಿವ್ಯಕ್ತಿಯು ಜಾನಪದ ಲಯಗಳೊಂದಿಗೆ ಸಂರಚನೆಯಾಗಿದ್ದನ್ನು ಗಮನಿಸಬಹುದು. ಅಂದಿನ ಧರ್ಮದ ಸಿದ್ಧಕಥಾ ವಸ್ತು ದರ್ಶನದ ಅಂಶಗಳು ಪುರಂದರದಾಸರು, ಕನಕದಾಸರಂಥ

ಹಿರಿಯರನ್ನು ಮಾದರಿಯಾಗಿ ಸ್ವೀಕರಿಸಿದ್ದು ಸ್ಪಷ್ಟವಾಗಿದೆ. ದಾಸರ ಹಾಡಿನ ಭಾವುಕತೆಯಿಂದ ಕಸಿಯಾಗಿ, ಜೈನ ಹಾಡಿಗೆ ಪ್ರೇರಿತವಾಯಿತು. ಮುಂದೆ ಜೈನ ತೀರ್ಥಂಕರ ಕತೆಗಳು ಮೌಖಿಕ ಚರಿತ್ರೆಗಳಾಗಿ ಜನಪದ ಪುರಾಣ ಕಾವ್ಯಗಳೊಂದಿಗೆ ಮಾರ್ಪಾಟಾದ ಅಂಶಗಳು ಸ್ಪಷ್ಟವಾಗಿ ಕಂಡುಬರುತ್ತವೆ. ಮುಂದೆ ಜನಪದ ಸಾಹಿತ್ಯದೊಂದಿಗೆ ಈ ಸಾಹಿತ್ಯ ತನ್ನ ರಕ್ಷಣೆ ಮಾಡಿಕೊಂಡ ಪರಿಯಿದಾಗಿದೆ.

ಜೈನರ ಪ್ರಭಾವ ಕುಗ್ಗಿದರೂ ಜೈನ ಹಾಡುಗಳ ರಚನೆಗೆ ಕುಂದು ಬರಲಿಲ್ಲ. "ಶಾಸ್ತ್ರದಾನ ಜೈನ ಧರ್ಮದ ಒಂದು ಅಂಗವಾದ್ದರಿಂದ, ಜೈನರ ಧಾರ್ಮಿಕ ಹಾಡುಗಳಿಗೆ ಶ್ರೀಮಂತರ ಪ್ರೋತ್ಸಾಹ ದೊರೆತಿದ್ದುದು ಗಮನಿಸಬಹುದು."[೪೧] "ಗದ್ಯಪದ್ಯ ಮಿಶ್ರಿತ ಕಾವ್ಯಂ ಚಂಪೂಕಾವ್ಯಂ" ಎಂಬ ನಿಷ್ಪೆಯ ಸಂಕಥನಗಳು ಕೀರ್ತನೆ ಮತ್ತು ವಚನ ಹಾಡುಗಳ ಅನುಸಂಧಾನಕ್ಕೆ ದೂರವೇ ಆದವು. ಆದರೆ ೧೮ನೇ ಶತಮಾನದ ತತ್ವಪದಕಾರರ ಮೌಖಿಕ ಸಾಹಿತ್ಯದೊಂದಿಗೆ ಉಳಿದವು.

ಭಿನ್ನ ಕಾಲ ಪರಂಪರೆಯಲ್ಲಿ ಭಕ್ತಿ ಪರಂಪರೆಗಳು ಒಂದು ಇನ್ನೊಂದರ ಪ್ರೇರಣೆ ಪಡೆದ ಮಾಹಿತಿ ದೊರಕುವುದು. ಅಂದಿನ ಸಂತರು ತಾವು ಬದುಕಿದ ಪ್ರದೇಶದ ಸುತ್ತಲೂ ಭಾಷಿಕ ಲಯವನ್ನು ಮೌಖಿಕ ನಿರೂಪಣೆಯ ಗೇಯತೆಯನ್ನು ಸೃಷ್ಟಿಸಿದ್ದು ತಿಳಿದುಬರುತ್ತದೆ. ಉತ್ತರ ಕರ್ನಾಟಕದ ಶಿಶುನಾಳ ಶರೀಫ್‌ರ ಭಾಷೆಯು ಜನಪದ ತತ್ವಗಳ ಲಯದೊಂದಿಗೆ, ಸೃಜಿಸಿದ್ದು ಬಹು ಗಮನಾರ್ಹ. "ಕೋಡಗನ ಕೋಳಿ ನುಂಗಿತ್ತಾ" ಹಾಡಾಗಲೀ, "ಅಳಬ್ಯಾಡ ತಂಗಿ, ಅಳಬ್ಯಾಡ" ಎನ್ನುವ ಹಾಡುಗಳು ಜಾನಪದ ಬೆಡಗಿನೊಂದಿಗೆ ಸಾಂಕೇತಿಕ ರೂಪದಲ್ಲಿ ಸಾಗುತ್ತವೆ. ಡಾ.ವೀರೇಶ ಬಡಿಗೇರರು "ಎಲ್ಲರಂತಾಗುವ ಒಡನಾಟದ ತತ್ವ ಈ ಲೋಕ ಹಾಗೂ ಇತರ ಲೋಕದ ಜನರೊಡನೆ ಎಲ್ಲರ ಹಾಗೆ ತಾನೂ ಸಂಬಂಧ ಹೊಂದುವುದು ಜನಪದ ಸಾಹಿತ್ಯ ಇದಕ್ಕೆ ಉತ್ತಮ ಉದಾಹರಣೆಯೆನ್ನುವರು." ಕೋಡಗನ ಕೋಳಿ ನುಂಗಿತ್ತಾ ನೋಡವ್ವಾ ತಂಗಿ, ಹಾಡಾಗಲೀ ಅಳಬ್ಯಾಡಾ ತಂಗಿ ಅಳಬ್ಯಾಡ ಎನ್ನುವ ಪದ್ಯಗಳ ಸೂಕ್ಷ್ಮತೆಯನ್ನು ಗಮನಿಸಬೇಕು. ಈ ನಿಟ್ಟಿನಲ್ಲಿ ದೇಸೀ ಸಾಹಿತ್ಯದ ಶ್ರೇಷ್ಟತೆಯನ್ನು ಗುರುತಿಸಲು ತತ್ವಪದಕಾರರ ಮಾನದಂಡಗಳಷ್ಟೆ ಸಾಲದು, ಜಾನಪದ ಧರ್ಮದ ಪವಿತ್ರತೆಯ ಅಂಶವನ್ನು ಗೇಯ ಪರಿಕರಗಳ ಮೂಲಕ ಗ್ರಹಿಸಬೇಕಾಗುತ್ತದೆ.

ಶಿಶುನಾಳ ಶರೀಫ ಪರಂಪರೆಯ ತತ್ವಪದಕಾರರು ಶಿಷ್ಟ ಸಂಸ್ಕೃತಿಯ ಹತ್ತಿರ ಬಾರದೇ, ಗ್ರಾಮೀಣ ಪರಿಸರದಲ್ಲಿಯೇ ಗುರುತಿಸಿಕೊಳ್ಳುತ್ತಾರೆ. ಇಂತಹ ಬಹುರೂಪಿ "ಮೌಖಿಕ ಪಠ್ಯಗಳು ಸಮಾಜದಲ್ಲಿ ಎಲ್ಲೂ ಭಿನ್ನತೆಯಿಂದಾಗಿ ಒಡಕು ಎದುರಾಗುವುದಿಲ್ಲ. ತಮ್ಮ ತಮ್ಮ ನಾಲಿಗೆಗೆ ಭಾಷೆಯೆಂಬ ಜ್ಯೋತಿಯು, ಭಾಷೆಯೆಂಬ ಗುರುವು, ಭಾಷೆಯೆಂಬ ನಾದವು ಒಲಿದು ಬರಲಿ ಎಂದು ಪ್ರಾರ್ಥಿಸಿ ಕೊಳ್ಳುವುದನ್ನು ಗಮನಿಸಬಹುದು."[೪೨]

ಹದಿನೆಂಟನೇ ಶತಮಾನದ ಸಂತರಿಗೆ ಭಕ್ತಿಯೆಂಬ ಪರಿಕಲ್ಪನೆಯ ಜವಾಬ್ದಾರಿ ಅವರಿಗಿದ್ದಿತು. ಆದ್ದರಿಂದ ವಚನಕಾರರ ಮೌಲ್ಯಗಳನ್ನು ತಮ್ಮ ಇಷ್ಟಕ್ಕೊಗ್ಗುವಂತೆ ರೂಪಿಸಿ, ಸೋಸಿ ಹಾಡಿದರು. ಮೌಖಿಕ ಹಾಡುಗಾರರು ಮನೋರಂಜನೆ ನೀಡುವುದರೊಂದಿಗೆ, ಇದನ್ನೇ ವೃತ್ತಿಯನ್ನಾಗಿ ಮಾಡಿಕೊಂಡ ಕಲಾತ್ಮಕ ವಿಚಾರ ಹೀಗಿದೆ. ಭೈರವೇಶ್ವರ ಕಾವ್ಯದಲ್ಲಿ ಬಹುರೂಪಿ ಚೌಡಯ್ಯನಿಗೆ "ಜಾತಿಗಾರ" ಎಂದು ಕರೆಯುತ್ತಾರೆ. ಬಸವಣ್ಣನ ಈ ವಚನದಲ್ಲಿಯೂ ಸಹಿತಾ "ಮಾತಿನಂತೆ ಮನವಿಲ್ಲದೇ ಜಾತಿ ದೊಂಬರ ಮೆಚ್ಚ ನಮ್ಮ ಕೂಡಲ ಸಂಗಮದೇವಾ" ವೇಷಗಾರರೆಂದರೆ ಬಹುರೂಪಿ ವೇಷಗಾರರೆಂದೂ ಬಳಸುತ್ತೇವೆ.

ಇತ್ತೀಚಿಗೆ ತತ್ವಪದಕಾರರೂ ವೃತ್ತಿ ಮೇಳದವರಾಗಿ, ಭಜನೆ ಹಾಡುಗಳೊಂದಿಗೆ ಕಾಣಿಸಿಕೊಳ್ಳುತ್ತಾರೆ. ಜನಪದರು ವೃತ್ತಿಗಾಗಿ ಹಾಡಿದರೆ, ತತ್ವಪದಕಾರರು ಸ್ವಸಂತೋಷಕ್ಕಾಗಿ ಆತ್ಮ ವಿಮರ್ಶೆಗಾಗಿ ಭಜನೆ ಹಾಡುಗಳನ್ನು ಹಾಡುವ ಸಂಪ್ರದಾಯದ ಸಮರ್ಥನೆಗಳನ್ನು ಕಾಣಬಹುದು. ಇವರು ಭಜನಾ ಮಾಧ್ಯಮದೊಂದಿಗೆ ಮೌಖಿಕ ಭಾಷೆಯ ಧನ್ಯತೆಯೊಂದಿಗೆ ತಮ್ಮದೇ ಆದ ಕೆಲವು ಗುಂಪುಗಳನ್ನು ಪೋಷಿಸುವರು. ಸಾಮಾನ್ಯ ವರ್ಗದಿಂದ ಬಂದ ಇವರು ತಮ್ಮ ದಿನದ ಅನುಭವಗಳನ್ನು ಭಜನೆಯ ಮಾಧ್ಯಮದಲ್ಲಿ ಹಾಡಿ ಸಮೃದ್ಧತೆಯನ್ನು ತಂದರು. ಆತ್ಮಾವಲೋಕನಕ್ಕಾಗಿ ಹುಟ್ಟಿಕೊಂಡಂಥ ಈ ಮೇಳಗಳು, ಕಾಲಾಂತರದಲ್ಲಿ ಜಾನಪದ ಸೊಗಡಿನೊಂದಿಗೆ ಮಾತನಾಡಿದ್ದು ಸ್ಪಷ್ಟವಾಗುವುದು. "ಏಕದಾರಿಯ ಬದಲು ಪಾರಿಜಾತ, ಸಣ್ಣಾಟಗಳ ಪ್ರಭಾವದಿಂದ ಗುಂಡದಾಳ, ಹಾರ್ಮೋನಿಯಂ, ಡಗ್ಗಾ, ದಪ್ಪಡಿಗಳ, ಪ್ರವೇಶವಾದವು. ಇದರಿಂದ ಭಜನೆಗೆ ರಂಜನೀಯತೆಯ ಜೊತೆಗೆ ಹಲವಾರು ಹೊಸ ಸಾಧ್ಯತೆಗಳು ಒದಗಿಬಂದ ಉಲ್ಲೇಖಗಳನ್ನು ನೋಡಬಹುದು."[೪೩]

ಭಾರತೀಯ ಭಕ್ತಿ ಪರಂಪರೆಯಲ್ಲಿ ಭಜನೆಗೆ ಪ್ರಥಮ ಸ್ಥಾನ ಸಂದಿದ್ದು ಕಾಣುತ್ತದೆ. ತಮಿಳು ಭಾಷೆಯಲ್ಲಿ ಭಕ್ತಿಪ್ಪಾಡಲ್, ತೆಲುಗಿನ ತತ್ವಾಲು ಮರಾಠಿಯಲ್ಲಿ ಭಜನ್, ಗೀತ್, ಸೂಫಿಗಳು ಹಾಡುವ ಖವ್ವಾಲಿಗಳು ಇಂಥ ಸಂರಚನೆಗಳು ಭಕ್ತಿಮಾಧ್ಯಮದ ಭಿನ್ನ ಭಾಷೆಯ ಭಿನ್ನ ಭಜನಾ ಪ್ರಕಾರಗಳೆಂದು ಗ್ರಹಿಸಬಹುದು. ಈ ಭಜನೆಯ ಸಂವಾದಗಳು ತತ್ವಪದ ನಾದಕ್ಕೆ ಅನೇಕ ಸೂಕ್ಷ್ಮ ಕೊಂಡಿಗಳೆಂದು ಮೇಲಿನ ಚರ್ಚೆಯಿಂದ ಸ್ಪಷ್ಟಪಡಿಸಲಾಗಿದೆ.

ಡಾ.ವೀರೇಶ ಬಡಿಗೇರ ಹೀಗೆ ಹೇಳುತ್ತಾರೆ. "ವೈಷ್ಣವ ಕವಿಗಳು, ತಮ್ಮ ಜೋಗುಳ ಗೀತ, ದೇವರ ನಾಮ ಮತ್ತು ದಿವ್ಯನಾಮ ಸಂಕೀರ್ತನೆಗಳನ್ನು ಜನಪದ ಕಲಾರೂಪಕಗಳ ಮೂಲಕ ಹಾಡಿದರು. ಗೋಪಾಲ ಕೃಷ್ಣಭಾರತಿ, ಅಣ್ಣಾಮಲೈ ರೆಡ್ಡಿಯಂಥವರು ಜನಮನದ ಹೊಸರೂಪಕಗಳನ್ನು ಉಳಿಸಿಕೊಂಡರೆಂದು ಸ್ಪಷ್ಟಪಡಿಸುತ್ತಾ ಕಾವಡಿಕ್ ಎಂಬ ಹೊಸ ಜನಪ್ರಿಯ ಗೀತಪ್ರಕಾರವನ್ನು ಸೃಷ್ಟಿಸಿದರು. ಮುರುಗನ್ ಭಕ್ತರು ಕಾವಡಿ ಹೊತ್ತು ಬೆಟ್ಟ ಏರುವಾಗ ಹಾಡುತ್ತಾರೆ ಎಂದು ಹೇಳುವರು."[೪೪]

ದಕ್ಷಿಣಭಾರತದ ಮಿಶ್ರ ಸಂಸ್ಕೃತಿಯ ಫಲದಿಂದ ಮೌಖಿಕ ಭಜನಾಗೀತೆಗಳು ತತ್ವಪದ ಸಾಹಿತ್ಯದ ಮೇಲೆ ದಟ್ಟ ಪ್ರಭಾವವನ್ನುಂಟು ಮಾಡಿದ್ದನ್ನು ಗಮನಿಸಬೇಕು. ಭಿನ್ನ ಭಾಷೆಯ ನಿರೂಪಣಾ ಕ್ರಮ ಒಂದೆಡೆಯಾದರೆ, ಜನಪದ ಭಾಷೆಯ ಕಥನ ಕಾವ್ಯಕ್ಕೆ ಅರ್ಥಪೂರ್ಣ ಸಂಬಂಧಗಳನ್ನು ಗುರುತಿಸಬಹುದು. ಜನಪದ ನಾಯಕ ದೇವರುಗಳಾದ ಜುಂಜಪ್ಪನ ಕಾವ್ಯ, ಮಂಟೇಸ್ವಾಮಿ ಕಾವ್ಯಗಳು ಕೆಳವರ್ಗದ ಜನರಿಗೆ ಭಾವುಕ ಭಕ್ತಿಯನ್ನುಂಟು ಮಾಡುವಲ್ಲಿ ನೆರವಾದವೆಂದು ಹೇಳಬಹುದು.

ಒಂದು ತತ್ವಪದಕಾರರು ಮತ್ತು ಜಾನಪದ ಸಂಸ್ಕೃತಿಯ ಮಧ್ಯದ ತಾತ್ವಿಕತೆಯಲ್ಲಿ ಕಂಡುಬರುವ ಮೌಖಿಕ ಬದಲಾವಣೆಗಳು ಒಂದು ಸುದೀರ್ಘ ಕಾವ್ಯವಾದರೆ, ಇನ್ನೊಂದು ಸಮಾಜ ಘಟನೆಯೊಂದಿಗೆ ಹೆಣೆದ ಜನಪದ ದೇಸೀ ಹಾಡುಗಳೊಂದಿಗೆ ಹೋಲಿಸಬಹುದು. ಈ ನಿಟ್ಟಿನಲ್ಲಿ ತತ್ವಪದಕಾರರು ಬದುಕಿನ ಬಿಡುಗಡೆಗಾಗಿ ಹಂಬಲಿಸುತ್ತಾರೆ. ತಮ್ಮ ಸಂಕುಚಿತ ಭಾವದಲ್ಲಿ ತಾವು ಕರ್ಮಿಗಳೆಂದು ಶರಣಾದಾಗ ಹೊಸ ಮಾರ್ಗ ಹುಡುಕುವುದನ್ನು ಕಾಣಬಹುದು. ಅದು ಭಕ್ತಿಯ ನಿತ್ಯ ಸತ್ಯದ ಆತ್ಮವಾಗುವುದು. ದ್ಯಾಗಾಯಿ ಹಜರತ್ ಸಾಬ್‌ನ "ಭಜನಾ ಪದ ಹಾಡೋ ಶರಟ ಕಟ್ಟಿ | ಭಾಳಾದಿನಕಾಗ್ಯಾದೋ ನಿನ್ನ ಬೆಟ್ಟಿ | ಹಜರತ್ ಕವಿದ್ಯಾಗಾಯಿ ದಾಟಿ | ನಿನ್ನ ಮನಸ್ಸಿಗೆ ಹಾಕಿ ನೋಡೋ ಚೆಲ್ವಿ |" ಈ ಭಜನಾ ಪರಂಪರೆಯನ್ನು ಒಪ್ಪಿಕೊಳ್ಳುವುದರೊಂದಿಗೆ, ಕೇಳು ಸಂಸ್ಕೃತಿಯನ್ನು ರೂಪಿಸಿತು. ಈ ಕೇಳು ಕಾವ್ಯಗಳ ಪ್ರೇರಣೆ ಅಂದಿನ ಕಾಲದಿಂದ ಕಲಿತ ಹೊಸ ಪಾಠವಾಗಿರಬೇಕೆಂದು ಹೇಳಬಹುದು.

ಹೀಗೆ ಇಲ್ಲಿಯ ಬಹುಮುಖಿ ಪಠ್ಯಗಳ ತತ್ವಪದಗಳನ್ನು ಅನೇಕ ವಿದ್ವಾಂಸರು ಸ್ವರ ವಚನಗಳೆನ್ನುವರು. ಕೈವಲ್ಯದ ಹಾಡುಗಳನ್ನು ಭಜನೆಯ ಹಾಡುಗಳೆನ್ನುವರು. ಆದರೆ ನಾನು ಇದುವರೆಗೂ ಚರ್ಚಿಸಿದ ಹಾಡುಗಳ ಆಂತರ್ಯದ ಒಳನೋಟಗಳು ಬೇರೆ ಬೇರೆ ಎನ್ನುವುದರಲ್ಲಿ ಸಂಶಯವಿಲ್ಲ. ಸ್ವರವಚನಗಳು, ಕೈವಲ್ಯ ಹಾಡುಗಳು, ಶಿಷ್ಟತೆಯೆಡೆಗೆ ವಾಲಿದರೆ, ತತ್ವಪದಗಳು ಗ್ರಾಮೀಣ ಬದುಕಿಗೆ ಚೈತನ್ಯ ತುಂಬಿಕೊಂಡಂಥವುಗಳು. ಬದುಕು ಪ್ರಮಾಣವಾದಾಗ ಅದು ಎಲ್ಲವನ್ನೂ ರೂಪಿಸುವ ಬದುಕುವ ತತ್ವವಾಗುತ್ತದೆ. ಲೋಕ ಗ್ರಹಿಕೆಯಲ್ಲಿ ಅವು ತತ್ವಪದಗಳೇ ಆಗಿ ಸಮಾಜದ ನೊಂದ ಆತ್ಮಗಳೊಂದಿಗೆ ಭಜನೆಯ ಹಾಡುಗಳೊಂದಿಗೆ ಮುಖಾಮುಖಿ ಸಂವಾದಗಳಾಗಿ ಮಾರ್ಪಡುತ್ತವೆ.

ಭಜನೆ ಮತ್ತು ಭಾಜಿನ ಪದಗಳನ್ನಿಟ್ಟುಕೊಂಡು ಹೀಗೆ ವಿಶ್ಲೇಷಿಸಬಹುದು. "ಭಜನೆ ಎಂದರೆ ಎಲ್ಲಾ ನೀನೇ ಎನ್ನುವ ಸಮರ್ಪಣ ಭಾವವಿದೆ. ಭಾಜಿನ ಎನ್ನುವಲ್ಲಿ ಅಹಂನ್ನು ಪರಮಾತ್ಮನನ್ನು ಪರಿಗಣಿಸದ ಗರ್ವ ಎನ್ನುವ ಅರ್ಥಬರುತ್ತದೆ. ಭಕ್ತನೊಬ್ಬ ಧನ್ಯತೆಯಿಂದ ಪರಮಾತ್ಮನನ್ನು ಕುರಿತು ಪ್ರಾರ್ಥಿಸಿ, ಸ್ತುತಿಸಿ, ಹಾಡುವಂಥ, ಭಕ್ತಿಗೀತೆಗಳನ್ನು ಭಜನೆಗಳೆಂದು ಗುರುತಿಸಬಹುದಾಗಿದೆ."[೬೫] ಭಜನೆ ಹಾಡುಗಳ ಆಯಾಮಗಳು, ತತ್ವಪದಗಳ ಆಶಯಗಳು ಎರಡೂ ಒಂದೇ ಮಾಧ್ಯಮದ ಅಡಿಯಲ್ಲಿ

ಬರುವ ಭಕ್ತಿಗೀತೆಗಳಾಗಿ ರೂಪುಗೊಂಡಂಥವುಗಳು. ಭಕ್ತಿಗೆ ತತ್ವಜ್ಞಾನ ಅನುಭಾವ ಬೆರೆತು ಹಾಡುವ ಆತ್ಮದ ಹಾಡುಗಳೆಂದು ಸ್ಪಷ್ಟಪಡಿಸಬಹುದು. ಭಜನೆ ವಾಚಿಸುವ ಸಂಪ್ರದಾಯದಲ್ಲಿ ಬೆರಕೆಯಾಗಿ ಕಾಲಾಂತರದಲ್ಲಿ ಮೇಳವಾಗಿ, ಜನಪದ ಮೇಳಗಳೊಂದಿಗೆ ಸಾಮ್ಯ ಹೊಂದುವುದನ್ನು ನೋಡಬಹುದು. ಜನಪದ ಧರ್ಮಗಳ ಚೌಡಿಕಿ ಪದಗಳು, ಡೊಳ್ಳಿನ ಹಾಡುಗಳು, ಗೊಂದಲಿಗರ ಹಾಡುಗಳಲ್ಲಿ ಬರುವ ಸ್ತುತಿ, ಆರಾಧನೆ, ಪ್ರಾರ್ಥನೆಗಳು ಒಂದೊಂದು ಧರ್ಮದ ಅನುಭವದ ಮೌಲ್ಯಗಳೊಂದಿಗೆ ಮಾತನಾಡುವವು. ಆದರೆ ಭಜನೆ ಹಾಡುಗಳಿಗೆ ಧರ್ಮದ ಬಂಧನವಿಲ್ಲ. ಇವರು ಧರ್ಮವನ್ನು ಬಿಟ್ಟವರು. ಖೈನೂರು ಕೃಷ್ಣಪ್ಪನ ಈ ಪದ್ಯದಲ್ಲಿ "ನಾ ಕಡಕೋಳ ಗುಲಾಮು, ನನ್ನ ಹೆಸರು ತಗೆಯಬ್ಯಾಡಾ ಇನ್ನೊಮ್ಮೆ ಗುರು ಹಾಕಿ ಕೊಟ್ಟ ಜಾಗೀರು ಇನಾಮು, ಸರ್ವರಿಗೆ ಮಾಡಲೇನು ಸಲಾಮು"

ಇಸ್ಲಾಂ ಧರ್ಮದ ಹಂಗನ್ನು ತೊರೆದು, ದೇವರನ್ನು ಒಲಿಸಿಕೊಳ್ಳುವ ಜವಾಬ್ದಾರಿಯನ್ನು ನೋಡಬಹುದು. ಮೇಲಿನ ನನ್ನ ಚರ್ಚೆ ತತ್ವಪದಗಳ ಹಿನ್ನೆಲೆಗೆ ಬೇಕಾಗಿರುವ ಶತಮಾನಗಳ ಗೇಯ ಲಕ್ಷಣದ ಪ್ರೇರಣೆಗಳ ಅಂಶವನ್ನು ಸಾಹಿತ್ಯಿಕ ಅನುಸಂಧಾನದ ಅಡಿಯಲ್ಲಿ ಗುರುತಿಸುವ ಪ್ರಯತ್ನವಾಗಿದ್ದು ಮುಂದಿನ ಅಧ್ಯಯನಕ್ಕೆ ಪ್ರೇರಕವಾಗಿದೆ.

**ಅಡಿಟಿಪ್ಪಣಿಗಳು**

೧. ಕಲಬುರ್ಗಿ ಎಂ.ಎಂ., ೧೯೭೩, **ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ**, ಪು.೨೮೭

೨. ವೀರೇಶ ಬಡಿಗೇರ, ೨೦೦೧, **ಭಕ್ತಿ, ಭಜನೆ ಮತ್ತು ಕೆಳವರ್ಗ**, ಪು.೭

೩. ವರದ ರಾಜನ್, ೧೯೭೦, **ತಮಿಳು ಸಾಹಿತ್ಯ ಚರಿತ್ರೆ**, ಪು.೧೯೫

೪. ಗುರುರಾಜ ದಾವಣಗೆರೆ, ೨೪.೦೯.೨೦೦೭, **ಸಾಪ್ತಾಹಿಕ ವಿಜಯ**

೫. ಶಿವಾನಂದ ಗುಬ್ಬಣ್ಣನವರು(ಸಂ), ೧೯೮೫, **ಶಿಶುನಾಳ ಶರೀಫರ ಗೀತೆಗಳು**, ಪು.೨೧

೬. ಬಸವರಾಜ ಎಲ್.(ಸಂ), ೧೯೯೦, **ಶಿವದಾಸ ಗೀತಾಂಜಲಿ**, ಪು.೮೮

೭. ಹಳ್ಳಿಕೇರಿ ಎಫ್.ಟಿ., ೧೯೯೬, **ಕೆರೆಯ ಪದ್ಮರಸರ ಮತ್ತು ಆತನ ವಂಶಜರು ಒಂದು ಅಧ್ಯಯನ**, ಪು.೧೯೫

೮. ಬೋರಲಿಂಗಯ್ಯ ಹಿ.ಚಿ.(ಸಂ), ೨೦೦೩, **ಬುಡಕಟ್ಟು ಅಧ್ಯಯನ**, ಸಂ.೧, ಪು.೫೮

೯. ಕಾಳೇಗೌಡ ನಾಗವಾರ(ಸಂ), ೨೦೦೦, **ಹಲವು ತೋಟದ ಹೂಗಳು**, ಪು.೫೨

೧೦. ಮೀನಾಕ್ಷಿ ಬಾಳಿ(ಸಂ), ೨೦೦೦, **ಖೈನೂರ ಕೃಷ್ಣಪ್ಪ**, ಪ್ರಸ್ತಾವನೆ

೧೧. ವೀರೇಶ ಬಡಿಗೇರ, ೧೯೯೯, **ಉತ್ತರ ಕರ್ನಾಟಕದ ಜಾನಪದ ಗೀತ ಮೇಳಗಳು, ಒಂದು ಸಾಂಸ್ಕೃತಿಕ ಅಧ್ಯಯನ**, ಪು.೨೫೫

೧೨. ಸ್ವಾಮಿ ಎಸ್.ಜಿ.(ಸಂ), ೧೯೯೬, ಕೂಡಲೂರ ಬಸವಲಿಂಗಪ್ಪ, ಪು.೨೩

೧೩. ವೆಂಕಟೇಶಮೂರ್ತಿ ಎಚ್.ಎಸ್., ೧೯೭೫, ಕೀರ್ತನಕಾರರು, ಪು.೨೪

೧೪. ನಾಗಭೂಷಣಸ್ವಾಮಿ ಓ.ಎಲ್., ೨೦೦೦, ತತ್ವಪದಗಳು ಪ್ರಾತಿನಿಧಿಕ ಸಂಕಲನ, ಪ್ರಸ್ತಾನೆ

೧೫. ಮರುಳಸಿದ್ದಪ್ಪ ಕೆ.(ಸಂ), ೨೦೦೪, ಸಂಗಾತಿ, ಪು.೨೮೦

೧೬. ಶಿವಾನಂದ ಗುಬ್ಬಣ್ಣನವರು, ೧೯೮೫, ಬರಕೋಪದ ಬರಕೋ

೧೭. ಶಾಂತರಸರು (ಸಂ), ೨೦೦೦, ತತ್ವಪದಗಳು ಪ್ರಾತಿನಿಧಿಕ ಸಂಕಲನ

೧೮. ವೀರೇಶ ಬಡಿಗೇರ, ೨೦೦೫ ಹಲಗೆ ಬಳಪ, ಪು.೭೩

೧೯. ವೀರೇಶ ಬಡಿಗೇರ(ಸಂ), ೨೦೦೫, ಹಸ್ತಪ್ರತಿ ಅಧ್ಯಯನ, ಸಂ.೨, ಸಂ.೧, ಪು.೫೯

೨೦. ಚಂದ್ರಶೇಖರಶಾಸ್ತ್ರಿ ಎಂ., ೧೯೯೨, ಸೂಗೂರೇಶ್ವರ ಪುರಾಣ, ಪು.

೨೧. ವೀರೇಶ ಬಡಿಗೇರ, ೨೦೦೫, ಪೂರ್ವೋಕ್ತ, ಪು.೭೩

೨೨. ಬಸವಲಿಂಗ ಸೊಪ್ಪಿನಮಠ(ಸಂ), ೨೦೦೦, ಗೂಗಲ್ಲ ಪರಪ್ಪಯ್ಯನ ತತ್ವಪದಗಳು, ಪು.೩೭

೨೩. ವೀರೇಶ ಬಡಿಗೇರ(ಸಂ), ೨೦೦೪, ಹಸ್ತಪ್ರತಿ ಅಧ್ಯಯನ, ಸಂ.೨, ಸಂ.೧, ಪು.೫೯

೨೪. ಕಲಬುರ್ಗಿ ಎಂ.ಎಂ., ೧೯೯೮, ಮಾರ್ಗ, ಸಂ.೨, ಪು.೪೩೫

೨೫. ಶಿವಾನಂದ ಗುಬ್ಬಣ್ಣನವರು(ಸಂ), ೧೯೮೫, ಶಿಶುನಾಳ ಶರೀಫರ ಗೀತೆಗಳು, ಪು.೨೪

೨೬. ಶಾಂತರಸರು(ಸಂ), ೨೦೦೦, ತತ್ವಪದಗಳು ಪ್ರಾತಿನಿಧಿಕ ಸಂಕಲನ, ಪು.೪೨೩

೨೭. ಅದೇ

೨೮. ವೆಂಕಟೇಶಮೂರ್ತಿ ಎಚ್.ಎಸ್., ೧೯೯೫, ಕೀರ್ತನಕಾರರು, ಪು.೧೩

೨೯. ವೀರೇಶ ಬಡಿಗೇರ, ೧೯೯೯, ಪೂರ್ವೋಕ್ತ, ಪು.೨೪೦

೩೦. ಅಮರೇಶ ನುಗಡೋಣಿ, ೨೦೦೨, ಶೂನ್ಯ ಸಂಪಾದನೆಗಳು ಸಾಂಸ್ಕೃತಿಕ ಮುಖಾಮುಖಿ, ಪು.೨

೩೧. ಬಸವರಾಜ ಎಲ್., ೧೯೯೦, ಶಿವದಾಸ ಗೀತಾಂಜಲಿ, ಪು.೨೬೦

೩೨. ಅದೇ, ಪು.೪೯

೩೩. ಶಾಂತರಸರು(ಸಂ), ೨೦೦೦, ತತ್ವಪದಗಳು ಪ್ರಾತಿನಿಧಿಕ ಸಂಕಲನ, ಪು.೪೨೨

೩೪. ಸಿದ್ಧಯ್ಯ ಪುರಾಣಿಕ, ೧೯೯೨, ಶರಣ ಚರಿತಾಮೃತ, ಪು.೫೫೮

೩೫. ಶಾಂತರಸರು(ಸಂ), ೨೦೦೦, ತತ್ವಪದಗಳು ಪ್ರಾತಿನಿಧಿಕ ಸಂಕಲನ, ಪು.೩೬

೩೬. ಶಿವಾನಂದ ವಿರಕ್ತಮಠ, ೧೯೭೮, ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ, ಪು.೯೬

೩೭. ಅದೇ,

೩೮. ವಿದ್ಯಾಶಂಕರ(ಸಂ), ೧೯೭೫, ನಿಜಗುಣರ ಸಮಗ್ರ ಕೃತಿಗಳು, ಪು.೫೫

೩೯. ಅದೇ, ಪು.೪೬

೪೦. ಹಂಪ ನಾಗರಾಜಯ್ಯ, ೧೯೭೫, ಸಾಂಗತ್ಯ ಕವಿಗಳು, ಪು.೧೫೬

೪೧. ಶಿವರುದ್ರಪ್ಪ ಜಿ.ಎಸ್.(ಸಂ), ಭಕ್ತಿ ಸಾಹಿತ್ಯದಲ್ಲಿ ಪ್ರತಿಭಟನೆಯ ವಿಧಾನಗಳು, ಪು.೫೩

೪೨. ವೀರೇಶ ಬಡಿಗೇರ ಸಂ., ೨೦೦೫ ಹಸ್ತಪ್ರತಿ ಅಧ್ಯಯನ, ಸಂ.೨, ಸಂ.೧, ಪು.೬೨

೪೩. ವೀರೇಶ ಬಡಿಗೇರ, ೨೦೦೧, ಭಕ್ತಿ, ಭಜನೆ ಮತ್ತು ಕೆಳವರ್ಗ, ಪು.೨೫

೪೪. ಅದೇ, ಪು.೧೨

೪೫. ಅದೇ, ಪು.೧೩

೩

# ರಾಯಚೂರ ಜಿಲ್ಲೆಯ ತತ್ವಪದಕಾರರು ಮತ್ತು ಅವರ ಸಾಹಿತ್ಯಕ ಆಯಾಮ

## ಜಿಲ್ಲೆಯ ಶರಣರ ಪರಂಪರೆ

ಕಲ್ಯಾಣದ ಶರಣರ ಸಂಸ್ಕೃತಿಯನ್ನು ಬಸವ ಪೂರ್ವಯುಗ, ಬಸವಯುಗ, ಬಸವೋತ್ತರ ಯುಗವೆಂದು ವಿಂಗಡಿಸಿಕೊಂಡು ಅಧ್ಯಯನ ಮಾಡುವುದು ಕಂಡುಬರುತ್ತದೆ. ಈ ಕಾಲ ಘಟ್ಟದಲ್ಲಿ ಬಸವಯುಗಕ್ಕೆ ಸೇರುವವರಲ್ಲಿ ಶಂಕರ ದಾಸಿಮಯ್ಯ ಮುಖ್ಯವೆನಿಸಿದರೆ, ಬಸವಯುಗಕ್ಕೆ ಸೇರುವವರಲ್ಲಿ, ಬಿಬ್ಬಿಬಾಚರಸ, ಆಯ್ದಕ್ಕಿ ಲಕ್ಕಮ್ಮ, ಮಾರಯ್ಯ, ಮುಕ್ತಾಯಕ್ಕರು ಮುಖ್ಯರಾಗುತ್ತಾರೆ. ಬಸವೋತ್ತರ ಯುಗಕ್ಕೆ ಸೇರುವವರಲ್ಲಿ ಉಳಿಯುಮೇಶ್ವರ ಚಿಕ್ಕಯ್ಯನ ಹೆಸರು ಪ್ರಮುಖವಾದದು. ಇವರೆಲ್ಲಾ ರಾಯಚೂರು ಜಿಲ್ಲೆಗೆ ಸೇರಿದವರಾಗಿದ್ದು ತಮ್ಮ ಜೀವನ ಹಾಗೂ ಸಾಧನೆಯಿಂದ ಒಟ್ಟು ಶರಣ ಪರಂಪರೆಯಲ್ಲಿ ಪ್ರಮುಖ ಅನುಭಾವಿಗಳಾಗಿ ಕಾಣುತ್ತಾರೆ.

ರಾಯಚೂರು ಜಿಲ್ಲೆಯ ತತ್ವಪದಕಾರರ ಕುರಿತು ಅಧ್ಯಯನ ಮಾಡಬೇಕಾಗಿರುವ ಪ್ರಸ್ತುತ ಸಂದರ್ಭದಲ್ಲಿ ಶಂಕರ ದಾಸಿಮಯ್ಯನಂಥ ಸ್ವತಂತ್ರ ಮನೋಭಾವದ ಶರಣರ ಕುರಿತು ಅವಲೋಕಿಸುವುದು ಸೂಕ್ತವೆನಿಸುತ್ತದೆ. ಇದರಿಂದ ನನ್ನ ಅಧ್ಯಯನಕ್ಕೆ ತಾತ್ವಿಕ ಚೌಕಟ್ಟು ದೊರೆತಂತಾಗುತ್ತದೆ.

ಬಸವಪೂರ್ವ ಯುಗಕ್ಕೆ ಸೇರುವ ಶರಣರಲ್ಲಿ ಶಂಕರ ದಾಸಿಮಯ್ಯ (ಕ್ರಿ.ಶ.೧೧೪೦) ಮುಖ್ಯ ಶರಣನಾಗಿದ್ದಾನೆ. ಮೂಲತಃ ಬಿಜಾಪುರ ಜಿಲ್ಲೆಯ ಕಂದಗಲ್‌ನಲ್ಲಿ ಹುಟ್ಟಿ ಬೆಳೆದ ಈತ ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲೂಕಿನ ನವಿಲೆ ಗ್ರಾಮಕ್ಕೆ ಬಂದು ನೆಲೆಸಿದ್ದು ತಿಳಿದುಬರುತ್ತದೆ. ಮುಂದೆ ಆಧ್ಯಾತ್ಮಿಕ ಒಲವಿನಿಂದ ಜಡೆಯ ಶಂಕರ ಲಿಂಗನ ಭಕ್ತನಾಗಿ ನಿಂತುಕೊಳ್ಳುತ್ತಾನೆ. 'ನಿಜಗುರು ಶಂಕರ ದೇವ ಅಂಕಿತದಲ್ಲಿ' ವಚನಗಳನ್ನು ಬರೆಯುತ್ತಾನೆ. ಸೂಜಿ ಕಾಯಕವಿಡಿದು ಜೀವಿಸುತ್ತಾ ತನ್ನ ಭಕ್ತಿ ಸಾಧನೆಯಿಂದ ಶಿವನಿಂದ ಹಣೆಗಣ್ಣು ಪಡೆದ ಎನ್ನುವ ಬಗ್ಗೆ ಐತಿಹ್ಯಗಳಿವೆ. ತನ್ನ ಹಣೆಗಣ್ಣಿನಿಂದ ಅನ್ಯದೈವದ ಪ್ರತಿಮೆಗಳನ್ನು ಸುಟ್ಟು ಹಾಕಿದ ಘಟನೆಗಳು ಈತನ ಕಾವ್ಯ ಪುರಾಣಗಳಲ್ಲಿ ದೊರಕುತ್ತವೆ.

ಕಲ್ಯಾಣ ಶರಣರಲ್ಲಿ ಬಹು ಮುಖ್ಯ ವಚನಕಾರಳಾಗಿರುವ ಮುಕ್ತಾಯಕ್ಕ ಬೆಳಗಾವಿ ಜಿಲ್ಲೆಯ ಮೊಸಳೆಕಲ್ಲು ಗ್ರಾಮಕ್ಕೆ ಸೇರಿದವಳೆಂಬ ಪ್ರತೀತಿಯಿದ್ದರೂ, ದೇವದುರ್ಗ ತಾಲೂಕಿನ ಮೊಸರುಕಲ್ಲಿಗೆ

ಸೇರಿದವಳು ಎಂಬುದನ್ನು ಡಾ.ಬಸವಲಿಂಗ ಸೊಪ್ಪಿಮಠರು ಸಮರ್ಥಿಸುತ್ತಾ ಬಂದಿದ್ದಾರೆ. ಈ ಗ್ರಾಮದಲ್ಲಿ ಹೆಚ್ಚಿನ ಜನರು ಮುಕ್ತಾಯಕ್ಕ ಎಂಬ ಹೆಸರನ್ನ ಇಟ್ಟುಕೊಳ್ಳುವುದು ಗಮನಾರ್ಹ. ಈ ಊರಲ್ಲಿ ಮುಕ್ತಾಯಕ್ಕಳ ಕಥನ ನೆನಪಿಸುವ ದೇವಸ್ಥಾನವಿದೆ. ಈಗಲೂ ಅಲ್ಲಿ ಪೂಜೆ ನಡೆಯುತ್ತದೆ. ಮುಕ್ತಾಯಕ್ಕಳ ಗುರುವಾದ ಅಜಗಣ್ಣನು ಮತ್ತು ಕೊನೆಯದಾಗಿ ಪ್ರಭುದೇವರು ಇಲ್ಲಿಗೆ ಬಂದು ತಪಸ್ಸು ಮಾಡಿದ್ದರೆಂಬ ವಿಚಾರಗಳು ತಿಳಿದುಬರುತ್ತದೆ. ಗೂಗಲ್ಲು ಗ್ರಾಮದಲ್ಲಿ ಪ್ರಭುದೇವರ ಗುಹೆ ಮತ್ತು ದೇವಸ್ಥಾನವಿದೆ. ಮುಕ್ತಾಯಕ್ಕನನ್ನು ಸಂಧಿಸಲು ಬಂದಾಗ ಇಲ್ಲಿ ತಪಗೈದಿರಬೇಕೆಂಬ ಸ್ಥಳೀಯ ಜನರ ಹೇಳಿಕೆಗಳು ಬಹು ಗಮನಾರ್ಹವಾದವುಗಳು.

ಜಿಲ್ಲೆಯ ಲಿಂಗಸೂಗೂರು ತಾಲೂಕಿನ ಗುಡುಗುಂಟಿ ಅಮರೇಶ್ವರ ಗ್ರಾಮದ ಮಾರಯ್ಯ ಲಕ್ಕಮ್ಮ ದಂಪತಿಗಳು ಕಲ್ಯಾಣ ಶರಣರ ಕಾಯಕ ತತ್ವವನ್ನು ಅನುಷ್ಠಾನಕ್ಕೆ ತಂದು ಆಚರಿಸಿದರು. ಆಯ್ದಕ್ಕಿ ಕಾಯಕದ ಮಾರಯ್ಯ ಹೆಚ್ಚು ಅಕ್ಕಿಯನ್ನು ಆರಿಸಿ ತಂದಾಗ, ಮಡದಿ ಲಕ್ಕಮ್ಮ ಅದನ್ನು ವಿರೋಧಿಸುತ್ತಾಳೆ. ಕಾಯಕದಿಂದ ಬಂದಷ್ಟು ಮಾತ್ರ ಶಿವಾರ್ಪಿತವೆಂದು ವೈಚಾರಿಕವಾಗಿ ತಿಳಿ ಹೇಳುತ್ತಾಳೆ.

ಪ್ರಸಾದ ಕಾಯಕಕ್ಕೆ ಇನ್ನೊಂದು ಹೆಸರಾದ ಬಿಬ್ಬಿಬಾಚಯ್ಯ ಗುಲ್ಬರ್ಗಾ ಜಿಲ್ಲೆಯ ಗಬ್ಬೂರಿನವನು. ಈತನು ಎನ್ನುವ ವಿಚಾರವು ಹಿಂದೆ ಸರಿದು, ಈತ ರಾಯಚೂರು ತಾಲೂಕಿನ ದೇವದುರ್ಗದ ಗೊಬ್ಬೂರಿಗೆ ಸೇರಿದವನೆಂಬ ವಾದಕ್ಕೆ ಡಾ. ಬಸವಲಿಂಗ ಸೊಪ್ಪಿಮಠರು "ಗೊಬ್ಬೂರು ಶ್ರೀ ಬಿಬ್ಬಿಬಾಚರಸರ" ಪುಸ್ತಕದಲ್ಲಿ ಸಮರ್ಥನೆ ನೀಡುತ್ತಾರೆ. ಗೊಬ್ಬೂರಿನಲ್ಲಿ ಕೇಳಿಬರುವ ಐತಿಹ್ಯದ ಪ್ರಕಾರ, ಬಿಬ್ಬಿಬಾಚರಸ ಕಲ್ಯಾಣದಿಂದ ಬರುವಾಗ, ಚನ್ನವೀರ ಎಂಬ ಹೆಸರಿನ ಜಂಗಮರೊಂದಿಗೆ ಗೊಬ್ಬೂರಿಗೆ ಬಂದನಂತೆ. ಈ ಚೆನ್ನವೀರರು ಬಸವಣ್ಣನ ಪ್ರಾರ್ಥನೆಯ ಮೇರೆಗೆ ಕಾಶ್ಮೀರದಿಂದ ಕಲ್ಯಾಣಕ್ಕೆ ಬಂದರು ಎಂದು ತಿಳಿಯಲಾಗುತ್ತದೆ. ಮುಂದೆ ಗೊಬ್ಬೂರಿನಿಂದ ರಾಯಚೂರು ತಾಲ್ಲೂಕಿನ ದೇವಸೂಗೂರಿನಲ್ಲಿ ನೆಲಸಿದ ಚೆನ್ನವೀರರು ಶ್ರೀ ಸೂಗೂರೇಶ್ವರರೆಂದು ಹೆಸರಾದದ್ದು ಕಂಡುಬರುತ್ತದೆ.

ಈಗಲೂ ಗೊಬ್ಬೂರಿನಲ್ಲಿ ಅರ್ಪಣೆ ಕಟ್ಟೆ ಎಂಬ ಸ್ಥಾನವಿದ್ದು, ಇಲ್ಲಿ ಚೆನ್ನವೀರರು ಬಿಬ್ಬಿಬಾಚರಸರು ಶಿವಾನುಭವ ಗೋಷ್ಟಿ ನಡೆಸುತ್ತಿದ್ದರೆಂದು ಸ್ಥಳೀಯ ಜನರು ಈಗಲೂ ಹೇಳುವರು. 'ಏಣಾಂಕಧರ ಸೋಮೇಶ್ವರ' ಅಂಕಿತದಲ್ಲಿ ಬಾಚಯ್ಯನ ಮೂನ್ನೂರು ವಚನಗಳು ದೊರತಿವೆ.

ಸಿಂಧನೂರು ತಾಲೂಕಿನ ದೇವರಗುಡಿ ಗ್ರಾಮದ ಶಾಸನದಲ್ಲಿ ಉಳಿಯುಮೇಶ್ವರ ಚಿಕ್ಕಯ್ಯನ ವಿವರಗಳು ದೊರಕುವವು. ಚಿಕ್ಕಯ್ಯನು ಶೈವ ಪರಂಪರೆ ಬಿಡದೆ ವೀರಶೈವ ಪರಂಪರೆಯನ್ನು ಒಪ್ಪಿಕೊಂಡ, ಆ ಸಂಧಿಕಾಲದ ಮುಖ್ಯ ಶರಣನಾಗಿದ್ದನೆಂದು ಈತನ ವಚನಗಳಿಂದ ವ್ಯಕ್ತವಾಗುತ್ತದೆ. "ಉಳಿಯುಮೇಶ್ವರ" ಅಂಕಿತದಲ್ಲಿ ಈತ ರಚಿಸಿರುವ ಎರಡು ವಚನಗಳಲ್ಲಿ ಲಿಂಗಾಂಗ ಸಾಮರಸ್ಯದ ವರ್ಣನೆ ಬಂದಿದೆ.

ಹೀಗೆ ರಾಯಚೂರು ಜಿಲ್ಲೆಗೆ ಸೇರಿದ ಎಲ್ಲಾ ಶರಣರು ಸದಾಚಾರ, ಸದ್ವಿಚಾರಗಳನ್ನು ಹುಟ್ಟಿಹಾಕುವುದರ ಮೂಲಕ ಅರಿವಿನ ಹಾದಿಯಲ್ಲಿ ಮುನ್ನಡೆಯುವುದೇ ನಿಜವಾದ ಆಧ್ಯಾತ್ಮಿಕವೆಂದು ಎಚ್ಚರಿಕೆಯನ್ನು ಕೊಟ್ಟವರಾಗಿದ್ದಾರೆ. 'ಬಾರಾಮಾಸ' ಬರೆದಂತಹ ಲಿಂಗಣ್ಣೊಡೆಯ, ಉಳಿಯುಮೇಶ್ವರ ಚಿಕ್ಕಯ್ಯ ಇವರಿಬ್ಬರೂ ರಾಯಚೂರು ಜಿಲ್ಲೆಯವರಾದರೂ ಶಿಷ್ಟ ಸಾಹಿತ್ಯ ಪರಂಪರೆಗೆ ಸೇರಿದ ಅನುಭಾವಿಗಳೆಂದು ಗುರುತಿಸಲಾಗಿದೆ.

ಇದುವರೆಗೂ ನಾನು ಚರ್ಚೆ ಮಾಡಿದ ಶರಣರ ಸ್ವತಂತ್ರವಾದ ದೀರ್ಘಮಾರ್ಗ ಮುಂದಿನ ತತ್ವಪದಕಾರರ ಮೇಲೆ ತನ್ನ ಗಾಢವಾದ ಪ್ರಭಾವವನ್ನು ಬೀರಿದ್ದು ಕಂಡುಬರುತ್ತದೆ. ತತ್ವಪದಕಾರರ ಧೋರಣೆ, ಸಾಹಿತ್ಯಕ, ತಾತ್ವಿಕ ವಿಚಾರಗಳು ಭಿನ್ನವಾಗಿ ಕಂಡರೂ ಮೂಲತಃ ಇವರೂ ಭಕ್ತಿಗೆ ಪ್ರೇರಿತರಾದವರು. ಭಕ್ತಿ ಸಾಹಿತ್ಯದಲ್ಲಿ ಇಬ್ಬರೂ ಒಂದಾಗುತ್ತಾರೆ. ಪ್ರಧಾನವಾಗಿ ಇಲ್ಲಿ ತತ್ವಪದಕಾರರ ಜೀವನ, ಸಾಧನೆ, ಚರಿತ್ರೆ ಅವಲೋಕಿಸುವುದು ಈ ಅಧ್ಯಾಯದ ಉದ್ದೇಶವಾಗಿದೆ. ಕೂಡಲೂರು ಬಸವಲಿಂಗರು ಜಿಲ್ಲೆಯ ಪ್ರಥಮ ತತ್ವಪದಕಾರನಾಗಿದ್ದು ಈ ಪರಂಪರೆಯು ಇವರಿಂದಲೇ ಮುಂದುವರಿದಿರುವುದನ್ನು ಗುರುತಿಸಬಹುದು.

### ೧. ಕೂಡಲೂರು ಬಸವಲಿಂಗ (ಕ್ರಿ.ಶ.೧೭೭೦-೧೮೪೦)

ಶ್ರೀ ಶಾಂತರಸರು 'ಎಡೆದೊರ ಅನುಭಾವ ಕವಿಗಳು'. ಈ ಪುಸ್ತಕದಲ್ಲಿ ಕೂಡಲೂರು ಬಸವಲಿಂಗರು ಜಿಲ್ಲೆಯ ಪ್ರಥಮ ತತ್ವಪದಕಾರನೆಂದು ಒಪ್ಪಿಕೊಳ್ಳುವುದಿಲ್ಲ. ಹುಳಿಯುಮೇಶ್ವರ ಚಿಕ್ಕಯ್ಯ ಮೊದಲ ಅನುಭಾವ ಕವಿ, ನಂತರದವರು ಕಲ್ಲೂರಿನ ಲಿಂಗಣ್ಣೊಡೆಯನೆನ್ನುವರು." ಉಳಿಯುಮೇಶ್ವರ ಚಿಕ್ಕಯ್ಯ ವಚನಕಾರರ ಸಾಲಿನಲ್ಲಿ ಬರುವ ಶರಣ. ಕಲ್ಲೂರಿನ ಲಿಂಗಣ್ಣೊಡೆಯನ ಹಾಡುಗಳು ದೊರೆತಿಲ್ಲ. ಗಣಪತಿ ಸ್ತೋತ್ರದ ಒಂದು ಹಾಡಿನಿಂದ ಇವನನ್ನು ಹಾಡುಗಾರ (ತತ್ವಪದಕಾರ)ನೆಂದು ಒಪ್ಪಿಕೊಳ್ಳಲಾಗುವುದಿಲ್ಲ.

ಆದರೆ ಇತ್ತೀಚಿನ ಸಂಶೋಧಕರಾದ ಡಾ.ಶಾಸ್ತ್ರೀಮಠ ಅವರು ಡಾ. ಬಸವರಾಜ ಸಬರದ ಅವರು ಕೂಡಲೂರು ಬಸವಲಿಂಗರ ಗರಿಷ್ಟ ಮಟ್ಟದ ಹಾಡುಗಳನ್ನು ನೋಡಿ, ಜಿಲ್ಲೆಯ ಪ್ರಥಮ ತತ್ವಪದಕಾರ ಕೂಡಲೂರು ಬಸವಲಿಂಗರೆಂದು ಒಪ್ಪಿಕೊಂಡಿದ್ದಾರೆ.

ಶಾಂತರಸರು ಇವರ ಕಾಲವನ್ನು ೧೭೭೦ ಎಂದು ಹೇಳಿದ್ದು ದೃಢವಾದರೂ ಇದರ ಹಿನ್ನೆಲೆಗೆ ಕಾರಣ ಗೂಗಲ್ಲು ಪರಪ್ಪಯ್ಯನ ಕಾಲವೂ ೧೭೮೦ ಎಂದು ಸ್ಪಷ್ಟಪಡಿಸಿದ್ದು ಕಂಡುಬರುತ್ತದೆ." ಡಾ.ಎಂ.ಜಿ.ಶಾಸ್ತ್ರಿಮಠ್ ಅವರು ಕ್ರಿ.ಶ.೧೭೨೫ ರಿಂದ ೧೭೯೬ ಆಗಿರಬಹುದೆಂದು ಊಹಿಸುತ್ತಾರೆ. ಡಾ.ಬಸವರಾಜ ಸಬರದ ಅವರು ಕ್ರಿ.ಶ.೧೭೭೦ ರಿಂದ ೧೮೪೦ ಎಂದು ಹೇಳುತ್ತಾರೆ.

ಇಲ್ಲಿ ಗೂಗಲ್ಲು ಪರಪ್ಪಯ್ಯನ ಕಾಲ ೧೭೮೦ ಎಂದು ಖಚಿತವಾದರೆ, ಆತನಿಗಿಂತ ಹಿರಿಯರಾಗಿರುವ ಇವರು ಕ್ರಿ.ಶ.೧೭೭೦ ಕ್ಕಿಂತ ಮುಂಚಿನವರು ಎಂಬುದು ಸ್ಪಷ್ಟವಾಗುತ್ತದೆ. ಎಲ್ಲಾ ಅಂಶಗಳನ್ನು ಗಮನಿಸಿ ಇವರ ಕಾಲ ಶಾಂತರಸರು ಹೇಳುವಂತೆ ೧೮ನೇ ಶತಮಾನ ಎಂದು ಇಟ್ಟುಕೊಳ್ಳಬಹುದು.

ಗುಲ್ಬರ್ಗಾ ಜಿಲ್ಲೆಯ ಯಾದಗಿರಿ ತಾಲೂಕಿನ ಬಳೆಚಕ್ರ ಗ್ರಾಮದಲ್ಲಿ ಮಹಾದೇವಪ್ಪ ಗಂಗಾಂಬೆಯವರ ಪುತ್ರರಾಗಿ ಕ್ರಿ.ಶ.೧೭೮೦ರಲ್ಲಿ ಜನಿಸಿದರು. ಈ ಮನೆತನದ ಕಾಯಕ ಕಾಯಿಪಲ್ಲೆ ಮಾರುವುದು ಎಂಬುದು ಗಮನಾರ್ಹ.

ಗ್ರಾಮದ ಅಯ್ಯನವರ ಮಠದಲ್ಲಿ ವಿದ್ಯಾಭ್ಯಾಸ ಮಾಡಿದ್ದರೆಂದು ತಿಳಿದುಬರುತ್ತದೆ. ಮಹಾಕಾವ್ಯಗಳನ್ನು ಹಾಡುವ ನಿಜಗುಣರ ಕೈವಲ್ಯಕ್ಕೆ ರಾಗ ಹಾಕುವ ಪರಿಸರದ ಮೂಲಕ ಬೆಳೆದರು. ಮುಸ್ಲಿಂರ ಆಳ್ವಿಕೆಯ ಸಂದರ್ಭದಲ್ಲಿ ಉರ್ದು, ಫಾರಸಿ, ಅರಬ್ಬಿ, ತೆಲುಗು ಭಾಷೆಗಳನ್ನು ಕಲಿತರೆಂಬುದು ಗಮನಾರ್ಹ. ಮನದಲ್ಲಿ ಸುಪ್ತವಾಗಿದ್ದ ಆಧ್ಯಾತ್ಮಿಕ ಹಸಿವು ಅಂತಮುರ್ಖಿಯಾಗುವಂತೆ ಪ್ರೇರೇಪಿಸುತ್ತಿತ್ತು. ತಂದೆ ತಾಯಿಗಳಿಗೆ ಇವರು ಸಮಸ್ಯೆಯಾದರೆಂದು ಊಹಿಸಬಹುದು. ಮುಂದೆ ಇವರನ್ನು ಶಾಲೆ ಬಿಡಿಸಿ ದನ ಕಾಯುವ ಕೆಲಸಕ್ಕೆ ಹಚ್ಚಿದರು. ಬಳೆಚಕ್ರದ ಸಿದ್ದೇಶ್ವರ ಬೆಟ್ಟದ ಮೇಲೆ ಕುಳಿತು ದನಗಳನ್ನು ಮೇಯಿಸುವಾಗ ಗುಡ್ಡದಲ್ಲಿರುವ ಸಾಧು ಸಂತರ ಸಂಪರ್ಕ ಮತ್ತು ಪ್ರಭಾವದಿಂದ ಬಸವಲಿಂಗನು ಯೋಗಿಯಾದನು. ಮುಂದೆ ಅಕ್ಕಸಾಲಿಗ ಈಶ್ವರಪ್ಪನ ಪರಿಚಯ ಕೂಡಲೂರು ಗ್ರಾಮದಲ್ಲಾಯಿತು. ಮುಂದೆ ಕಡಕೋಳು ಮಡಿವಾಳಪ್ಪನ ಜೊತೆ ಆಧ್ಯಾತ್ಮಿಕ ಸಂವಾದ. ಹಂಪಿ, ಶ್ರೀಶೈಲ, ಕೊಡೇಕಲ್ ಮುಂತಾದ ಶರಣರ ಸಂಪರ್ಕ ಪ್ರಭಾವ ಪ್ರೇರಣೆಗಳು, ಬಸವಲಿಂಗನನ್ನು ಸಂಪೂರ್ಣ ಯೋಗಿಯನ್ನಾಗಿ ಹುರಿಗೊಳಿಸಿದವು. ಬಸವಲಿಂಗಪ್ಪನನ್ನು ಕುರಿತು ರಾಂಪೂರ ಭೀಮಣ್ಣ ಈ ರೀತಿ ಹಾಡುವರು.

"ಕಂಡು ಕಾಣದಂತಾದೆ ಹಂಪೆ ವಿರೂಪಾಕ್ಷ
ಕಾಣ ಕಾಣುತ ಬಯಲಾದೆ ಪುರಹರ"[೧]

"ಸನ್ನತಿಯ ಚಂದ್ರಲಾಂಬ ದೇವಿಯ ಆಶೀರ್ವಾದದಿಂದ, ತಿಪ್ಪಣ್ಣನೆಂಬ ಗುರುವನ್ನು ಪಡೆದನೆಂದು ಆ ತಿಪ್ಪಣ್ಣನೇ ಬಸವಲಿಂಗರಿಗೆ ಕೂಡಲೂರೇಶನೆಂದು"[೨] ಕರೆದನೆಂದು ಶಾಸ್ತ್ರೀಮಠ್ ಅವರು ಅಭಿಪ್ರಾಯಪಡುತ್ತಾರೆ.

ಆದರೆ ಶಾಂತರಸರು ಈಶ್ವರಪ್ಪನೆಂಬ ಅಕ್ಕಸಾಲಿಗ ಶರಣನಿದ್ದ. ಅವನ ಸ್ನೇಹದಿಂದ ಆಧ್ಯಾತ್ಮಿಕ ಜ್ಞಾನ ಸಂಪಾದಿಸಿದ, ಆದರೆ ಕೂಡಲೂರೇಶನ ಜೊತೆಗೆ ತಿಪ್ಪಣ್ಣನ ಹೆಸರೂ ಕೇಳಿ ಬರುವುದರಿಂದ ಈಶ್ವರಪ್ಪನೇ ತಿಪ್ಪಣ್ಣನಾಗಿರಬಹುದು ಎಂದು ಅಭಿಪ್ರಾಯಪಡುತ್ತಾರೆ.

ಬಸವಲಿಂಗನು ಮೈಲಾರಪುರದಲ್ಲಿ ಮೈಲಾರಲಿಂಗೇಶ್ವರನ ಬೆಟ್ಟದ ಮೇಲೆ ಕುಳಿತು ಚರ್ಚಿಸಿದ್ದು ತಿಳಿದುಬರುತ್ತದೆ. ಮೈಲಾರ ಪುರದ ವೆಂಕಟಸ್ವಾಮಿ, ಬಸವಲಿಂಗರು ಕೂಡಿಯೇ ತಪಗೈಯ್ಯುತ್ತಿದ್ದರೆಂದು

ಮೈಲಾರಪುರದ ಗುಡ್ಡದ ಕೆಳಗಿನ ಬಯಲಿನ ಕರಿಲಿಂಗಯ್ಯನ ಗುಡಿಯಲ್ಲಿ ಕುಳಿತು ತತ್ವಪದಗಳನ್ನು ಬರೆಯುತ್ತಿದ್ದರೆಂದು, ಈಗಲೂ ಕರಿಲಿಂಗನ ಗುಡಿಯು ಅಸ್ತಿತ್ವದಲ್ಲಿರುವುದನ್ನು ಕಾಣಬಹುದೆಂದು ರಾಂಪೂರು ಭೀಮಲಿಂಗಪ್ಪನವರು ಹೇಳುವರು."ನಮ್ಮ ಪುಂಡ ಮೈಲಾರಲಿಂಗನ ಗುಂಡನೆ ಹೊಡೆದು ಏಳು ತುಂಡನೆ ಮಾಡಿದ" ಮೈಲಾರ ಲಿಂಗೇಶ್ವರನ ವರ್ಣನೆ ಮಾಡಿದ್ದು ಇಲ್ಲಿ ಕಂಡುಬರುತ್ತದೆ.

ಬಸವಲಿಂಗರು ತಮ್ಮ ಗುರುಶಿಷ್ಯ ಪರಂಪರೆಯನ್ನು ಬೆಳೆಸಲಿಲ್ಲವೆಂದು ತಿಳಿದುಬರುತ್ತದೆ. ಆದರೂ ಇವರ ಸಾಮಿಪ್ಯದಲ್ಲಿ ಬೆಳೆದವರೆಂದರೆ, "ಯಾದಗಿರಿ ತಾಲೂಕಿನ ಕನಗನಹಳ್ಳಿ ಸಿದ್ದರಾಮಪ್ಪ, ಕಾಳೆಬೆಳಗುಂದಿಯ ರಸ್ತಾಪುರ ಶರಭಯ್ಯ, ಕಾಳೆಬೆಳಗುಂದಿಯ ದೊಡ್ಡಪ್ಪಶರಣ, ಹಳಗೇರಿಯ ಶಂಕರಯ್ಯ, ಶಹಾಪುರದ ಹಿರೇವಡಿಗೇರಿಯ ರಾಜೋಟಯ್ಯ, ಬಳೆಚಕ್ರದ ಸಿದ್ದಯ್ಯ, ಯಾದಗಿರಿ ಹಳಗೇರಿಯ ಹನುಮಂತಪ್ಪ, ಜೇವರಿಗಿಯ ಚೆನ್ನೂರು ಜಲಾಲ್ ಸಾಬ್, ಮೂಡಬಳರದ ರಂಗಪ್ಪ, ಆನೆಗುಂದಿ ರುದ್ರಪ್ಪ, ದೇವದುರ್ಗ ತಾಲೂಕಿನ ಜನಾಬ್ ಮಸ್ತಾನ್ ಅಲಿಸಾಹೇಬ ಇವರೆಲ್ಲರು ಬಸವಲಿಂಗನ ಸ್ನೇಹದಿಂದ ಆಧ್ಯಾತ್ಮಿಕ ಜ್ಞಾನವನ್ನು ಪಡೆದವರು"[೩].

"ಇವರು ತಮ್ಮ ಕೊನೆಯ ದಿನಗಳನ್ನು ದೇವದುರ್ಗದ ಖಾನಾಪುರದಲ್ಲಿ ಕಳೆದರೆಂದು, ಕ್ರಿ.ಶ.೧೮೫೦ರಲ್ಲಿ ಅಲ್ಲಿಯೇ ಐಕ್ಯರಾದರೆಂದು ಪ್ರತೀತಿ ಇದೆ. ಬಸವಲಿಂಗರ ಗದ್ದುಗೆ ಖಾನಾಪುರ ಮತ್ತು ಕೂಡಲೂರು ಎರಡೂ ಊರುಗಳಲ್ಲಿ ಕಾಣುತ್ತೇವೆ. ಆದರೆ ಬಸವಲಿಂಗರು ಐಕ್ಯರಾದದ್ದು ಖಾನಪುರದಲ್ಲಿಯೇ. ಶಿವರಾತ್ರಿಯಲ್ಲಿ ಎರಡೂ ಊರುಗಳಲ್ಲಿ ಜಾತ್ರೆ ನಡೆಯುತ್ತದೆ. ತಮ್ಮ ವಚನದ ಅಂಕಿತವನ್ನು ಕೂಡಲೂರೇಶ್ವನೆಂದು ಬಳಸಿದ್ದಾರೆ."[೪]

ಬಸವಲಿಂಗರ ಹಾಡುಗಳು ಗುರುಸ್ತುತಿ, ಗುರುಭಕ್ತಿಯ ಮೂಲಕ ಸಮಾಜವನ್ನು ಎಚ್ಚರಿಸುವ ನಿಟ್ಟಿನಲ್ಲಿ ಗಮನ ಸೆಳೆಯುತ್ತವೆ. ಕವಿಯು ಒಂದೆಡೆ ನೆಲೆ ನಿಂತಿಲ್ಲವೆನ್ನುವುದಕ್ಕೆ ಹಾಡುಗಳಲ್ಲಿ ಕಾಣುವ ಭಿನ್ನ ಪ್ರಾದೇಶಿಕವಾದ ಭಾಷಾ ಸೊಗಡು ಸ್ವಭಾವಗಳನ್ನು ಗುರುತಿಸಬಹುದು. ಮೋಕ್ಷದ ಹಾಡುಗಳು, ಸಂಸಾರದ ವಿಡಂಬನೆ, ಜಾತಿಯ ಖಂಡನೆಗಳನ್ನು ಮೊನಚಾಗಿ ಹಾಡುಗಳಲ್ಲಿ ಪ್ರತಿಭಟಿಸಿದ್ದನ್ನು ಕಾಣುತ್ತೇವೆ.

ಕ್ರಿ.ಶ.೧೯೬೩ರಲ್ಲಿ ಇವರ ೧೨೧ ಪದಗಳನ್ನು ಸಂಗ್ರಹಿಸಿ 'ಬ್ರಹ್ಮತತ್ವ ರತ್ನಾಕರ' ಎಂಬ ಹೆಸರಿನಲ್ಲಿ ರಾಯಚೂರಿನ ಸಂಗಡಿಗರ ಸಮಿತಿಯವರು ಪ್ರಕಟಿಸಿದ್ದಾರೆ. ಶಿವಲೆಂಕ ಎಂಬುವವರು ಈ ಕೃತಿಯ ಸಂಪಾದಕರಾಗಿರುತ್ತಾರೆ. ೧೯೮೯ರಲ್ಲಿ ಕೂಡಲೂರು ಬಸವಲಿಂಗ ಶರಣರ ಸ್ವರವಚನಗಳು, ವೀರಶೈವ ಅಧ್ಯಯನ ಸಂಸ್ಥೆ ಗದಗ ಇವರು ಪ್ರಕಟಿಸಿದ್ದಾರೆ. ಇವರ ೧೨೪ ಹಾಡುಗಳು ದೊರಕಿರುವವು ಎಂದು ಶ್ರೀ ಶಾಂತರಸರು ಅಭಿಪ್ರಾಯ ಪಡುತ್ತಾರೆ. ಅದರೆ ಇವರ ಅನೇಕ ಹಾಡುಗಳು, ಮೌಖಿಕ ಸಾಹಿತ್ಯದಲ್ಲಿಯೇ ಇವೆ. ಅನೇಕ ಭಜನಾ ಮಂಡಳಿಯಲ್ಲಿ ಇವರ ಹಾಡುಗಳು ಹಾಡಲ್ಪಡುತ್ತವೆ.

## ೨. ಗೂಗಲ್ಲು ಪರಪ್ಪಯ್ಯ(ಕ್ರಿ.ಶ.೧೭೮೦-೧೮೫೦)

ಕೂಡಲೂರು ಬಸವಲಿಂಗರ ಹಾಡಿನಲ್ಲಿ ಗೂಗಲ್ಲು ಪರಪ್ಪಯ್ಯನ ಪದ್ಯಗಳಲ್ಲಿ, ಗೂಗಲ್ಲು ಪ್ರಭುವಿನ ಪ್ರಸ್ತಾಪವನ್ನು ಗಮನಿಸಿ ಕೂಡಲೂರು ಬಸವಲಿಂಗರು, ಗೂಗಲ್ಲು ಪರಪ್ಪಯ್ಯನೂ ಇಬ್ಬರೂ ಸಮಕಾಲೀನ ತತ್ವಪದಕಾರರೆಂದು ಹೇಳಬಹುದು. ಪ್ರಭುವಿನ ಪ್ರವೇಶದ ನಿರ್ಧಾರದಿಂದ, ಇವರ ಕಾಲ ೧೮ನೇ ಶತಮಾನವೆಂದು ಇಟ್ಟುಕೊಳ್ಳಬಹುದು. ಶ್ರೀ ಶಾಂತರಸರು ಡಾ.ಬಸವರಾಜ ಸಬರದರವರು ಕ್ರಿ.ಶ.೧೭೮೦ ರಿಂದ ಕ್ರಿ.ಶ.೧೮೫೦ ಎಂದು ಹೇಳಿದ್ದು ಸಮಂಜಸವೇ ಆಗಿರಬೇಕು.

ಗೂಗಲ್ಲು ಗೊಬ್ಬೂರಿನ ಪಕ್ಕದಲ್ಲಿಯೇ ಬರುವ ಗ್ರಾಮ. ಪ್ರಾಚೀನ ಕಾಲದಲ್ಲಿ ಗೊಬ್ಬೂರು ಅಗ್ರಹಾರವಾಗಿತ್ತೆಂದು ಡಾ.ಬಸವಲಿಂಗ ಸೊಪ್ಪಿಮಠ ಅವರು ಅಭಿಪ್ರಾಯಪಡುತ್ತಾರೆ. ಗೊಬ್ಬೂರಿನ ಬಿಬ್ಬಿ ಬಾಚರಸರು, ಮೊಸರು ಕಲ್ಲಿನ ಮುಕ್ತಾಯಕ್ಕ, ದೇವಸೂಗೂರಿನ ಚೆನ್ನವೀರರ ಚರಿತ್ರೆಗಳನ್ನು ನೋಡಿದಾಗ, ಕಲ್ಯಾಣದ ಶರಣರು ಗೊಬ್ಬೂರನ್ನು ಚಿಕ್ಕ ಕಲ್ಯಾಣವನ್ನಾಗಿ ಮಾಡಿಕೊಂಡಿದ್ದರೆನ್ನಬಹುದು.

ಗುಲ್ಬಾರ್ಗಾ ಜಿಲ್ಲೆಯ ಯಾದಗಿರಿ ತಾಲೂಕಿನ ಬೆಂಡೆಬೆಂಬಳಿ ಎಂಬ ಹಳ್ಳಿಯಲ್ಲಿ ಜನಿಸಿದರೆಂದು ತಿಳಿದುಬರುತ್ತದೆ. ತಮ್ಮ ಆಧ್ಯಾತ್ಮಿಕ ಕ್ಷೇತ್ರವನ್ನು ದೇವದುರ್ಗ ತಾಲೂಕಿನ ಗೂಗಲ್ಲುನಲ್ಲಿ ಕಳೆದರೆಂಬುದನ್ನು, ನನ್ನ ಕ್ಷೇತ್ರ ಕಾರ್ಯದಿಂದ ಕಂಡುಕೊಂಡಿದ್ದೇನೆ.

''ಪರಪ್ಪಯ್ಯನು ಬೆಂಡೆಬೆಂಬಳಿಯ ಪಾಂಚಾಳರ ಕುಟುಂಬದಲ್ಲಿ ಜನಿಸಿದನು. ತಾಯಿ ಕಾಳಮ್ಮ ಮತ್ತು ತಂದೆ ಮಾನಪ್ಪ ಶಾಲೆಗೆ ಹೋಗುವ ಬಗ್ಗೆ ನಿರಾಸಕ್ತರಾಗಿ ಊರ ಹೊರಗಿನ ರಾಮಲಿಂಗೇಶ್ವರ ದೇವಸ್ಥಾನದಲ್ಲಿ ಧ್ಯಾನಾಸಕ್ತರಾಗಿ ಕುಳಿತಿರುತ್ತಿದ್ದರು. ಮಗನ ವಿಚಿತ್ರ ವರ್ತನೆಗೆ ಬೇಸತ್ತು, ತಂದೆ ತಾಯಿಯರು ಸಾವಿತ್ರಮ್ಮ ಎಂಬ ಕನ್ಯೆಯೊಡನೆ ವಿವಾಹ ಮಾಡಿದರೆಂದು ತಿಳಿದುಬರುತ್ತದೆ.''[೫]

ಕದಿರಾಪುರದ ರಸ್ತೆಯಲ್ಲಿ ಬುತ್ತಿಬಸವನ ಕಟ್ಟೆಯ ಪ್ರಸ್ತಾಪ ಬರುತ್ತದೆ. ಬುತ್ತಿ ಬಸವನೆಂದರೆ ದಾರಿ ಹೋಕರು, ವ್ಯವಹಾರ ಮಾಡುವವರು. ವಿಶ್ರಾಂತಿಗಾಗಿ ವಿಶ್ರಮಿಸಿಕೊಳ್ಳುವ ಸ್ಥಳ ಅಲ್ಲಿಕಟ್ಟೆಯ ಮೇಲೆ ಬಸವಣ್ಣನ ಮೂರ್ತಿಯಿದೆ. ಇದನ್ನು ಬುತ್ತಿಬಸವನ ಕಟ್ಟೆಯೆಂದು ಶ್ರೀ ಶಾಂತರಸರು ಗುರುತಿಸುತ್ತಾರೆ.

ದಾರಿ ಹೋಕರು, ಬುತ್ತಿ ಬಸವನ ಕಟ್ಟೆಯ ಮೇಲೆ ಲಾಭವಾಗಿ ಬಂದ, ಅಕ್ಕಿ, ಜೋಳ, ಬೇಳೆ, ಬೆಲ್ಲ ಇವುಗಳನ್ನು ನೈವೇದ್ಯ ಇಟ್ಟು ಹೋಗುತ್ತಿದ್ದರು. ದೇವರ ನೈವೇದ್ಯವೇ ಪರಪ್ಪಯ್ಯನ ಸಂಸಾರಕ್ಕೆ ಆಧಾರವಾಗಿತ್ತು. ಪ್ರಾಪಂಚಿಕ ಜೀವನಕ್ಕೆ ವಿದಾಯ ಹೇಳುವ ಸಮಯ ಹತ್ತಿರವಾಯಿತೆಂದು ಕಂಡುಬರುತ್ತದೆ. ಮುಂದೆ ಕೃಷ್ಣಾನದಿ ತೀರದ ಗೂಗಲ್ಲು ಗ್ರಾಮಕ್ಕೆ ಬಂದು, ಕೃಷ್ಣೆಯಲ್ಲಿ ಮಿಂದು, ಪ್ರಭುದೇವರ ದರ್ಶನದೊಂದಿಗೆ ಗೂಗಲ್ಲು ಪರಪ್ಪಯ್ಯನಾದನೆಂದು ಸ್ಥಳೀಯನಾದ ಶರಣಪ್ಪನು ಹೇಳುವನು.

ಬೆಂಡೆಬೆಂಬಳಿಯಿಂದ ಗೂಗಲ್ಲಿಗೆ ಬರಬೇಕಾದರೆ ನದಿ ದಾಟಬೇಕಾಗಿತ್ತು. ಹರಿಗೋಲಿನ ಸಹಾಯದಿಂದ ನಿತ್ಯ ನದಿ ದಾಟಿ ಪ್ರಭುವಿನ ದರ್ಶನಕ್ಕೆ ಬರುತ್ತಿದ್ದನು. ಹೊಳೆ ತುಂಬಿದ ಸಮಯದಲ್ಲಿ ಪರಪ್ಪಯ್ಯ ಬಾರದೇ ಇದ್ದಾಗ, ಅಂಬಿಗರು ಈತನ ದಾರಿ ಕಾಯದೇ ಹರಿಗೋಲನ್ನು ನದಿಗೆ ಹಾಕಿದರು. ಅವಸರದಿಂದ ಬಂದ ಪರಪ್ಪಯ್ಯನು ಹರಿಗೋಲು ಇಲ್ಲದ್ದನ್ನು ಕಂಡು ಪ್ರಭುವಿನ ಪೂಜೆಗೆ ತಡವಾಗುವುದೆಂದು ಅವಸರದಿಂದ ಹೆಗಲ ಮೇಲಿದ್ದ ಕಂಬಳಿಯನ್ನು ಹಾಸಿ, ಅದರ ಮೇಲೆ ಕುಳಿತು ಪ್ರಭುವಿನ ಧ್ಯಾನ ಮಾಡುತ್ತಾ ನದಿ ದಾಟಿಬಂದದ್ದನ್ನು ಗೂಗಲ್ಲು ಗ್ರಾಮದ ಜನರು ಈಗಲೂ ಹೇಳುತ್ತಾರೆ.

ಪರಪ್ಪಯ್ಯನ ಮೇಲೆ ೧೨ನೇ ಶತಮಾನದ ವಚನಕಾರರ ಪ್ರಭಾವವಿದೆ. 'ಮಾಡುವೆ ಶರಣು ಮಾಡುವೆ ನಮ್ಮ ಕೂಡಲ ಸಂಗನ ಶರಣರ ಪಾದಕೆ'' ಎನ್ನುವ ಹಾಡಿನಲ್ಲಿ ಅನೇಕ ಶರಣರ ಹೆಸರುಗಳು ಬರುವುದು ಗಮನಾರ್ಹ.

ದೇವಸೂಗೂರಿನ ಸೂಗೂರೇಶ್ವರನ ಮೇಲೆ ಭಕ್ತಿಯಿಂದ ಹಾಡಿದ್ದನ್ನು ಇಲ್ಲಿ ಸ್ಮರಿಸಬಹುದು. ಆ ಹಾಡು ಹೀಗಿದೆ. ''ಮೊರೆಹೊಕ್ಕೆ ನೀ ಕಾಯೋ ಮಲೆತಮಲ್ಲನ ಗೂಳಿ

''ಸೂಗೂರು ವೀರ | ನೀ | ಕರೆದರೆ ಓ ಎಂದು
ಕಾಮಿತ ಫಲದಾಯಿ | ಸೂಗೂರು ವೀರ''[೬]

ಬೆಂಡೆಬೆಂಬಳಿ ಪರಪ್ಪಯ್ಯನನ್ನು ಗೂಗಲ್ಲು ಪರಪ್ಪಯ್ಯನೆಂದು ಕರೆಯುವ ಮಾಹಿತಿಗಳುಂಟು. ಈತನ ಸಮಾಧಿಯನ್ನು ಪ್ರಭುದೇವರ ದೇವಸ್ಥಾನದ ಮಹಾಮಠದ ಪಕ್ಕದಲ್ಲಿದ್ದುದನ್ನು ಈಗಲೂ ನೋಡಬಹುದು. ಗೂಗಲ್ಲು ಪ್ರಭುವಿನ ಗವಿಯ ಮಾಹಿತಿಗಳು ದೊರಕುವಂತೆ ಐತಿಹ್ಯಗಳೂ ದೊರಕುತ್ತವೆ.

ಅಂತರಗಂಗಿ ಸಾಂಸ್ಕೃತಿಕ ಪ್ರತಿಷ್ಠಾನ ಪ್ರಕಾಶಕರಿಂದ 'ಗೂಗಲ್ಲು ಪರಪ್ಪಯ್ಯನ ತತ್ವಪದಗಳು' ಎಂಬ ಪುಸ್ತಕ ಹೊರಬಂದಿದೆ. ಈ ಪುಸ್ತಕದ ಸಂಪಾದಕರು ಶ್ರೀ ಸಂಗಯ್ಯ ಸೊಪ್ಪಿಮಠ, ಡಾ.ಬಸವಲಿಂಗ ಸೊಪ್ಪಿಮಠ. ಇವರ ಪರಿಶ್ರಮದಿಂದ ೯೩ ಹಾಡುಗಳು ಬೆಳಕು ಕಂಡಿವೆ. ಭಕ್ತಿ ಪರವಾಗಿ ರಚನೆಯಾದ ಹಾಡುಗಳೇ ಹೆಚ್ಚಾಗಿ ಕಂಡುಬರುತ್ತವೆ. ಬಸವಾದಿ ಪ್ರಮಥರ ಮೇಲೆ ಇದ್ದ ಅಗಾಧವಾದ ಭಕ್ತಿ ಇವರ ಅನೇಕ ಹಾಡುಗಳಲ್ಲಿ ಕಾಣುತ್ತದೆ. ತಮ್ಮ ಹಾಡುಗಳಿಗೆ ಪರ್ವ, ನಗರ ಪರ್ವ, ಪ್ರಭು, ಆನೆಗೊಂದಿ, ಈ ನಾಲ್ಕು ಅಂಕಿತಗಳನ್ನು ಬಳಸಿದ್ದನ್ನು ಗುರುತಿಸಬಹುದು.

## ೩. ಗೊಬ್ಬೂರು ಹಂಪಣ್ಣ (ಕ್ರಿ.ಶ.೧೭೯೩-೧೮೭೮)

ಗೊಬ್ಬೂರು ಹಂಪಣ್ಣ ಕ್ರಿ.ಶ.೧೭೯೩ ರಿಂದ ೧೮೭೮ರ ಮಧ್ಯದ ಅವಧಿಯಲ್ಲಿ ಬದುಕಿದ್ದು ೮೦ ವರ್ಷಗಳ ಕಾಲ ಈ ಸಂತನು ಜೀವಿಸಿದ್ದು ತಿಳಿದುಬರುತ್ತದೆ. ಅರಿಕೇರಿ ಗ್ರಾಮದಲ್ಲಿ ಗೊಬ್ಬೂರು

ಹಂಪಣ್ಣನ ಪ್ರಸ್ತಾಪ ಹೆಚ್ಚು ಇರದಿದ್ದರೂ, ವಾರದ ಮನೆಯ ಪ್ರಸ್ತಾಪ ಇದೆ ಎಂದು ಸ್ಪಷ್ಟವಾಗುತ್ತದೆ. ಗಬ್ಬೂರು ಹಂಪಣ್ಣನಿಂದ ಪ್ರಸಿದ್ಧಿ ಪಡೆದ ಮನೆತನವೇ ವಾರದ ವಂಶದವರ ಮನೆಯೆಂದು ಗುರುತಿಸಬಹುದು.

"ಹಂಪಣ್ಣನ ತಂದೆ ತಾಯಿಯ ವಿವರ ಸಿಗದಿದ್ದರೂ, ಅರಿಕೇರಿಯ ಬಣಜಿಗರ ಮನೆಯಲ್ಲಿ ಜನ್ಮವಾದದ್ದು ತಿಳಿದುಬರುತ್ತದೆ. ಬಾಲ್ಯದಲ್ಲಿ ಹಂಪಣ್ಣನಿಗೆ ವಿದ್ಯಾಭ್ಯಾಸದಲ್ಲಿ ನಿರುತ್ಸಾಹ, ಆಧ್ಯಾತ್ಮದಲ್ಲಿ ಉತ್ಸಾಹವನ್ನು ನೋಡಿ ಇವರ ಸಹೋದರರು ಕೋಪಗೊಂಡರು. ಇದನ್ನೇ ನೆಪ ಮಾಡಿಕೊಂಡು ಅರಿಕೇರಿಯನ್ನು ಬಿಟ್ಟು ಗೊಬ್ಬೂರಿಗೆ ಬಂದನು. ಅರಿಷಿಣಗಿ ಮನೆತನದ ಸಿದ್ದಮ್ಮ ಎಂಬ ಕನ್ಯೆಯನ್ನು ವಿವಾಹ ಮಾಡಿಕೊಂಡನು. ಅವರ ಮನೆಯಲ್ಲಿಯೇ ಮಗನಂತಿದ್ದು ಅರಿಷಿಣ, ಬೆಳ್ಳುಳ್ಳಿ, ಪುಟ್ಟಿಗಳನ್ನು ಹೊತ್ತು ಮಾರುವ ಕಾಯಕ ಕೈಕೊಂಡನು."[೨]

ಸ್ವಾಭಿಮಾನಿಯಾದ ಸಿದ್ದಮ್ಮ ದಾಂಪತ್ಯ ಜೀವನದೊಂದಿಗೆ ಪತಿಯ ಜ್ಞಾನದ ಅನಿವಾರ್ಯತೆಯನ್ನು ಅರ್ಥಮಾಡಿಕೊಂಡು, ಆತನ ಆಧ್ಯಾತ್ಮಿಕ ಹಾದಿಗೆ ಸಂತೋಷವಾಗಿಯೇ ಸಹಕರಿಸಿದಳು. ೩,೪ ವರ್ಷಗಳ ತರುವಾಯ ಸಿದ್ದಮ್ಮನು ಇಹ ತ್ಯಜಿಸಿದಳು. ಅದೇ ವರ್ಷವೇ ಸಾಲಿ ದೊಡ್ಡಬಸ್ಸಪ್ಪನವರಿಂದ ಹಂಪಣ್ಣನು ಶಿವದೀಕ್ಷೆ ಪಡೆದನು.

ಸಾಲಿ ದೊಡ್ಡಬಸ್ಸಪ್ಪನವರ ಮಾರ್ಗದರ್ಶನದಿಂದ, ತತ್ವಪದಗಳನ್ನು ಬರೆಯಲು ಪ್ರಾರಂಭಿಸಿದ್ದು ಕಂಡುಬರುತ್ತದೆ. ಗಿರಿಜಾ ಕಲ್ಯಾಣ, ದಕ್ಷಬ್ರಹ್ಮ ಎಂಬ ಎರಡು ಶಿವಕಾವ್ಯ ನಾಟಕಗಳನ್ನು ಬರೆದರು. 'ಸಾಲಿ ದೊಡ್ಡಬಸ್ಸಪ್ಪನವರು' ಬಯಲಾಟವನ್ನು ಬರೆದು ಆಡಿಸುವ ಉತ್ಸಾಹ ನಿನಗಿದ್ದರೆ ಅನಂತಕಾಲಕ್ಕೆ ಜನರು ಸ್ಮರಿಸುವಂಥಾ ಕತೆಗಳನ್ನು ಬರೆದು ಆಡಿಸು ಎಂದಾಗ, ಗುರುಗಳ ಮಾತಿನಂತೆ 'ಮೋಹವಿವೇಕ' ಕತೆ ಬರೆದು ಪ್ರದರ್ಶಿಸಿದ್ದು, ಹಂಪಣ್ಣನ ವ್ಯಕ್ತಿತ್ವದ ವಿಶೇಷತೆಯಾಗಿದೆ.

ಲೋಕ ಸಂಚಾರದ ಮೂಲಕ ಹೊಸಪೇಟೆ, ಚಿಕ್ಕಸೂಗೂರು, ಕಾಡ್ಲೂರು, ರಾಯಚೂರು, ದೇವದುರ್ಗ ಮುಂತಾದ ಕಡೆಗಳಲ್ಲಿ ಹಂಪಣ್ಣನ ಭಕ್ತರ ಪರಿವಾರವಿದೆ. ಗೊಬ್ಬೂರಿನಲ್ಲಿ ಹಂಪಣ್ಣ ತಾತನವರು ಪ್ರಸಿದ್ಧಿ ಪಡೆದದ್ದು ತಾತನವರು ಗುಡ್ಡದ ಮೇಲಿರುವ ನಂದೀಶ್ವರ ದೇವಸ್ಥಾನದಲ್ಲಿದ್ದರೆಂಬ ಮಾಹಿತಿಗಳುಂಟು.

ಹಂಪಣ್ಣನವರ ಕೈವಲ್ಯ ಕೈದೀವಿಗೆಯಲ್ಲಿ ೭೮ ಹಾಡುಗಳಿವೆ. ಸ್ವತಂತ್ರ ವಿಚಾರಗಳ ಮೂಲಕ ಹಳಗನ್ನಡ, ಸಂಸ್ಕೃತ ಭಾಷೆಯ ಪ್ರೌಢತೆಯಿಂದಾಗಿ ಕನ್ನಡ ತತ್ವಪದ ಸಾಹಿತ್ಯದಲ್ಲಿ ಪ್ರತ್ಯೇಕ ಸ್ಥಾನವನ್ನು ಪಡೆದುಕೊಂಡದ್ದು ಗಮನಾರ್ಹ. ಇದು ಶ್ರೀ ರಾಜೇಂದ್ರ ಶಿವಾಚಾರ್ಯ ಹಿರೇಮಠ ಹುಟಗಿ (ಸೋಲಾಪುರ) ಇವರಿಂದ ಪ್ರಕಟಗೊಂಡಿದೆ. ಹಂಪಣ್ಣನ ಹಾಡುಗಳ ಅಂಕಿತ 'ಮನಿಪುರದೊಡೆಯ' 'ಘನ

ವೃಷಭ' ಎಂದಾಗಿದೆ. 'ಚೋರ ನಿಂದಿಸನ್ನು ಕೇಳ್ ಚಂದಿರಂಗೆ ಕುಂದೇನು' ಈ ಹಾಡಂತೂ ಹೊಸ ವಿಚಾರಗಳನ್ನು ಹುಟ್ಟು ಹಾಕುತ್ತದೆ. 'ಬುಡುಕಡೆ ಇಲ್ಲದ ಬುಡು ಬುಡುಕ್ಕನು' ಈ ಹಾಡು ೧೬ ನುಡಿಗಳಿಂದ ಗಮನ ಸೆಳೆಯುತ್ತದೆ.

ಬಾಗಲವಾಡದ ಮುದುಕಪ್ಪನವರ ಮತ್ತು ಹಂಪಣ್ಣನವರ ಸಮಾಧಿಗಳು ಮಹಾನಂದೀಶ್ವರನ ಬೆಟ್ಟದ ಮೇಲಿವೆ. ಗೊಬ್ಬೂರಿನ ಬೂದಿಬಸಪ್ಪ ಮಠದ ಮುಂದಿನ ಬಾವಿ ಶಿಥಿಲವಾಗಿದ್ದು, ಗುಡಿ ಮಾತ್ರ ಅಸ್ತಿತ್ವದಲ್ಲಿರುವುದನ್ನು ನಾವು ಈಗಲೂ ನೋಡಬಹುದು. ಈತನು ತಪಸ್ಸು ಮಾಡಿದ ಸ್ಥಳವೇ ಮಠವೆಂದು ಇಲ್ಲಿನ ಜನರು ಹೇಳುತ್ತಾರೆ. ಕೆಲ ಸಾಧಕರು ಈಗಲೂ ಒಂಟಿ ಕಾಲಿನ ತಪಸ್ಸನ್ನು ಅದೇ ಮಠದ ಮುಂದೆ ಮಾಡುತ್ತಾರೆ ಎನ್ನುವ ಪ್ರತೀತಿಯಿದೆ. ಸಂತರ ನೆಲೆಯನ್ನು ಅರಿಯಲು ಪುರಾವೆಗಳು ಈ ಕಾಲದಲ್ಲಿ ಸಿಗುವುದು ದುರ್ಲಭ, ಆದರೆ ಅವರೇ ರಚಿಸಿದ ತತ್ವಪದಗಳ ಹಿನ್ನೆಲೆಯಲ್ಲಿ ಅನುಭವವನ್ನು ವಿಮರ್ಶಿಸುವುದು ವಿಮರ್ಶಕರಿಗೆ ಸವಾಲಿನ ವಿಷಯವಾಗಿದೆ.

### ೪. ನೀರಲಕೇರಿ ಬಸವಲಿಂಗ (ಕ್ರಿ.ಶ.೧೮೧೨-೧೮೭೨)

ಇಂದಿನ ಬಾಗಲಕೋಟೆ ಜಿಲ್ಲೆಯ ಹುನುಗುಂದ ತಾಲೂಕಿನ ಗೂಡೂರಿನವರಾದ ಶರಣರು ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲ್ಲೂಕಿನ 'ನೀರಲಕೇರಿ' 'ಐದನಾಳ' ಗ್ರಾಮಗಳನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡದ್ದು ತಿಳಿದುಬರುತ್ತದೆ. ಕ್ರಿ.ಶ.೧೮೧೨ ರಿಂದ ೧೮೭೮ರ ಅವಧಿಯಲ್ಲಿ ಇವರು ಬದುಕಿದ್ದರು.

"ರಾಚಯ್ಯ ಮತ್ತು ಮಹಾದೇವಮ್ಮನವರ ಮಗನಾಗಿ ಇವರು ಕ್ರಿ.ಶ.೧೮೧೨ರಲ್ಲಿ ಜನಿಸಿದರು. ಇವರು ಗೂಡೂರಿನಲ್ಲಿರುವಾಗ ಡೋಗಿಬರ ಕಾಣಿಸಿಕೊಂಡಿತು. ಇದು ಕ್ರಿ.ಶ.೧೯೦೦ರಲ್ಲಾಯಿತೆಂಬುದನ್ನು ಗಮನಿಸಿದರೆ ಇವರ ತರುವಾಯ ಡೋಗಿಬರ ಕಾಣಿಸಿಕೊಂಡಿದೆ ಎಂಬುದು ತಿಳಿದುಬರುತ್ತದೆ."[೮]

ಡಾ.ಬಸವಲಿಂಗ ಸೊಪ್ಪಿಮಠರವರು 'ನೀರಲಕೇರಿ ಬಸವಲಿಂಗರ ಸ್ವರವಚನಗಳು' ಕೃತಿಯಲ್ಲಿ "ಇವರ ಜೀವನ ಕುರಿತು ಹುನುಗುಂದ ತಾಲೂಕಿನ ಗೂಡೂರಿನವರೆಂಬುದಾಗಿ ಹೇಳಿ, ಡೋಗಿ ಬರದಿಂದ ಇವರ ತಂದೆ ತಾಯಿಗಳು ಮಗನನ್ನು ಇಳಕಲ್ ಸ್ವಾಮಿಗಳಿಗೆ ನೀಡಿದಾಗ, ಅವರು ಬಸವಲಿಂಗನಿಗೆ ಆಶ್ರಯ ನೀಡಿ, ಲಿಂಗಸೂಗೂರು ಸಾವಿರ ದೇವರ ಮಠಕ್ಕೆ ಮರಿದೇವರು ಬೇಕೆಂಬ ವಿಚಾರ ಬಂದಾಗ ಆಗ ಪೀಠಸ್ಥರಾಗಿದ್ದ ಶ್ರೀ ಪಂಚಾಷರಿ ಸ್ವಾಮಿಗಳ ವಶಕ್ಕೆ ಇವರನ್ನು ಒಪ್ಪಿಸಿ ಹರಸಿದರಂತೆ. ಮುಂದೆ ಪಂಚಾಕ್ಷರಿ ಸ್ವಾಮಿಗಳ ಮಾರ್ಗದರ್ಶನದಲ್ಲಿ ಯೋಗ್ಯ ಸ್ವಾಮಿಯಾಗಿ ಬೆಳೆದು ನಿಂತ ಬಸವಲಿಂಗರು ತಮ್ಮ ಗುರುಗಳ ನಂತರ ನಡೆದ ಮತ ಬೇಧದಿಂದಾಗಿ ಲಿಂಗಸೂಗೂರು ಮಠಕ್ಕೆ ಸ್ವಾಮಿಯಾಗುವ ಅವಕಾಶ ಸಿಗದೇ ಶಾಖಾಮಠವಾದ ನೀರಲಕೇರಿಗೆ ಪಟ್ಟವಾಗಿ ಬಂದರು. ಡಾ.ಬಸವಲಿಂಗ ಸೊಪ್ಪಿಮಠರ

ಅಭಿಪ್ರಾಯವನ್ನು ಡಾ.ಬಸವರಾಜ ಸಬರದರು ಸಮರ್ಥಿಸುತ್ತಾರೆ. ಇವರಿಗಿಂತ ಭಿನ್ನವಾದ ವಿಚಾರ, 'ಗುರುಬಸ್ಸಯ್ಯ ಅಮ್ಮಾಪುರ' ಹೇಳುತ್ತಾರೆ. ಶಿವಾನುಭವ ಚರವರ್ಯರಾದ ಇಳಕಲ್ ಮಹಾಂತ ಸ್ವಾಮಿಗಳು ಶಿವಾನುಭವ ಪ್ರಚಾರಕ್ಕೆ ಬಸವಲಿಂಗನೊಡನೆ ಲಿಂಗಸೂಗೂರಿಗೆ ಆಗಮಿಸುತ್ತಾರೆ. ಅಲ್ಲಿಯ ಸಾವಿರ ದೇವರ ಮಠದ ಭಕ್ತರ ಕೋರಿಕೆಯಂತೆ ಆ ಮಠಕ್ಕೆ ಬಸವಲಿಂಗರನ್ನು ಉತ್ತರಾಧಿಕಾರಿಯನ್ನಾಗಿ ಮಾಡಿ, ಆ ಮಠದ ಪಂಚಾಕ್ಷರಿ ಸ್ವಾಮಿಗಳ ಕರಕಮಲಗಳಿಂದ ದೀಕ್ಷೆ ಕೊಡಿಸುತ್ತಾರೆ."[೯]

ಅಂದಿನ ದಿನಗಳಲ್ಲಿ ಭಾರತದ ತುಂಬೆಲ್ಲಾ ಕ್ರೈಸ್ತ ಧರ್ಮದ ಪ್ರಚಾರ ಭರದಿಂದ ಸಾಗಿತ್ತು. ತಮ್ಮ ಧರ್ಮಪ್ರಚಾರ ಮಾಡುವ ಉದ್ದೇಶದಿಂದ ಕ್ರೈಸ್ತರು ಜನರ ಮನವೊಲಿಸುತ್ತಿದ್ದರು. ಹಳ್ಳಿ ಮುಗ್ಧರಿಗೆ ಆಸೆ ತೋರಿಸಿ, ತಮ್ಮ ಧರ್ಮದ ಪ್ರಬಲತೆಯನ್ನು ಸಾರುತ್ತಿದ್ದರು. ಇಂಥಾ ಸಂದರ್ಭದಲ್ಲಿ ಲಿಂಗಸೂಗೂರಿಗೆ ಕ್ರೈಸ್ತ ಪಾದ್ರಿಯೊಬ್ಬ ಬಂದಿದ್ದನು. ಇವನನ್ನು ಬಸವಲಿಂಗ ವಾದದಲ್ಲಿ ಸೋಲಿಸಿ, ವೀರಶೈವ ಧರ್ಮದ ಶ್ರೇಷ್ಠತೆಯನ್ನು ಎತ್ತಿ ಹಿಡಿದರು.

ಘನಮಠ ಶಿವಯೋಗಿಗಳು ಇವರ ಖ್ಯಾತಿಯನ್ನು ಕೇಳಿ, ನೀರಲಕೇರಿಗೆ ಬಂದರು. ಷಟ್‌ಸ್ಥಲ ಸಾಧಕ ಬಸವಲಿಂಗನಾದರೆ ಅನಂತ ಜ್ಞಾನಿಗಳು ಘನಮಠರು ಇಬ್ಬರೂ ಕೂಡಿ, ಶಿವಮತದ ಆಧ್ಯಾತ್ಮಿಕ ಸಾಹಿತ್ಯವನ್ನು ಜನರಿಗೆ ಉಣಬಡಿಸಿದರು. ಘನಮಠರೊಡನೆ ಇವರ ಭೇಟಿ ನಡೆದಿತ್ತೆಂದು ಪುರಾಣಗಳು ಉಲ್ಲೇಖಿಸುತ್ತವೆ. ಜೊತೆಗೆ ಘನಮಠದಾರ್ಯರು ಹಾದಿಯಲ್ಲಿ ಎಮ್ಮೆ ಮೇಯಿಸುತ್ತಾ ನಿಂತಿದ್ದಾಗ ಇವರನ್ನು ಅರಿಯದಾಗಿ ಅಥವಾ ಅರಿತೋ ಏನಿದು ಉದ್ಯೋಗ ಎಂದು ಕೇಳಿದ್ದಾರೆ. 'ತಮ್ಮ ಕೇಳೋ ಎನ್ನ ಉದ್ಯೋಗ ತಮ್ಮಾ ಕೇಳೋ ಎನ್ನ ವ್ಯವಹಾರ, ಹಮ್ಮನಳಿದು ಪರಬ್ರಹ್ಮ ಚಿಂತೆಯೊಳು ಸುಮ್ಮನಿರುವ ಎರಡೆಮ್ಮೆಯ ಕಾಯಿತೀನಿ' ಎಂದು ಹಾಡಿದರೆಂದು ಸೊಪ್ಪಿಮಠದವರು ಹೇಳುತ್ತಾರೆ. ಇಲ್ಲಿಯ ಊಹೆಯಿಂದ ನೀರಲಕೇರಿ ಗ್ರಾಮವು ಅನುಭವ ಮಂಟಪವಾಗಿರಬೇಕು. 'ಕೈಲಾಸಬಯಸ ಬೇಡೋ ಕೈವಲ್ಯ ಪಡೆದು ನೋಡೋ ಸುಯ್ಗುರಿವುತ ಹುಲುಬುಗಟ್ಟಿಮನದಿ' ಎಂದು ಕೈವಲ್ಯ ಜ್ಞಾನದಲ್ಲಿಯೇ ಕೈಲಾಸವಿದೆ ಎಂದು ಹೇಳಿದರು.

ಸ್ವಾಮಿಯಾದಾಗಲೇ ಅನೇಕ ಆಪಾದನೆಗಳಿಗೆ ಗುರಿಯಾಗಿದ್ದು ತಿಳಿದುಬರುತ್ತದೆ. ಕುಹಕಿಗಳು ಇವರಿಗೆ ಆಹಾರದಲ್ಲಿ ಅಫೀಮ್ ಬೆರೆಸಿದರು. ಮಲಗಿದಾಗ ಇವರ ಇಷ್ಟಲಿಂಗವನ್ನು ಕದ್ದರು. ಅಂಗದಲ್ಲಿ ಲಿಂಗವೇ ಇಲ್ಲವೆನ್ನುವ ದುಃಖದಿಂದ ಯಾರನ್ನೂ ನಿಂದಿಸದೇ ದೇಹತ್ಯಾಗಕ್ಕೆ ಸಿದ್ಧರಾದರು. ನಂತರ ದುಷ್ಟರು ಇವರ ಲಿಂಗವನ್ನು ತಂದಿಟ್ಟರೆಂಬ ಹೇಳಿಕೆಗಳು ತಿಳಿದುಬರುತ್ತವೆ.

ಸಮಾಜಘಾತುಕರು ಇವರನ್ನು ಪಟ್ಟದಿಂದ ಕಿತ್ತೊಗೆಯಲು ಪ್ರಯತ್ನ ಮಾಡಿದ್ದುಂಟು. ಆದರೆ ಬಸವಲಿಂಗರು ತಮ್ಮ ಮನಸ್ಸಿಗೆ ವೇದನೆಯನ್ನು ತಂದುಕೊಂಡು ನೀರಲಕೇರಿ ಗ್ರಾಮವನ್ನು ಬಿಟ್ಟು, ಐದನಾಳ ಗ್ರಾಮಕ್ಕೆ ಬಂದರು.

ಶರಣರ ಸಾವು ಮರಣದಲ್ಲಿ ನೋಡು ಎನ್ನವಂತೆ “ತಮ್ಮ ಅಂತಿಮ ದಿನಗಳವರೆಗೆ ಐದನಾಳ ಗ್ರಾಮದಲ್ಲಿಯೇ ಇದ್ದು ಕ್ರಿ.ಶ.೧೮೭೨ರಲ್ಲಿ ಲಿಂಗೈಕ್ಯರಾದ ಮಾಹಿತಿ ಲಭ್ಯವಾಗಿದೆ. ಐದನಾಳ ಗ್ರಾಮದಲ್ಲಿ ಇವರ ಸಮಾಧಿಯಿದೆ. ೯-೩-೭೩ರಲ್ಲಿ ಈ ಶರಣರ ಶತಮಾನೋತ್ಸವವನ್ನು, ಐದನಾಳ ಗ್ರಾಮದಲ್ಲಿ ಆಚರಿಸಿದರು.”[೧೦] ನೀರಲಕೇರಿ ಗ್ರಾಮದ ಬೆಟ್ಟದಲ್ಲಿ ಇವರು ತಪಸ್ಸು ಮಾಡಿದ ಐತಿಹ್ಯ ಕಂಡುಬರುತ್ತದೆ. ಶ್ರಾವಣ ಮಾಸ ಶುಕ್ಲಪಕ್ಷ ದಶಮಿಯಂದು ಇವರ ಉತ್ಸವ ನಡೆಯುತ್ತದೆ.

“ಮಠದ ಸ್ವಾಮಿಗಳಾದನಂತರ ತತ್ವಪದಗಳನ್ನು ರಚಿಸಿರಬೇಕು. ಇವರ ಹಾಡುಗಳ ಅಂಕಿತ ನಾಮ ‘ಗಡಿಯ ನೀರಲಕೇರಿ ಒಡೆಯ ಪಂಚಾಕ್ಷರ’ ಎಂಬುದಾಗಿ ತಿಳಿದು ಬರುತ್ತದೆ. ಇವರ ತತ್ವಪದಗಳ ಸಂಖ್ಯೆ ಅಂದಾಜು ೫೦೦ ದಾಟಿದ್ದು, ಸದ್ಯ ದೊರೆತವು ೧೮೦”[೧೧] ಎಂಬುದಾಗಿ ಡಾ.ಬಸವಲಿಂಗ ಸೊಪ್ಪಿಮಠ ಹೇಳುತ್ತಾರೆ. ಮೊದಲ ಬಾರಿಗೆ ೧೯೫೪ರಲ್ಲಿ ‘ಜ್ಞಾನಗೀತೆ’ ಎಂಬ ಹೆಸರಿನಲ್ಲಿ ೧೮೫ ಪದ್ಯಗಳನ್ನು ಕೆಂಬಾವಿ ಗುರು ಲಿಂಗಾರ್ಯ ಪ್ರಕಟಿಸಿದ್ದಾರೆ. ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ ಇವರಿಂದ ನೀರಲಕೇರಿ ಬಸವಲಿಂಗ ಶಿವಯೋಗಿಗಳ ಸ್ವರವಚನಗಳು ಎನ್ನುವ ಸಂಕಲನ ಪ್ರಕಟವಾಗಿದೆ. ಇವರ ಅನುಭಾವದ ಹಾಡುಗಳು, ದೇವಿಸ್ತುತಿ ಹಾಡುಗಳು ಸಮಾಜವನ್ನು ಎಚ್ಚರಿಸುವ ಮತ್ತು ಗುರುಸ್ತುತಿ ಹಾಡುಗಳು ಕಂಡುಬರುತ್ತವೆ. ಶ್ರೀ ರಾನಡೆಯವರು ‘ಕನ್ನಡ ಸಂತರ ಪಾರಮಾರ್ಥ’ ಗ್ರಂಥದಲ್ಲಿ ಇವರ ಹಾಡುಗಳನ್ನು ಬಳಸಿಕೊಂಡದ್ದು ನೋಡಿದರೆ ಓದುಗರ ಗಮನ ಸೆಳೆದ ತತ್ವಪದಕಾರನೆಂದು ಒಪ್ಪಿಕೊಳ್ಳಲೇಬೇಕು.

### ೫. ಘನಮಠ ಶ್ರೀ ನಾಗಭೂಷಣ ಶಿವಯೋಗಿಗಳು (ಕ್ರಿ.ಶ.೧೮೨೮-೧೮೮೦)

ನಾಗಭೂಷಣರು ಘನಮಠಾರ್ಯರೆಂದು ಪ್ರಸಿದ್ಧಿ ಪಡೆದಿದ್ದು ಕಂಡುಬರುತ್ತದೆ. ಇವರು ವೀರಶೈವ ಕವಿ. ತತ್ವಪದಕಾರನ ಜನ್ಮಸ್ಥಾನ ಬಳ್ಳಾರಿ ಜಿಲ್ಲೆಯಾದರೂ ತಮ್ಮ ಆಯುಷ್ಯವನ್ನು ಹುನುಗುಂದದಲ್ಲಿ ಕಳೆದರು ಎಂದು ಕವಿ ಚರಿತೆಕಾರರು ಅಭಿಪ್ರಾಯಪಡುತ್ತಾರೆ. “ಶಿವನ ಚಿತ್ಕಳೆಯೊಂದು ಆಂಧ್ರದೊದಳವನಿಯೊಳ ದಾರೂರ ಗ್ರಾಮದವರು ಎಂದು ಅಮರನಾಥ ಶಾಸ್ತ್ರಿ ಅಭಿಪ್ರಾಯಪಡುತ್ತಾರೆ. ಶ್ರೀ ಘನಮಠೇಶರು ತೆಲುಗು ರಾಜ್ಯದ ಅತ್ತಾಪಬಲ್ದಾ ಜಿಲ್ಲೆಯ ಪಟ್ಲೂರ ತಾಲೂಕ ದೇರ್ವಾಡವೆಂಬ ಚಿಕ್ಕಹಳ್ಳಿಯಲ್ಲಿ ಜನಿಸಿದರೆಂದು ಸಬರದ ಹೇಳುತ್ತಾರೆ. ತ್ರಿಲಿಂಗ ದೇಶ ಎಂದು ಪ್ರಸಿದ್ಧ ಪಡೆದ ಆಂಧ್ರಪ್ರದೇಶದ ಅತ್ತಾಪಬಲ್ದಾ ಜಿಲ್ಲೆಯ ಪಟ್ಲೂರ ತಾಲೂಕು ದಾರೂರ ಎಂಬ ಗ್ರಾಮದಲ್ಲಿ ಜನಿಸಿದರೆಂಬುದಾಗಿ ಸಿ.ಶರಣಪ್ಪ ಹೇಳುತ್ತಾರೆ.”[೧೨] ಇಂದಿನ ಆಂಧ್ರದ ರಂಗಾರೆಡ್ಡಿ ಜಿಲ್ಲೆಯ ದಾರೂರಿನವರೆಂದು ಡಾ.ಸಂಗಮೇಶ ಸವದತ್ತಿಮಠ ಹೇಳುತ್ತಾರೆ.

ಮೇಲಿನ ಸಂಶೋಧಕರ ಅಭಿಪ್ರಾಯಗಳ ಸಾಮ್ಯತೆಯನ್ನು ಗಮನಿಸಿದರೆ, ಡಾ.ಸೌದತ್ತಿಮಠರವರ ಹೇಳಿಕೆಯನ್ನು ಇಟ್ಟುಕೊಳ್ಳುವುದು ಸೂಕ್ತವೆನಿಸಿತ್ತದೆ. ಏಕೆಂದರೆ ಡಾ. ಸಂಗಮೇಶ ಸೌದತ್ತಿಮಠ ರವರು ಘನಶ್ರೀ ಕೃತಿಯಲ್ಲಿ ದಾರೂರಿನ ದೋರವಾಡ ಗ್ರಾಮದ 'ಪೆದ್ದಮಠ' ನಾಗಭೂಷಣರ ಜನ್ಮಸ್ಥಳವೆಂದು ಹೇಳಿದ ಹಿನ್ನೆಲೆಯಲ್ಲಿ ಒಪ್ಪಿಕೊಳ್ಳಲೇ ಬೇಕಾಗುತ್ತದೆ.

ಇವರ ಕಾಲವನ್ನು ಕ್ರಿ.ಶ.೧೮೨೮ ಎಂದು ಶ್ರೀ ಶಾಂತರಸರು ಡಾ. ಬಸವರಾಜ ಸಬರದರು ಹೇಳುತ್ತಾರೆ. ಶ್ರೀ ಅಮರನಾಥ ಶಾಸ್ತ್ರಿಗಳು

"ಶಾಲಿವಾಹನ ಶಕೆಯು ಹದಿನೇಳು |
ಮೇಲೆ ಐವತ್ತೊಂದು ನೂರಕೆ |
ಕಾಲ ಸಂವತ್ಸರ ವಿರೋಧಿಯ ಅಶ್ವೀಯುಜಶುದ್ಧ||
ಕಾಲ ತಿಥಿ, ಪಂಚಮಿಯ ಶುಭದಾ|"

ಎಂಬ ಅಮರಾನಾಥ ಶಾಸ್ತ್ರೀಗಳ ಅಭಿಪ್ರಾಯ ಕ್ರಿ.ಶ.೧೮೩೦ ಎಂದಾಗುವುದು. ಲಿಂಗೈಕ್ಯ ಕಾಲ

"ಶಾಲಿವಾಹನ ಶಕೆಯಗಣಿತದ|
ಕಾಲ ಹದಿನೆಂಟ್ನೂರು ಅಂಕಿಯ|
ಮೇಲೆ ಮತ್ತೊಂದಂಕಿ ಸಂವತ್ಸರ ಪ್ರಮಾಧಿಯಲಿ||
ಚಾಲನೆಯ ಮಾಸವದು ಪುಷ್ಯದ|
ಕಾಲಶಶಿ ಪಕ್ಷದೊಳು ಬಂದಿಹ|"



ವೇಳೆಯದು ಶುಭ ಸೋಮವಾರದೊಳವರುಗಮನಿಸಿದರು|| ಎಂಭುದಾಗಿ ಅಮರನಾಥ ಶಾಸ್ತ್ರಿಗಳು ಹೇಳಿದರೆ, ಅದೇ ರೀತಿ ಶ್ರೀ ಶಾಂತರಸರು, ಶ್ರೀ ಸಬರದವರು, ಬಸವಪ್ಪ ಶಾಸ್ತ್ರೀಯವರು ಕ್ರಿ.ಶ. ೧೮೮೬ ಎಂದು, ಹಳಕಟ್ಟಿ ಹಾವನೂರರು ಕ್ರಿ.ಶ.೧೮೮೪ ಎಂದು, ಭೂಸನೂರು ಮಠ ೧೮೨೮ ಎಂದು, ಹೇಳಿರುವುದನ್ನು ಚರ್ಚಿಸಿದ ಡಾ.ಶಶಿಕಾಂತ ೧೮೮೧ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಕ್ರಿ.ಶ.೧೮೮೦ರಲ್ಲಿ ಲಿಂಗೈಕ್ಯರಾದರೆಂದು ಈ ಶಾಲಿವಾಹನ ಶಕೆ, ೧೮೦೨ ಪುಷ್ಯಶುದ್ಧ ಅಷ್ಟಮಿ ಬುಧವಾರವೆಂದು ಶಾಂತವೀರಯ್ಯ ಹೇಳುತ್ತಾರೆ. ೧೮೮೦ ಎಂದು ತತ್ವಪದಗಳ ಪ್ರಾತಿನಿಧಿಕ ಸಂಕಲನದಲ್ಲಿ ಹೇಳಲಾಗಿದೆ. ಡಾ.ಸಂಗಮೇಶ ಸೌದತ್ತಿಮಠರು ನಾಗಭೂಷಣ ೩೦ ವರ್ಷ ನಿರಂತರ ಸಂಚಾರ ಮಾಡಿ, ಕ್ರಿ.ಶ.೧೮೭೪ರಂದು ನಿಧನರಾದರೆಂದ ಹೇಳುತ್ತಾರೆ."[೧೩]

ಅಮರನಾಥ ಶಾಸ್ತ್ರಿಗಳ ಪುರಾಣದಿಂದ ತಿಳಿದುಬರುವ ವಿಚಾರವೆಂದರೆ ರಚನೆಯಾದದ್ದು ಶ್ರೀನೃಪ, ಶಾಲಿವಾಹನ ಶಕೆ, ೧೮೦೧ ಪ್ರಮಾಧಿನಾಮ ಸಂವತ್ಸರ, ಮಾಘಶುದ್ಧ ೧೫ರಲ್ಲಿ ಪೂರ್ಣವಾದದ್ದು ಲಿಂಗೈಕ್ಯ ಕಾಲ ೧೮೭೯ ಎಂದಾಗುವ ಸಾಧ್ಯತೆಯಿದೆ.

ಡಾ.ಸಂಗಮೇಶ ಸೌದತ್ತಿಮಠರ ಅಭಿಪ್ರಾಯದ ಮೇರೆಗೆ ಕ್ರಿ.ಶ.೧೮೭೪ರ ಕಾಲವನ್ನು ಇಟ್ಟುಕೊಳ್ಳುವುದು ಸೂಕ್ತ. ನೀರಲಕೇರಿ ಬಸವಲಿಂಗ ಶರಣರಿಗಿಂತ, ಕಿರಿಯರಾದ ಕಾರಣ, ಕ್ರಿ.ಶ.೧೮೭೭ರ ತರುವಾಯ ಸುಮಾರು ೧೦ ವರ್ಷ ಕಾಲದ ನಂತರ ಐಕ್ಯರಾದರೆಂದು ಭಾವಿಸಿದರೆ, ಕ್ರಿ.ಶ.೧೮೮೩ರಂದು ಐಕ್ಯರಾದರೆಂದು ತಿಳಿಯಬೇಕಾಗುತ್ತದೆ. ಹೀಗಾಗಿ ಹಳಕಟ್ಟಿಯವರು ಕ್ರಿ.ಶ.೧೮೮೪ ಎಂದಿರುವುದು ಬಹು ಸಮೀಪವಾಗಿದೆ. ಕಾಲದ ಹಿನ್ನೆಲೆಯಲ್ಲಿ ಡಾ. ಸಂಗಮೇಶ ಸೌದತ್ತಿಮಠರು ನೀಡುವ ವಿವರಗಳು ಗಮನಾರ್ಹವಾಗಿವೆ.

"ಆಂಧ್ರ ಪ್ರದೇಶದ ಹೈದ್ರಾಬಾದ್ ಜಿಲ್ಲೆಯ ದೋರ್ವಾಡಹಳ್ಳಿಯಲ್ಲಿ ವೀರಯ್ಯ ವೀರಮ್ಮ ಎಂಬ ದಂಪತಿಗಳಿಗೆ ಕ್ರಿ.ಶ.೧೮೩೮ರ ವಿರೋಧಿನಾಮ ಸಂವತ್ಸರದಲ್ಲಿ ಆಶ್ವೀಜಶುದ್ಧ ಐದು ಮಂಗಳವಾರದಂದು ನಾಗಭೂಷಣರು ಜನಿಸಿದರೆಂದು ತಿಳಿದುಬರುತ್ತದೆ."[೧೪] ದೋರವಾಡ ಗ್ರಾಮದಲ್ಲಿ ಕೆಲವು ವೀರಶೈವ ಕುಟುಂಬಗಳಿದ್ದು ಅವರ ಮಾತೃಭಾಷೆ ತೆಲುಗಾಗಿತ್ತು. ಮಠಕ್ಕೆ ಕೃಷಿಕ ಭಕ್ತರು ಬರುತ್ತಿದ್ದರು.

ಪೆದ್ದಮಠಕ್ಕೆ ವೀರಯ್ಯನವರ ಮನೆಗುರುಗಳಾದ ಶ್ರೀ ಚೆನ್ನವೀರ ಶಿವಾಚಾರ್ಯರು ಬರುತ್ತಿದ್ದರು. ಇವರಿಂದಲೇ ನಾಗಭೂಷಣರಿಗೆ ಶಿವದೀಕ್ಷೆ ಕೊಡಿಸಿದರು. ಮುಂದೆ ತಂದೆ ತಾಯಿಯರ ಬಲವಂತಕ್ಕೆ ಸಂಗಮ್ಮ ಎಂಬ ಕನ್ಯೆಯ ಜೊತೆ ವಿವಾಹ ಮಾಡಿಕೊಂಡರು, ಗಿರಿಜಾ ಎನ್ನುವ ಮಗಳು ಜನಿಸಿದ್ದು ತಿಳಿದುಬರುತ್ತದೆ. ಆದರೆ ಮುಂದೆ ಹೆಂಡತಿ ಮತ್ತು ಮಗಳ ಪ್ರಸ್ತಾಪ ಎಲ್ಲಿಯೂ ಬರುವುದಿಲ್ಲ. ಅಭ್ಯಾಸಕ್ಕೆ ಬದ್ದರಾಗಿ ಪಾಲ್ಕುರಿಕೆ ಸೋಮನಾಥನ ಬಸವಪುರಾಣದಿಂದ ಪ್ರೇರಿತರಾಗಿ ಮಠದ ಪರಿಸರಕ್ಕೆ ತಕ್ಕಂತೆ ಸಂಸ್ಕೃತ ಸಿದ್ಧಾಂತಗಳನ್ನು ಓದುತ್ತಿದ್ದರೆಂದು ಪುರಾಣದಿಂದ ತಿಳಿದುಬರುತ್ತದೆ.

ಮದುವೆಯ ನಂತರ ಗಂಡ ಹೆಂಡಿರ ನಡುವೆ ವಿರಸವಾಗಿ ಮನೆಬಿಟ್ಟು ಊರೂರು ಅಲೆದರು. "ಮುಂದೆ ತಮ್ಮ ೨೧ನೇ ವಯಸ್ಸಿನಲ್ಲಿ ಕರ್ನಾಟಕಕ್ಕೆ ಬಂದರೆಂದು ಡಾ.ಸಂಗಮೇಶ ಸೌದತ್ತಿಮಠರು ಹೇಳುವರು." ಬಸವಪುರಾಣದಿಂದ ಪ್ರೇರಿತರಾಗಿ ಬಸವಸಂದೇಶದ ಹಂಬಲವ ಹೊತ್ತು ಕನ್ನಡ ಕಲಿಸುವ ಗುರುವಿಗಾಗಿ ಶೋಧ ನಡೆಸಿದ್ದು ತಿಳಿದುಬರುತ್ತದೆ.

ಊರೂರು ಅಲೆಯುತ್ತಾ ಯಲಗೋಡಿಗೆ ಬರುತ್ತಾರೆ. ರೇವಣಸಿದ್ದಪ್ಪ ಹಿರೇಮಠರಿಂದ ಕನ್ನಡ ಕಲಿಯುವರು. ಯಲಿಗೋಡಿನ ಮಠದಲ್ಲಿ ಶರಣರ ಹಾಡುಗಳನ್ನು ಸಂಗೀತದೊಂದಿಗೆ ಹಾಡಲು ರೇವಣಸಿದ್ದಪ್ಪರ ಮಾರ್ಗದರ್ಶನದಲ್ಲಿ ಕಲಿತರು. "ರೇವಣಸಿದ್ಧ ಸ್ವಾಮಿಗಳು ಪ್ರೇಮದಿಂದ ಶಿಷ್ಯನನ್ನು ಆಲಂಗಿಸಿಕೊಂಡರು. ಶಾಸ್ತ್ರ, ಪುರಾಣ, ಯೋಗಶಾಸ್ತ್ರಬಲ್ಲವನಾಗಿರುವ ನೀನು ಪರಿಪೂರ್ಣ ಜ್ಞಾನಿಯಾಗಿರುವಿ, ಕನ್ನಡದ ನೆಲದಲ್ಲಿ ಶಿವಮತದ ಧರ್ಮವನ್ನು ಸಾರು ಜನರಿಗೆ ವಿವೇಕ ನೀತಿಯನ್ನು ಬಿತ್ತರಿಸು ಎಂದು

ಆಶೀರ್ವದಿಸಿದರು."[೧೫] ಇವರ ಆಶೀರ್ವಾದವೇ ಬಸವನ ಪಾಯಸವೆಂದು ಲೋಕಸಂಚಾರ ಮಾಡಿದರು. ಕಲ್ಬುರ್ಗಿ, ಶಹಾಬಾದ್, ಯಾದಗಿರಿ, ಚಿಂಚೋಳಿ, ಬಿಜಾಪುರ, ಬಳ್ಳಾರಿ, ಬಿಚ್ಚಾಲಿ, ಗೋನ್ವರ, ಸಂಗಮೇಶ್ವರ, ತಾಳಿಕೋಟೆ, ಬಾಗೇವಾಡಿ, ಕುಂಟೋಜಿ ಮುದಗಲ್ಲು, ಲಿಂಗಸೂಗೂರು, ನಾರಾಯಣಪೇಟೆ, ನೀರಡಗುಂಬಿ, ಜಾಲಹಳ್ಳಿ, ಹೇರೂರು, ರೊಟ್ನಡಿಗಿ, ಹುನಗುಂದ, ಇಳಕಲ್ ಮೊದಲಾದ ಊರುಗಳಲ್ಲಿ ಘನಮಠ ಸಂತರು ಸಂಚರಿಸಿದ ಉಲ್ಲೇಖಗಳು ಸಿಗುತ್ತವೆ.

ಕಲ್ಬುರ್ಗಿ ಜಿಲ್ಲೆಯ ಚಿಂಚೋಳಿಯಲ್ಲಿ ಬಸವಪುರಾಣದ ಸಮಾಪ್ತಿಯ ಮೆರವಣಿಗೆಯ ಕಾಲಕ್ಕೆ ಅಡ್ಡಿಯಾದಾಗ ನಡೆದ ಘಟನೆ ಹೀಗಿದೆ. 'ಬಸವಪೂರ್ಣ ಸದಾಶಿವ' ಎಂಬ ಹನ್ನೊಂದು ನುಡಿಯ ಶಕ್ತಿಯುತವಾದ ಸ್ತೋತ್ರವನ್ನು ರಚಿಸಿ ಹಾಡಿದರು. ಅಡ್ಡಿಯುಂಟು ಮಾಡಿದವರಿಗೆ ಮತಿಭ್ರಮೆಯುಂಟಾಯಿತಂತೆ. ಆಗಲೇ ಅವರು ತಮ್ಮ ತಪ್ಪೊಪ್ಪಿಕೊಂಡು ಶರಣಾದರಂತೆ. ಎಲ್ಲರೂ ಸೇರಿ ಮೆರವಣಿಗೆಯನ್ನು ನೆರವೇರಿಸಿದರೆಂದು ಸಿದ್ಧಯ್ಯ ಪುರಾಣಿಕರ ಶರಣಚರಿತಾಮೃತದಲ್ಲಿ ಹೇಳಿದ್ದಾರೆ."[೧೬] ಸೊಲ್ಲಾಪುರದಲ್ಲಿ ಸಿದ್ದರಾಮೇಶ್ವರನ ದರ್ಶನಕ್ಕೆ ಹೋದಾಗ ದೇವಸ್ಥಾನದ ಅರ್ಚಕರು ಯಾರೋ ಭೈರಾಗಿ ಎಂದು ಬಗೆದು, ಗುಡಿಯ ಕದ ತೆಗೆಯದಿರಲು ಮುಚ್ಚಿದ ಬಾಗಿಲ ಮುಂದೆಯೇ ನಿಂತು ನಲವತ್ತೊಂದು ನುಡಿಗಳ ಸ್ತೋತ್ರವನ್ನು ಹಾಡಿ ಸಿದ್ದರಾಮನನ್ನು ಒಲಿಸಿಕೊಂಡಿದ್ದು ತಿಳಿದುಬರುತ್ತದೆ.

ಇವರು 'ಘನಮಠವಾಸ' ಅಂಕಿತದಿಂದ ತತ್ವಪದಗಳನ್ನು ರಚಿಸಿದ್ದಾರೆ. ಭಕ್ತಿ ಸುಧಾಸಾರ ಎಂಬ ಹೆಸರಿನಲ್ಲಿ ಮೊದಲಬಾರಿಗೆ ಧಾರವಾಡದ ಮೃತ್ಯುಂಜಯಪ್ಪ ಪ್ರಕಟಿಸಿದ್ದಾರೆ. ಅನಂತರ ೧೪೭ ಪದಗಳನ್ನು ೧೯೭೦ರಲ್ಲಿ ಮಲ್ಲಿಕಾರ್ಜುನ ಸ್ವಾಮಿಗಳು ಪ್ರಕಟಿಸಿದ್ದಾರೆ. ಕೃಷಿ ಜ್ಞಾನದ ಮಾಹಿತಿಯಿರುವ 'ಕೃಷಿ ಜ್ಞಾನ ಪ್ರದೀಪಿಕೆ'ಯನ್ನು ತಮ್ಮ ಶಿಷ್ಯ ಸಿದ್ಧರಾಮಪ್ಪ ಕುನ್ನಾಳ್ ಇವರಿಂದ ತಾವೇ ವಿಷಯ ಜ್ಞಾನವಿತ್ತು ಬರೆಯಿಸಿ ಹೋಗಿದ್ದಾರೆ ಎಂಬ ಹೇಳಿಕೆಗಳಿವೆ. ಘನಮಠ ನಾಗಭೂಷಣ ಪುರಾಣದ ಕರ್ತೃ ಅಮರನಾಥ ಶಾಸ್ತ್ರಿಗಳು ತಮ್ಮ ಪುರಾಣದಲ್ಲಿ ಘನಮಠಾರ್ಯರೇ ಬರೆದರೆಂದು ಹೇಳುತ್ತಾರೆ. ಆದರೆ ಈ ಕೃತಿಯ ಕರ್ತೃವಿನ ಬಗ್ಗೆ ಅಸ್ಪಷ್ಟವಾದ ಊಹೆಗಳಿವೆ. ಸಿದ್ದರಾಮಪ್ಪ ಕುನ್ನಾಳ್ ಶಿಷ್ಯತ್ವವನ್ನು ಸ್ವೀಕರಿಸಿರಬಹುದು. ಆದರೆ ಕರ್ತೃವಂತೂ ಆಗಿರಲು ಸಾಧ್ಯವಿಲ್ಲ. ಘನಮಠಾರ್ಯರಿಗೆ ಬಾಲ್ಯದಲ್ಲಿ ಸ್ವತಃ ತಂದೆಯ ಮಾರ್ಗದರ್ಶನವಿದೆ. ಪೆದ್ದಮಠಕ್ಕೆ ಅನೇಕ ರೈತರು ಬರುತ್ತಿದ್ದು ಕಂಡುಬರುತ್ತದೆ. ಇವರ ಬಸವಸ್ತುತಿಯ ಹಾಡುಗಳು ವೀರಶೈವ ಧರ್ಮದ ತತ್ವಗಳು ಗುರು, ಜಂಗಮರಿಗೆ ಎಚ್ಚರಿಸುವ ಆದರ್ಶಯುತವಾದ ವಿಚಾರಗಳು ಹೆಚ್ಚಾಗಿ ಇವರ ಹಾಡುಗಳಲ್ಲಿ ಕಂಡಬರುತ್ತವೆ.

ಸಂತೆಕೆಲ್ಲೂರು ಪ್ರದೇಶದಲ್ಲಿ ಘನಮಠಾರ್ಯರನ್ನು ಭಕ್ತಿಯಿಂದ ಸ್ತುತಿಸಿ, ಭಾವಪರವಶತೆಯಿಂದ ಸಂತೋಷವನ್ನು ವ್ಯಕ್ತಪಡಿಸುವ ಮಾಹಿತಿ ನನ್ನ ಕ್ಷೇತ್ರಕಾರ್ಯದಿಂದ ಲಭ್ಯವಾಗಿದೆ. ಅಲ್ಲಿನ ಜನರಿಗೆ

ತಮ್ಮ ಕೊನೆಯ ಹೇಳಿಕೆಯನ್ನು ಘನಮಠಾರ್ಯರು ಹೀಗೆ ಹೇಳಿದ್ದಾರೆಂದು ಹೇಳುವರು. ಅದು ಹೀಗಿದೆ; ನನ್ನ ಸಮಾಧಿಯ ಮೇಲೆ ಗದ್ದುಗೆ, ಗುಡಿ ಇತ್ಯಾದಿ ಕಟ್ಟಬೇಡಿರಿ, ಕಟ್ಟಿದವರ ವಂಶ ನಿರ್ವಂಶವಾಗಲೆಂದು ಹೇಳಿದರು. ಆದರೆ ಒಬ್ಬ ಭಕ್ತೆ ಗದ್ದುಗೆಯ್ನನು ಕಟ್ಟಿಸಿ ಬಿಟ್ಟಳು. ಪರಶಿವನೇ ಗುರುವೆಂದು ಆ ಭಕ್ತೆ ನಂಬಿದ್ದಳಂತೆ. ಈಗಲೂ ಘನಮಠಾರ್ಯರ ಲಿಂಗೈಕ್ಯ ಶತಮಾನೋತ್ಸವ ಸ್ಮರಣ ಸಂಚಿಕೆಯ ಪ್ರಕಟಣೆಗಳು ಜರುಗುವವೆಂದು ತಿಳಿದುಬರುತ್ತದೆ.

ಕುಂಟೋಜಿಯಲ್ಲಿ ಇವರ ನೆನಪಿನ ಹೇಳಿಕೆಗಳು, ಸಂತೆಕೆಲ್ಲೂರಿನಲ್ಲಿನ ಇವರ ಗದ್ದುಗೆಯನ್ನು ಈಗಲೂ ನೋಡಬಹುದು. ಇಂದಿಗೂ ಇಲ್ಲಿ ಅನುಭವ ಮಂಟಪ ಸಮಾಧಿಯ ಜೀರ್ಣೋದ್ಧಾರವನ್ನು ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಮಾಡಿದ್ದಾರೆಂದು ತಿಳಿದುಬರುತ್ತದೆ.

### ೬. ಅರವಲಿ ಬಿಜಲಿ ವಸ್ತಾದ್ (ಕ್ರಿ.ಶ.೧೮೪೦-೧೯೦೦)

ಬಿಜಲಿ ವಸ್ತಾದ್ ಹುಟ್ಟಿ ಬೆಳೆದದ್ದು ಎಲ್ಲಿ ಎಂದು ತಿಳಿಯದೇ ಇದ್ದರೂ, ಮಾನ್ವಿ ತಾಲ್ಲೂಕು ಅರವಲಿಯಲ್ಲಿ ಬದುಕಿದ್ದನೆಂಬುದು ತಿಳಿದುಬರುತ್ತದೆ. ಶ್ರೀ ಶಾಂತರಸರು 'ಎಡೆದೊರೆನಾಡಿನ ಅನುಭಾವ ಕವಿಗಳು, (ಪು.೭೦) ಈ ಪುಸ್ತಕದಲ್ಲಿ ಬಿಜಲಿ ವಸ್ತಾದ್ ನ ಕಾಲ ಕ್ರಿ.ಶ.೧೮೬೦ರಿಂದ ಕ್ರಿ.ಶ.೧೯೦೦ ಎನ್ನುವರು. ಡಾ.ಬಸವರಾಜ ಸಬರದರವರು ಹೈದ್ರಾಬಾದ್ ಕರ್ನಾಟಕದ ತತ್ವಪದಕಾರರು(ಪು.೧೨೯) ಎಂಬ ಹೊತ್ತಿಗೆಯಲ್ಲಿ ಇವರ ಕಾಲವನ್ನು ೧೮೪೦ ರಿಂದ ೧೯೦೦ ಎಂದು ಗುರುತಿಸುತ್ತಾರೆ.

ಬಿಜಲಿ ವಸ್ತಾದ್‌ನು ಮುಸ್ಲಿಂ ತತ್ವಪದಕಾರನಾದ್ದರಿಂದ ರಾಯಚೂರಿನ ಭಾಗದಲ್ಲಿ ಅರರಾಮ ಸಾಹೇಬನೆಂಬ ಸಂತ ಕ್ರಿ.ಶ.೧೮೬೫ರ ಸಂದರ್ಭದಲ್ಲಿ ಬದುಕಿದ್ದನೆಂಬ ವಿವರಗಳು ದೊರಕುತ್ತವೆ. ಗೊಬ್ಬೂರು ಹಂಪಣ್ಣನ ಜೀವನದಲ್ಲಿ ಕೆಲ ಮಾಹಿತಿಗಳು ದೊರಕುತ್ತವೆ. ಅದರಂತೆ ಅರರಾಮ ಸಾಹೇಬನ ಪ್ರೇರಣೆಯು ಅರವಲಿ ಬಿಜಲಿ ವಸ್ತಾದನಿಗೆ ಬಂದಿರಬೇಕು. ಆದ್ದರಿಂದ ಶ್ರೀ ಶಾಂತರಸರು ಹೇಳುವಂತೆ ಕವಿಯ ಕಾಲ ಕ್ರಿ.ಶ.೧೮೬೦ ಎಂದು ಇಟ್ಟುಕೊಳ್ಳದೇ ಕ್ರಿ.ಶ.೧೮೪೦ ಎಂದು ಇಟ್ಟುಕೊಳ್ಳುವುದು ಸೂಕ್ತ; ಏಕೆಂದರೆ ಗಬ್ಬೂರು ಹಂಪಣ್ಣನು ಕ್ರಿ.ಶ.೧೮೭೮ರಲ್ಲಿ ಕೊನೆಯಾದನೆಂಬ ಮಾಹಿತಿ ದೊರಕುವುದರಿಂದ ಕ್ರಿ.ಶ.೧೮೪೦ ಎಂದು ಹೇಳಬಹುದು.

ಮರ್ಸಿಯಾ ಮತ್ತು ರಿವಾಯತ್ ಹಾಡುಗಳನ್ನು ಬಿಜಲಿ ವಸ್ತಾದ್‌ನು ಬರದಿದ್ದನೆಂದು ತಿಳಿದುಬರುತ್ತದೆ. ಈ ಹಾಡುಗಳು ಲಾವಣಿ ಅಂಶಗಳನ್ನು ಹೋಲುತ್ತಿದ್ದರೂ ಅಭಿವ್ಯಕ್ತಿ ಕ್ರಮದಲ್ಲಿ ಭಿನ್ನವಾಗಿ ಕಂಡುಬರುತ್ತದೆ. ಮುಸ್ಲಿಂ ಇತಿಹಾಸದ ಕರಿನೆರಳನ್ನು ಕಲಾತ್ಮಕತೆಯಿಂದ ಕಥಾತ್ಮಕವಾಗಿ ಹೇಳುತ್ತಾ ಇವು ಸಾಗುತ್ತವೆ. ಮರ್ಸಿಯಾ ಎಂದರೆ ಶೋಕಗೀತೆ, ಇದರಲ್ಲಿ ವೀರ ಗೀತೆಗಳೂ ಕಂಡುಬರುತ್ತವೆ. ರಿವಾಯತ್ ಎಂದರೆ ಅಖ್ಯಾಯಿಕೆ, ಪುರಾಣ ಕತೆಗಳು ಆಗಿವೆ. ಇಂಥ ಎರಡು ಬಗೆಯ

ಕಾವ್ಯಗಳ ಉಜ್ವಲ ಪರಂಪರೆ ಈ ಭಾಗದಲ್ಲಿ ೧೯ನೇ ಶತಮಾನದ ಸಂದರ್ಭದಲ್ಲಿ ಬೆಳೆದು ಬಂದಿತ್ತು ಎಂದು ಗುರುತಿಸಬಹುದು. ನನ್ನ ಕ್ಷೇತ್ರಕಾರ್ಯದಲ್ಲಿ ಕೆಲವು ಮರ್ಸಿಯಾ ಹಾಡುಗಳು ಮತ್ತು ರಿವಾಯತ್ ಪದ್ಯಗಳು ದೊರಕಿದ್ದವು. ಕೈ ಬರಹದಿಂದ ಬರೆದ ಈ ಹಾಡುಗಳನ್ನು ಅಲಾವಿ ಹಬ್ಬದಲ್ಲಿ ಮುಸ್ಲಿಂ ತರುಣರು ನರ್ತನವನ್ನು ಮಾಡುತ್ತಾ ಹಾಡುವುದು ತಿಳಿದುಬರುತ್ತದೆ.

ಈ ಹಾಡುಗಳು ಮುಸಲ್ಮಾನ ಸಂತರ, ವೀರರ ಜೀವನ ಕತೆ ಹೇಳುವ ಹಾಡುಗಳಾಗಿದ್ದವೆಂದು ಹೇಳಬಹುದು. ಇಪ್ಪತ್ತೈದು, ಮೂವತ್ತು ನುಡಿಗಳ ಸವಾಲ್ ಜವಾಬ್ ಜೊತೆಗೆ, ಹಬ್ಬ, ಉತ್ಸವ, ಮೊಹರಂ ಆಚರಣೆ ಮುಂತಾದವುಗಳನ್ನು ಚಿತ್ರಿಸುತ್ತವೆ. ಮರ್ಸಿಯಾ ಮತ್ತು ರಿವಾಯತ್ ಹಾಡುಗಳ ಬೆಳವಣಿಗೆಗೆ ಬಿಜಲ ವಸ್ತಾದ್‌ನ ಪಾತ್ರ ಹಿರಿಸ್ಥಾನ ಪಡೆದ ಸಂತ ಎಂದು ಊಹಿಸಬಹುದು. ಮರ್ಸಿಯಾ ಹಾಡುಗಳಲ್ಲದೇ ಅನೇಕ ತತ್ವಪದಗಳನ್ನು ಬಿಜಲಿ ವಸ್ತಾದ್ ಬರೆದಿರುವನು. ಇವನ ಏಳು, ಎಂಟು ಪದಗಳು ಮೌಖಿಕವಾಗಿ ದೊರೆತಿವೆ. ಈ ಪದ್ಯಗಳಿಂದ ಈ ಸಂತನ ವ್ಯಕ್ತಿತ್ವವನ್ನು ಗುರುತಿಸಬಹುದು.

ದೇವಸೂಗೂರಿನ ಶ್ರೀಸೂಗೂರೇಶ್ವರನನ್ನು ಕುರಿತು ಹಾಡಿದ ಹಾಡುಗಳು, ಗುಡುಗುಂಟಿ ಅಮರೇಶ್ವರನನ್ನು ಅಂತಃಸ್ಫೂರ್ತಿಯಿಂದ ರಚಿಸಿದ ಪದ್ಯಗಳು ಲಭ್ಯವಾಗಿವೆ. ಅಕ್ಕಿ, ಗೋಧಿ, ತುಪ್ಪ, ಸಕ್ಕರೆ, ಜೋಳ, ನವಣೆ, ರಾಗಿ, ಇವುಗಳ ಮಧ್ಯ ನಡೆದ ವಾದಗಳ ಚಿತ್ರಿತ ಹಾಡುಗಳು ರಂಜನೀಯತೆಯೊಂದಿಗೆ ಧಾನ್ಯಗಳ ಮಹತ್ವವನ್ನು ಸಾರುತ್ತವೆ.

"ಮಡಿಯ ಸಂಗಟ ನಡೆಯಿರಿ ಮಟಮಾರಿಗೆ
ನಮ್ಮ ಶ್ರೀಗುರು ವೀರಭದ್ರಸ್ವಾಮಿ ದರ್ಶನಕೆ"[೧೭]

ಮಟಮಾರಿ ಜಾತ್ರೆಯ ವೈಭವವನ್ನು ಹಾಗೂ ಮಹಿಮೆಯನ್ನು, ಈ ಹಾಡು ಸಾರುತ್ತದೆ. ತನ್ನ ಕಾಲದ ಸರಕಾರವನ್ನು ಹೀಗೆ ಹೇಳುತ್ತಾನೆ. "ಸುತ್ತ ಸರಕಾರದವರು ರಾಯಚೂರು ಹವಾಲ್ದಾರರು ಪೋಲೀಸದವರು, ಗೌಡ ಕುಲಕರ್ಣ್ಯಾರು" ಎಂದು ಸರಕಾರವನ್ನು ತರ್ಕಿಸಿದ್ದು ತೋರುತ್ತದೆ.

ವೀರಶೈವ ಧರ್ಮದ ಆಚರಣೆಯ ಲಿಂಗಾಂಗ ಸಾಮರಸ್ಯದ ಅರಿವಿನ ಪದ್ಯಗಳನ್ನು ರಚಿಸಿದ್ದರಿಂದ ಇವನು ಶಿವಸಂಪ್ರದಾಯದ ಅನುಯಾಯಿಯಾಗಿರಬೇಕೆಂದು ಊಹಿಸಬಹುದು. 'ಬಿಜಲಿ' ಎಂಬ ಅಂಕಿತದೊಂದಿಗೆ ಇವನ ಪದ್ಯಗಳು ಕಂಡುಬರುತ್ತವೆ. ಕ್ರಿ.ಶ.೧೯೦೫ರಲ್ಲಿ ಅರವಲಿ ಗ್ರಾಮದಲ್ಲಿಯೇ ಕೊನೆಯಾದನೆಂಬ ವಿವರಗಳು ಲಭ್ಯವಾಗಿವೆ. ಬಿಜಲಿ ವಸ್ತಾದ್‌ನ ತತ್ವಪದಗಳು ಪುಸ್ತಕ ರೂಪದಲ್ಲಿ ಪ್ರಕಟವಾಗಿಲ್ಲ. ಅರವಲಿ ಗ್ರಾಮದವರು ಸಹಾಯ ಮಾಡಿದರೆ, ಆತನ ಸಾಹಿತ್ಯವನ್ನು ಇನ್ನಷ್ಟು ಸಂಗ್ರಹಿಸಬಹುದು.

## ೭. ಬಾಲರಾಮಪ್ಪ (ಕ್ರಿ.ಶ.೧೮೪೨-೧೮೯೭)

ರಜಪೂತರ ವೀರಮಾಂಬ ಮತ್ತು ಭೀಮಸಿಂಗ್ ಎನ್ನುವ ದಂಪತಿಗಳಿಗೆ ೩ನೇ ಮಗನಾಗಿ ರಾಯಚೂರಿನಲ್ಲಿ ಬಾಲರಾಮಪ್ಪ ಜನಿಸಿದ್ದನೆಂದು ತಿಳಿದುಬರುತ್ತದೆ. ರಾಯಚೂರಿನ ವೈಶ್ಯಕುಲದ ನಾಗಯ್ಯನವರನ್ನು ಬಾಲರಾಮಪ್ಪನು ಗುರುಗಳಾಗಿ ಸ್ವೀಕರಿಸಿದ್ದು ಕಂಡುಬರುತ್ತದೆ. ನಾಗಯ್ಯನು ಅಚಲ ಸಂಪ್ರದಾಯದ ಪ್ರತಿಪಾದಕನು. ಆಂಧ್ರದ ಶಿವರಾಮ ದೀಕ್ಷಿತ ಎಂಬ ದಾರ್ಶನಿಕನಿಂದ ಅಚಲ ಮಾರ್ಗದ ಪರಂಪರೆಯು ಬೆಳೆದಿರಬೇಕೆಂಬ ಮಾಹಿತಿ ಲಭ್ಯವಾದ್ದರಿಂದ ನಾಗಯ್ಯನಿಗಿಂತಲೂ ಬಾಲರಾಮಪ್ಪನು ಈ ಭಾಗದಲ್ಲಿ ಮುಖ್ಯ ಸ್ಥಾನವನ್ನು ಹೊಂದಿದ್ದ ಎಂಬ ವಿವರಗಳು ಲಭ್ಯವಾಗಿವೆ. ಅವುಗಳೆಂದರೆ, ಒಳ್ಳೆಯ ಶಿಕ್ಷಣ ನೀಡುವ ಶಾಲೆ, ಬಾಲರಾಮಪ್ಪನವರ ಶಾಲೆಯಾಗಿತ್ತೆಂದು ಹೇಳಲಾಗಿದೆ. ಪಕ್ಕಾರೋಜು, ಖಾತೆ, ಕಲಿತ ವಿದ್ಯಾರ್ಥಿಗಳು ವಾಣಿಜ್ಯ ಕ್ಷೇತ್ರದಲ್ಲಿ ಶ್ರೀಮಂತರಾಗಿದ್ದಾರೆ. ಇವರೆಲ್ಲರೂ ಬಾಲರಾಮಪ್ಪನವರ ಶಾಲೆಯ ಬಗ್ಗೆ ಪ್ರಶಂಸೆ ಮಾಡುವುದನ್ನು ಸ್ಮರಿಸಬಹುದು.

ತಮ್ಮ ಗುರುಮಠದ ಚಿಕ್ಕಗುಡಿಯ ಬೆಳಕಿನಲ್ಲಿಯೇ ಕೈವಲ್ಯ ಸಾಹಿತ್ಯ ಬರೆಯುತ್ತಿದ್ದನೆಂದು ಬಾಲರಾಮಪ್ಪನ ಬಗ್ಗೆ ಕೇಳಿದ ರಾಮಪುರದ ಭೀಮಣ್ಣನವರು ಹೇಳುವರು. ಈ ಶಾಲೆಯ ಎದುರಿನಲ್ಲಿಯೇ ಸಿಕಂದರ್ ಪಾಶಾ ಎನ್ನುವ ಮುಸ್ಲಿಂ ಸಂತನ ಗದ್ದುಗೆಯನ್ನು ಕಾಣಬಹುದು. ಇವರಿಬ್ಬರೂ ಸ್ನೇಹಿತರೆಂಬ ಪ್ರಸ್ತಾಪ ಬರುತ್ತದೆ. ಈ ಕುರಿತಾಗಿ ಸಂಶೋಧನೆಯ ಅಗತ್ಯವಿದೆ.

ಬಾಲರಾಮಪ್ಪನು ಶ್ರೇಷ್ಠ ಯೋಗಿ, ಶಿಖಾಚಕ್ರದವರೆಗೆ ದೇಹವನ್ನು ಹದಮಾಡಿ ನಾಲ್ಕು, ಐದು ಅಡಿಗಳವರೆಗೆ ಮೇಲೆದ್ದು ಎಲ್ಲಾ ದಿಕ್ಕಿಗೂ ನಮಸ್ಕರಿಸುತ್ತಿದ್ದನೆಂದು ರಾಮಪುರದ ಭೀಮಣ್ಣನವರು ಹೇಳುತ್ತಾರೆ.

ತೆಲುಗು ತತ್ವಪದಕಾರನಾದ್ದರಿಂದ ಬಾಲರಾಮಪ್ಪನು ೧. ಕೇಮಾತ್ಮಕ ಶತಕಮು ಎನ್ನುವ ಕೃತಿಯನ್ನು ರಚಿಸಿದ್ದನ್ನು ಗಮನಿಸಬಹುದು. ಇದರಲ್ಲಿ ನೂರಹನ್ನೆರಡು ಹಾಡುಗಳು ದ್ವಿಪದಿಯಲ್ಲಿವೆ. ೨. 'ಅಚಲಬೋಧ ಪರಿಪೂರ್ಣ ತತ್ವಮುಲು' -ಇದರಲ್ಲಿ ಐವತ್ತೊಂದು ಹಾಡುಗಳನ್ನು ಕಾಣಬಹುದು. ೩. 'ಶುದ್ಧ ನಿರ್ಗುಣ ತತ್ವ ದ್ವಿಪದಾರ್ಥದರುವುಲು' -ಇಲ್ಲಿ ನೂರಮೂವತ್ತೆರಡು ಹಾಡುಗಳನ್ನು ನೋಡಬಹುದು.

ತನ್ನ ಹಾಡುಗಳಿಗೆ 'ನಾಗಾರ್ಯ'ನೆಂದು ಬಳಸಿ, ಶಿಷ್ಯತ್ವಕ್ಕೆ ಋಣತ್ವವನ್ನು ಅರ್ಪಿಸಿದ್ದಾನೆ. ದ್ವಿಪದಿಯ ಈ ಹಾಡು ತೆಲುಗಿನಿಂದ ಕನ್ನಡಕ್ಕೆ ಭಾಷಾಂತರಿಸಲಾಗಿದೆ.

"ಏನು ಹೇಳಲಮ್ಮಾ ಸಖಿಯೇ | ಅದಕೆ ಕಾಯವಿಲ್ಲವೋ
ಇಂದು ಮುಖಿಯೇ | ಹಾವು ಭೂಮಿಯ ನುಂಗಿ | ಇರುವೆ
ಹಾವನು ನುಂಗಿ | ಸೊಳ್ಳೆ ಇರುವೆಯನು ಪರಿಪೂರ್ಣತಾ ನುಂಗಿತು|"[೧೮]

ಈ ಹಾಡು ಬೆಡಗಿನ ಭಾಷೆಯಲ್ಲಿರುವುದನ್ನು ಕಾಣಬಹುದು.

ಬಲರಾಮಪ್ಪನ ನಂತರ, ಪರಶುರಾಮಪ್ಪ, ರಾಚಯ್ಯ ಶಿಷ್ಯರಾಗಿದ್ದು, ಬಾಲರಾಮ ಶಾಲಾಮಠದಲ್ಲಿ, ಪ್ರತಿ ಅಮಾವಾಸ್ಯೆಗೆ ಆಧ್ಯಾತ್ಮಿಕ ಚರ್ಚೆ ಮಾಡುವುದನ್ನು ಹಾಗೂ ಭಜನೆ ಮಾಡುವುದನ್ನು ನೋಡಬಹುದು. ರಾಯಚೂರಿನ ಚಂದ್ರಬಂಡಾ ಕಾಲೋನಿಯ ಹತ್ತಿರ ಜಲೆ ಬೆಟ್ಟದ ಕೆಳಗೆ 'ಶ್ರೀಗಿರಿ ಮಠ'ದಲ್ಲಿ ಇವನ ಗದ್ದುಗೆಯನ್ನು ಕಾಣಬಹುದು. ಬಲರಾಮಪ್ಪನು ಐಕ್ಯವಾದ ವರ್ಷ ಕ್ರಿ.ಶ.೧೯೮೭ ಎಂದು ಮಾನಸಗಲ್ ವೆಂಕಣ್ಣಗೌಡ ಹೇಳುವರು. ಬಾಲರಾಮಪ್ಪನ ಜೀವನ ಮತ್ತು ಸಾಹಿತ್ಯದ ಕಡೆಗೆ ಯಾರೂ ಅಷ್ಟು ಗಮನ ಹರಿಸಿಲ್ಲ. ತೆಲುಗು ಆಧ್ಯಾತ್ಮಿಕ ಸಾಹಿತ್ಯವಿದಾದ್ದರಿಂದ ಕನ್ನಡದ ತತ್ವಪದ ಸಾಹಿತ್ಯದಲ್ಲಿ ಗುರುತಿಸಿಕೊಂಡಿಲ್ಲ.

### ೮. ವೆಂಕಟಾಪುರ ಖೇಮಣ್ಣ (ಕ್ರಿ.ಶ.೧೮೫೦-೧೯೩೫)

ದತ್ತಪೀಠ ಪರಂಪರೆಯ ಕೊನೆಯ ಗುರು ಬಂಡೇಗುರು. ಇವರ ಕಾಲ ಕ್ರಿ.ಶ.೧೯೦೬ ಎಂದಾದರೆ, ಶಿಷ್ಯನಾದ ಖೇಮಣ್ಣರ ಕಾಲ ಕ್ರಿ.ಶ.೧೮೬೦ ರಿಂದ ೧೯೩೫ ಆಗಿರಬೇಕೆಂದು ಹೇಳಲಾಗುತ್ತದೆ. ಡಾ. ಬಸವರಾಜ ಸಬರದರವರು ಖೇಮಣ್ಣನ ಕಾಲವನ್ನು ಕ್ರಿ.ಶ.೧೮೫೦ ರಿಂದ ೧೯೩೫ ಎಂದು ಹೇಳುತ್ತಾರೆ.

ಇವನ ಕಾಲದ ಬಗ್ಗೆ ಖಚಿತತೆಯಿಲ್ಲವಾದರೂ ಬಂಡೇಗುರುವಿನ ಸಮವಯಸ್ಕನಾಗಿರಬೇಕೆಂದು ನಿಶ್ಚಿತವಾಗಿ ಹೇಳಬಹುದು. ಡಾ.ಬಸವರಾಜ ಸಬರದರವರು ಸೂಚಿಸಿದ ಕಾಲವನ್ನು ಇಟ್ಟುಕೊಳ್ಳುವುದು ಸೂಕ್ತವೆನಿಸುತ್ತದೆ.

ವೆಂಕಟಾಪುರ ಗ್ರಾಮದ ಪಾಂಚಾಳರ ಕುಲದಲ್ಲಿ ಹುಟ್ಟಿದ ಖೇಮಣ್ಣನು ಸಂಸಾರಿಯಾಗಿದ್ದು ಸಂಗಮ್ಮನೆಂಬ ಹೆಂಡತಿ, ಮೌನೇಶನೆಂಬ ಮಗನೂ ಇವರಿಗಿದ್ದರೆಂದು ತಿಳಿದುಬರುತ್ತದೆ. ತಂದೆ ತಾಯಿಯ ವಿವರ ದೊರಕುವುದಿಲ್ಲ. ಫೂಲಚಂತಿ ಗ್ರಾಮವನ್ನು ಖೇಮಣ್ಣನವರು ತಮ್ಮ ನೆಲೆಯನ್ನಾಗಿ ಮಾಡಿಕೊಂಡಿದ್ದರೆಂಬ ವಿವರಗಳು ಲಭಿಸುವುದರಿಂದ ಫೂಲಚಂತಿಯು ಆಂಧ್ರಕ್ಕೆ ಸೇರಿದ ಗ್ರಾಮವಾದ್ದರಿಂದ ಈ ಸಂಸಾರವು ಇಲ್ಲಿಗೆ ವಲಸೆ ಬಂದಿರಬೇಕೆಂದು ಊಹಿಸಬಹುದು.

ದತ್ತಪೀಠ ಮೂಲ ನೆಲೆ, ಕಲ್ಲೂರಿನ ಅಡಿವೇಂದ್ರಸ್ವಾಮಿ ಮಠವೆಂದು ತಿಳಿದುಬರುತ್ತದೆ. ಕ್ರಿ.ಶ.೧೮೩೭ರಲ್ಲಿ ಶ್ರೀಶಾಂತ ಶಿವಯೋಗಿಗಳು ಮೂಲ ಗುರುಗಳೆಂಬ ಪ್ರಸ್ತಾಪ ದೊರಕುವುದು. ನನಗೆ ಲಭಿಸಿದ ಗುರುಪರಂಪರೆಯ ವಿಸ್ತಾರ ಹೀಗಿದೆ.

“೧. ಶ್ರೀ ಶ್ರೀ ಶಾಂತ ಶಿವಯೋಗಿ - ಕ್ರಿ.ಶ.೧೪೩೭

೨. ಶ್ರೀ ಶ್ರೀ ಕೃಷ್ಣಾವಧೂತರು - ಕ್ರಿ.ಶ.೧೩೮೭

೩. ಶ್ರೀ ಶ್ರೀ ರಾಮಾವಧೂತರು - ಕ್ರಿ.ಶ.೧೫೫೪

೪. ಶ್ರೀ ಶ್ರೀ ಪರಮಹಂಸ ಸ್ವಾಮಿಗಳು - ಕ್ರಿ.ಶ.೧೬೦೦

೫. ಶ್ರೀ ಶ್ರೀ ಲಿಂಗಾವಧೂತರು - ಕ್ರಿ.ಶ.೧೬೩೭

೬. ಶ್ರೀ ಶ್ರೀ ಯೋಗಾನಂದ ಸ್ವಾಮಿಗಳು - ಕ್ರಿ.ಶ.೧೬೫೭

೭. ಶ್ರೀ ಶ್ರೀ ತಿಮ್ಮಗುರುವು - ಕ್ರಿ.ಶ.೧೭೩೪

೮. ಶ್ರೀ ಶ್ರೀ ಬಡೇಸಾಬ ಗುರು - ಕ್ರಿ.ಶ.೧೭೮೯

೯. ಶ್ರೀ ಶ್ರೀ ಪ್ಯಾಟಿ ರಾಮಾಗುರು - ಕ್ರಿ.ಶ.೧೮೪೮

೧೦. ಶ್ರೀ ಶ್ರೀ ವೆಂಕಟಗುರು - ಕ್ರಿ.ಶ.೧೮೬೮

೧೧. ಶ್ರೀ ಶ್ರೀ ಮುದ್ದುರಂಗಾರಾವ್ - ಕ್ರಿ.ಶ.೧೮೮೫

೧೨. ಶ್ರೀ ಶ್ರೀ ಬಂಡೇಗುರುವು - ಕ್ರಿ.ಶ.೧೯೦೬

೧೩. ಶ್ರೀ ಶ್ರೀ ಶಿವಯೋಗಿ ಅಡವೀಶ್ವರ - ಕ್ರಿ.ಶ.೧೯೩೫

೧೪. ಶ್ರೀ ಶ್ರೀ ಶ್ರೀವಿಜಯಶಂಕರ ತಾತನವರು”[೯]

ಈ ಪೀಠದ ಸದ್ಗುರುಗಳು

ಈ ಪೀಠದಲ್ಲಿ ಶೈವ ಸಂಪ್ರದಾಯ, ವೈಷ್ಣವ ಸಂಪ್ರದಾಯಗಳು ಕಾಣುವುವು. ಮೇಲೆ ವಿವರಿಸಿದ ಗುರು ಸಂಬಂಧಗಳು ಆಯಾ ಗುರುಗಳ ವ್ಯಕ್ತಿತ್ವದ ಮೇಲೆ ಬೆಳಕು ಚೆಲ್ಲುವುದನ್ನು ಸ್ಮರಿಸಬಹುದು. ಖೇಮಣ್ಣನವರ ಶಿಷ್ಯ ಗಬ್ಬೂರು ಮಾರ್ತಾಂಡಪ್ಪ, ಇವರಿಗೆ ಪೂಲಚಂತಿ ಗುರುಪೀಠವಾದರೆ, ಹೆಮ್ಮಡಿಗಿ, ಕಲ್ಲೂರು ಅಡಿವೇಂದ್ರ ಮಠಗಳು ಮುಂದಿನ ಶಿಷ್ಯ ಪರಂಪರೆಯ ಬೆಳವಣಿಗೆಯಿಂದ ಕಾಣಬಹುದು. ಖೇಮಣ್ಣನವರ ನಂತರ ಗಬ್ಬೂರು ಮಾರ್ತಾಂಡಪ್ಪ ಗುರುಸ್ಥಾನವನ್ನಲಂಕರಿಸಿದನೆಂದು ಕ್ಷೇತ್ರ ಕಾರ್ಯದಿಂದ ತಿಳಿದುಬಂದಿದೆ. ಹಾಳು ವೆಂಕಟಾಪುರದಲ್ಲಿ ನೆಲಸಿದ ಖೇಮಣ್ಣನು, ತೆಲುಗು, ಕನ್ನಡ ಬಲ್ಲ ತತ್ವಪದಕಾರನಾಗಿರಬೇಕೆಂದು ನನಗನ್ನಿಸುತ್ತದೆ. ಗೋನ್ವಾರ, ಯಾಪಲಿದಿನ್ನಿ, ಬಿಜನಗೇರಿ, ಮಲಯಾಬಾದ್, ತಿಮ್ಮಾಪೂರು, ಗಬ್ಬೂರು ಈ ಗ್ರಾಮಗಳಲ್ಲೆಲ್ಲಾ ಖೇಮಣ್ಣನ ಶಿಷ್ಯರನ್ನು ಕಾಣಬಹುದು. ಕ್ರಿ.ಶ.೧೯೨೫ರಲ್ಲಿ ವೆಂಕಟಾಪುರದಲ್ಲಿ ಕೊನೆಯಾದರೆಂದು ತಿಳಿದುಬರುತ್ತದೆ. ನನಗೆ ಕನ್ನಡ ತತ್ವಪದಗಳು ಮಾತ್ರ ದೊರೆತಿವೆ. ಆದರೆ ತೆಲುಗು ತತ್ವಪದಗಳು ದೊರೆತಿಲ್ಲ. ತೆಲುಗು ಭಾಷೆ ಮಾತನಾಡುವ ಈ ಗ್ರಾಮಗಳಲ್ಲಿ ಮೌಖಿಕ ತೆಲುಗು ಹಾಡುಗಳು ದೊರಕಬಹುದು.

‘ವಾದಿಸಬ್ಯಾಡಯ್ಯ ಸಾಧು ಜನರ ಕೂಡ| ವಾದಿಸಿದರೆ ಮುಂದೆ ಹಾದಿಲ್ಲ ನೋಡಾ|’ ಖೇಮಣ್ಣನ ಗುರುಸ್ತುತಿಯ ಮೂಲಕ ಬೆಡಗಿನಿಂದ ಎಚ್ಚರಿಸುವ ನೀತಿ ಹಾಡುಗಳು, ಯೋಗದ ಹಾಡುಗಳು ಹೆಚ್ಚಾಗಿ

ಕಂಡುಬರುತ್ತವೆ. ತೆಲುಗು ಮಿಶ್ರಿತ ಕನ್ನಡ ಶಬ್ದಗಳು ಸಾಕಷ್ಟು ದೊರಕುತ್ತವೆ. ಈ ಹಾಡು ಯೋಗ ಪ್ರತಿಪಾದನಾ ಸ್ಥಲದಲ್ಲಿದೆ. 'ಬಂಡೇಶ' ಎಂಬ ಅಂಕಿತದಲ್ಲಿ ಇವರ ಹಾಡುಗಳು ಕಂಡುಬರುತ್ತವೆ. 'ವಿದೇಹ ಕೈವಲ್ಯ ಸಾರಾಮೃತ' ಎನ್ನುವುದು ಖೇಮಣ್ಣನ ಹಾಡಿನ ಪುಸ್ತಕದ ಸಂಗ್ರಹವಾಗಿದೆ. ಗಂಗಶ್ರೀ ಪಬ್ಲಿಕೇಶನ್ ಮಾನವಿ ಇವರಿಂದ ಪ್ರಕಟವಾಗಿದೆ. ಇದರಲ್ಲಿ ಇನ್ನೂರ ಇಪ್ಪತ್ತ್ಮೂರು ಹಾಡುಗಳನ್ನು ನೋಡಬಹುದು. ಕ್ರಿ.ಶ.೧೯೫೭ರಲ್ಲಿ ಬಂಡೇಗುರುಗಳ ಮೊಮ್ಮಕ್ಕಳಾದ ಬಂಡೆಪ್ಪನವರು ಶಾಂತಮೂರ್ತಿಗಳು ಈ ಕೃತಿಯನ್ನು ಪ್ರಕಟಿಸಿದ್ದಾರೆ. ರಾಯಚೂರಿನ ಭಾಗಿಮಠದ ಶ್ರೀ ಚೆನ್ನಬಸವ ಶಾಸ್ತ್ರಿಗಳು ಮುನ್ನುಡಿ ಬರೆದಿದ್ದಾರೆ.

## ೯. ದೇವದುರ್ಗದ ಚೆನ್ನಮಲ್ಲ (ಕ್ರಿ.ಶ.೧೮೫೦-೧೯೨೦)

ದೇವದುರ್ಗದ ಚೆನ್ನಮಲ್ಲರು ಕ್ರಿ.ಶ.೧೮೫೦ರಲ್ಲಿ ಜನಿಸಿ, ೧೯೨೦ರಲ್ಲಿ ನಿಧನನಾದನೆಂದು ತಿಳಿದು ಬರುತ್ತದೆ. ಚೆನ್ನಮಲ್ಲರಿಗೆ ಒಬ್ಬಮಗ ಒಬ್ಬ ಮಗಳು ಇದ್ದು, ತಂದೆ ತಾಯಿಯರ ವಿವರ ಲಭ್ಯವಾಗಿಲ್ಲ. ಇವರು ಸುರುಪುರ ತಾಲೂಕಿನ ಸತ್ಯಂಪೇಟೆಗೆ ಶಾಲಾಶಿಕ್ಷಕರಾಗಿ ಹೋದರು. ಮುಂದೆ ಹುಗ್ಗಿ ಲಿಂಗಪ್ಪ, ಮರಿಗಯ್ಯ ಸ್ವಾಮಿಗಳ ಒಡನಾಟದಿಂದ ಚೆನ್ನಮಲ್ಲನು ವೀರಶೈವನೇ ಇರಬೇಕೆಂದು ಗುರುತಿಸಬಹುದು.

'ಸುರದುರ್ಗನಾಥ' ಅಂಕಿತದಲ್ಲಿ ಅನೇಕ ತತ್ವಪದಗಳನ್ನು ರಚಿಸಿದ್ದಾನೆ. 'ಕರುಣೇಶ ಪುರಾಣ, ಭಿಕ್ಷಾವೃತ್ತಿ, ಶಿವ ಪುರಾಣ ರಚಿಸಿದ್ದು ತಿಳಿದುಬರುತ್ತದೆ. ಇವರ ಉನ್ನತ ವ್ಯಕ್ತಿತ್ವಕ್ಕೆ ಒಂದು ಘಟನೆ ಹೀಗಿದೆ. "ಸೊಲ್ಲಾಪುರದಲ್ಲಿ ಸಿದ್ದರಾಮೇಶ್ವರ ಪುರಾಣವನ್ನು ಇವರು ಹೇಳುತ್ತಿದ್ದರು. ಪುರಾಣ ಹೇಳುವಾಗ, ದಿನಾಲೂ ಗುಬ್ಬಿಯೊಂದು ಬಂದು, ನಾಗೋಸಿಯ ಮೇಲೆ ಕುಳಿತಿರುತ್ತಿತ್ತಂತೆ. ಪುರಾಣದ ಮುಕ್ತಾಯದ ದಿನ ಅದು ಕೆಳಗೆ ಬಿದ್ದು ಸತ್ತು ಹೋಯಿತು. ಗುಬ್ಬಿಯ ಸಮಾಧಿ ಅಲ್ಲಿಯೇ ಮಾಡಿದರಂತೆ."[೨೦]

ಚೆನ್ನಮಲ್ಲ ಕವಿ ದೇವದುರ್ಗದಲ್ಲಿ ಸ್ವಲ್ಪದಿನ ಮಾತ್ರವಿದ್ದರೆಂದು ಇವರ ಜೀವನದ ಘಟನೆಗಳಿಂದ ತಿಳಿದುಬರುತ್ತದೆ. ಏಕೆಂದರೆ ಕವಿಯ ಒಡನಾಟವೆಲ್ಲಾ ಸತ್ಯಂಪೇಟೆಯಲ್ಲಿಯೇ ಇರುವುದರಿಂದ ಇಲ್ಲಿಯೇ ಇವರ ಹಾಡುಗಳು ದೊರಕಬಹುದು. ನಾನು ದೇವದುರ್ಗದ ಕ್ಷೇತ್ರಕಾರ್ಯಕ್ಕೆ ಹೋದಾಗ ಚೆನ್ನಮಲ್ಲರ ವಿವರಗಳು ದೊರಕಲಿಲ್ಲ. ಇವರ ಸಾಹಿತ್ಯವನ್ನು ಕೇಳಿದಾಗ, ಒಂದು ಹಳೆಮನೆಯ ತೊಟ್ಟಿಯಲ್ಲಿದ್ದವು. ಅವು ಮಳೆಗೆ ಕೆಟ್ಟು ಹೋದವೆಂದು ಕೆಲವರು ಹೇಳಿದರು. ನನಗೆ ಐದು ಹಾಡುಗಳು ಮಾತ್ರ ದೊರಕಿವೆ. ಅವು ಮೌಖಿಕವಾಗಿಯೇ ಉಳಿದಿವೆ.

"ಶ್ರೀ ಗುರು ಶಂಕರ ಬಸವೇಶ್ವರ| ಶ್ರೀಕಂಠನೇ ಶಿವಲೀಲಾ|
ಈ ಗಡಿ ಸಂಕಟ ಪಡುವವರು ಬಡವರ ಪಾಲಿಸು|
ಶಿವ ಶುಭಾಕರ|"[೨೧]

ಇವರ ಹಾಡುಗಳು ಶಿವನನ್ನು ಕುರಿತು ಹಾಡಿದ ಹಾಡುಗಳಾಗಿವೆ. ಸರಳತೆಯಿಂದ ಜಾನಪದ ಬೆಡಗಿನಿಂದ ಕೂಡಿದ್ದು ವಿಶೇಷದ ಸಂಗತಿ.

## ೧೦. ಅಯ್ಯಪ್ಪ ಪಂಥೋಜಿ (ಕ್ರಿ.ಶ.೧೮೫೨-೧೯೨೩)

ಅಯ್ಯಪ್ಪ ಪಂಥೋಜಿಯು ಗೊಬ್ಬೂರು ಹಂಪಣ್ಣನ ಶಿಷ್ಯನೆಂಬ ವಿವರಗಳು ಲಭಿಸುವುದರಿಂದ ಹಿರಿಯನಾದ ಗೊಬ್ಬೂರು ಹಂಪನ್ನನು ಕ್ರಿ.ಶ.೧೮೫೦ರಲ್ಲಿ ಜೀವಿಸಿದ್ದನ್ನು ನಿಶ್ಚಯಿಸಿ, ಅಯ್ಯಪ್ಪ ಪಂಥೋಜಿಯ ಕಾಲವನ್ನು ಕ್ರಿ.ಶ.೧೮೫೨-೧೯೨೩ ಎಂದು ಇಟ್ಟುಕೊಳ್ಳುವುದು ಸಮಂಜಸವೆನಿಸುವುದು. ರಾಯಚೂರು ನಗರದ ಈಶಾನ್ಯ ದಿಕ್ಕಿಗೆ ೨೦ ಕಿ.ಮೀ. ದೂರದ ಹೊಸಪೇಟೆ ಗ್ರಾಮದಲ್ಲಿ ಕ್ರಿ.ಶ. ೧೮೫೨ರಲ್ಲಿ ಅಯ್ಯಪ್ಪ ಪಂಥೋಜಿಯು ಜನಿಸಿರಬೇಕೆಂದು ಶ್ರೀ ಶಾಂತರಸರು ಅಭಿಪ್ರಾಯ ಪಡುತ್ತಾರೆ. ತಂದೆ ತಾಯಿಯರ ವಿವರ ದೊರಕದಿದ್ದರೂ ಮಡಿವಾಳರ ಕುಲದಲ್ಲಿ ಜನಿಸಿದನೆಂದು ತಿಳಿದುಬರುತ್ತದೆ. ಅಯ್ಯಪ್ಪ ಪಂಥೋಜಿಯು ಹಳ್ಳಿಯ ಶಾಲಶಿಕ್ಷಕನಾಗಿ ಸೇವೆಸಲ್ಲಿಸಿದನು. ಯೌವ್ವನದಲ್ಲಿ ರಂಗಾಪುರದ ಬಸ್ಸಮ್ಮನನ್ನು ವಿವಾಹವಾದನು. ಮುಂದೆ ಸರಕಾರಿ ಶಿಕ್ಷಕನ ಕೆಲಸ ಬಿಟ್ಟು, ಪಾರಮಾರ್ಥಿಕ ಜೀವನ ಸ್ವೀಕರಿಸಿದ ನಂತರ ಕೆಲವು ಘಟನೆಗಳು ನಡೆದವು. ಅಯ್ಯಪ್ಪ ಪಂಥೋಜಿಯು ಊರಿನಲ್ಲಿ ನಡೆಯುವ ಧಾರ್ಮಿಕ ಗೋಷ್ಠಿಗಳಿಗೆ ಹೋಗುತ್ತಿದ್ದು ಬಯಲಾಟವನ್ನು ಆಡಿಸುತ್ತಿದ್ದರು. ನಾಯಕನ ಪಾತ್ರವನ್ನು ಮಾಡುತ್ತಿದ್ದರು. ಲಾವಣಿ ಪದಗಳನ್ನು ಹಾಡುತ್ತಿದ್ದರು. ತಾಳವಾದ್ಯಗಳ ಜೊತೆಗೆ ತತ್ವಪದಗಳನ್ನೂ ಹಾಡುತ್ತಿದ್ದರೆಂಬುದು ಅಷ್ಟೇ ಮುಖ್ಯವಾದದ್ದು.

ಶಿಕ್ಷಕ ಸೇವೆಯಿಂದ ನಿವೃತ್ತಿಹೊಂದಿ ಜೀವನದಲ್ಲಿ ವೈರಾಗ್ಯ ಹೊಂದಿದ. ಹೊಸಪೇಟೆ ಗ್ರಾಮ ಬಿಟ್ಟು ಹೆಂಬೆರಾಳ ಹತ್ತಿರವಿರುವ ಸುಟ್ಟಮಾಗಿ ಹಳ್ಳಿಯ ಆಶ್ರಮಕ್ಕೆ ಮರಳಿದನು. ಗುರು ಗೊಬ್ಬೂರು ಹಂಪಣ್ಣನ ಅಪ್ಪಣೆಯಂತೆ ಮತ್ತೆ ಸಾಂಸಾರಿಕ ಜೀವನಕ್ಕೆ ಮರಳಿದನು. ರಾಯಚೂರಿನ ಪತ್ತೇಪೂರು ನರಸಪ್ಪನ ಅಂಗಡಿಯಲ್ಲಿ ಲೆಕ್ಕ ಬರೆಯುವ ಗುಮಾಸ್ತನಾಗಿ ಕೆಲಸ ಮಾಡಿದ್ದಾನೆ. ಆಶ್ರಮ ಬಿಟ್ಟನಂತರ ಒಂದು ಗಂಡು ಇಬ್ಬರು ಹೆಣ್ಣು ಮಕ್ಕಳಿದ್ದರೆಂದು ತಿಳಿದುಬರುತ್ತದೆ.

'ಪಂಪಾಪತಿ' ಎಂಬ ಅಂಕಿತದಿಂದ ಇವರ ಹಾಡುಗಳು ದೊರಕುತ್ತವೆ. ಮೌಖಿಕ ಹಾಡುಗಳು ಇವಾದ್ದರಿಂದ ಎಲ್ಲೂ ಪ್ರಕಟವಾಗಿಲ್ಲ. ಸಂಶೋಧನೆ ಮಾಡಿದರೆ ಇನ್ನೂ ಅನೇಕ ಹಾಡುಗಳು ಲಭ್ಯ ವಾಗುವವು. ನನಗೆ ಆರು ಹಾಡುಗಳು ದೊರೆತಿವೆ.

ಗೊಬ್ಬೂರು ಹಂಪಣ್ಣನು ಗುರುವಾದರೆ, ತಿಮ್ಮಾಪುರದ ಜಂಬಣ್ಣ, ಅಗಸರ ಭೀಮರಾಯ, ಹೆಂಬೆರಾಳ ಚೆನ್ನಬಸ್ಸಪ್ಪ ಇವರೆಲ್ಲಾ ಪಂಥೋಜಿಯ ಶಿಷ್ಯರೆಂದು ತಿಳಿದುಬರುತ್ತದೆ. ಪಂಥೋಜಿಯ ಶಿಷ್ಯರು ಹಾಡುಗಳನ್ನು ಬರೆದಂತೆ ಕಂಡುಬರುವುದಿಲ್ಲ.

## ೧೧. ದೇವದುರ್ಗದ ಆದಿ ಅಮಾತ್ಯಪ್ಪ (ಕ್ರಿ.ಶ.೧೮೪೫-೧೯೨೭)

ಕ್ರಿ.ಶ.೧೮೬೫ರಲ್ಲಿ ಜನಿಸಿ, ೧೯೩೫ರಲ್ಲಿ ಐಕ್ಯರಾದರೆಂದು ಶ್ರೀಶಾಂತರಸರು ಹೇಳುತ್ತಾರೆ. ಆದರೆ ಆದಿ ಅಮಾತ್ಯಪ್ಪನ ಮಗನಾದ ರಾಜಶೇಖರ ಆದಿ ವಕೀಲರು ನಮ್ಮ ತಂದೆಯವರು ಕ್ರಿ.ಶ.೧೮೪೫ರಲ್ಲಿ ಜನಿಸಿ, ಕ್ರಿ.ಶ.೧೯೨೭ರಲ್ಲಿ ಕೊನೆಯಾದರು. ಆಗ ಅವರಿಗೆ ೮೨ ವರ್ಷ ವಯಸ್ಸಾಗಿತ್ತೆಂದು ತಿಳಿಸಿದರು.

ದೇವದುರ್ಗದ ದೇವಾಂಗ ಜಾತಿಯ ಆದಿ ಮನೆತನದ ಸೂಗಪ್ಪ ಮತ್ತು ಗಂಗಮ್ಮನವರ ಮಗನಾಗಿದ್ದರೆಂದು ತಿಳಿದುಬರುತ್ತದೆ. ವೃತ್ತಿಯಿಂದ ನೇಕಾರರಾದರೂ ತಮ್ಮನ್ನು ಜನಪರ ಕೆಲಸಗಳಲ್ಲಿ ತೊಡಗಿಸಿಕೊಂಡಿದ್ದರು. "ಕ್ರಿ.ಶ.೧೯೧೪ರಲ್ಲಿ ಊರಿಗೆ ಬರ ಬಿದ್ದಾಗ ಇವರು ಗೌರಂಪೇಟೆ ರಸ್ತೆಯ ಹತ್ತಿರ ಬಾವಿಯನ್ನು ತೋಡಿಸಿ, ಹಸಿದ ಜನರಿಗೆ ಕೆಲಸ ಕೊಟ್ಟರು. ಅಮಾತ್ಯಪ್ಪನನ್ನು ಬಡಜನರು ಗೌರವದಿಂದ ಕಾಣುತ್ತಿದ್ದು, ಆಗಿನ ನಿಜಾಂ ಸರಕಾರದ ಲೋಕಲ್ ಫಂಡ್ ಸಮಿತಿಯ ಸದಸ್ಯರೂ ಆಗಿದ್ದರೆಂದು ತಿಳಿದುಬರುತ್ತದೆ."[೨೨] "ಕೇದಾರ ಜಗದ್ಗುರುಗಳು ದೇವದುರ್ಗಕ್ಕೆ ಬಂದಾಗ ಊರಿಗೆ ಅನ್ನ ದಾಸೋಹ ಮಾಡಿದರು. ಬಡ ಜನತೆಗೆ ಆಯುರ್ವೇದ ಚಿಕಿತ್ಸೆ ಕೊಡುತ್ತಿದ್ದರು. ಉರ್ದು ಮತ್ತು ಕನ್ನಡದಲ್ಲಿ ಪಾಂಡಿತ್ಯ ಪಡೆದ ಮೇಧಾವಿಗಳೆಂದೂ ಸ್ಪಷ್ಟವಾಗುತ್ತದೆ."[೨೩]

ನನ್ನ ಕ್ಷೇತ್ರಕಾರ್ಯದಿಂದ ತಿಳಿದುಬರುವ ಮಾಹಿತಿ ಎಂದರೆ ಅಮಾತ್ಯಪ್ಪನವರು ಬೆಳಗಿನ ಜಾವ ೪ ಗಂಟೆಯ ಸಮಯದಲ್ಲಿ ಮಹಡಿಯ ಛಾವಡಿಯ ಮೇಲೆ ಕುಳಿತು ಏಕಾಗ್ರಚಿತ್ತರಾಗಿ ಓದುತ್ತಿದ್ದರೆಂದೂ, ಬರೆಯುತ್ತಿದ್ದರೆಂದೂ ಶ್ರೀ ರಾಜಶೇಖರ ಆದಿಯವರೇ ಹೇಳುತ್ತಾರೆ. ಶಿಥಿಲಾವಸ್ಥೆಯ ಆ ಮನೆಯಲ್ಲಿ ಅಮಾತ್ಯಪ್ಪನವರ ಫೋಟೋವನ್ನು ಈಗಲೂ ನೋಡಬಹುದು. ವಚನಕಾರರ ಪ್ರಭಾವದಿಂದ, 'ಸದಾನಂದ' ಎಂಬ ಅಂಕಿತದಲ್ಲಿ ವಚನಗಳನ್ನು ಬರೆದದ್ದು ತಿಳಿದು ಬರುತ್ತದೆ. ಡಾ. ಬಸವರಾಜ ಸಬರದರವರು ಸದಾನಂದಪ್ಪನ ವಚನಗಳು, ಕ್ರಿ.ಶ.೧೯೨೩ರಲ್ಲಿ ಬಳ್ಳಾರಿಯ ಕರ್ನಾಟಕ ಬುಕ್ ಡಿಪೋದಿಂದ ಮುದ್ರಣ ಕಂಡಿದೆ ಎಂದು ಹೇಳುವರು.

ತತ್ವಪದಗಳ ಸಂಗ್ರಹವಾದ 'ಕೈವಲ್ಯ ನವನೀತದಲ್ಲಿ' ಭಕ್ತಿ, ಜ್ಞಾನ, ಗುರು-ಶಿಷ್ಯರ ಸಂವಾದದ ಹಾಡುಗಳನ್ನು ಕಾಣಬಹುದು. ಇದರಲ್ಲಿ ಶರಣರ ವಚನಗಳು, ಸಂಸ್ಕೃತ ಶ್ಲೋಕಗಳು, ಅನುಭಾವಿಗಳ ಹಾಡುಗಳು, ನಿಜಗುಣರ ತ್ರಿವಿಧಿಗಳು, ಸರ್ವಜ್ಞನ ವಚನಗಳನ್ನು ತತ್ವಸಮರ್ಥನೆಗೆ ಬಳಸಿಕೊಂಡ ವಿವರಗಳು ದೊರಕುವವು. ಕೈವಲ್ಯ ನವನೀತಿ ಕೃತಿಯಲ್ಲಿ "ಮಾಯಿನ್ನ ಬಿಡಬ್ಯಾಡೋ ಮಾಯಿ ನಿನಗೆ ಜೋಡು" ಎಂದು ಸತಿಯನ್ನು ಮಾಯಿಗೆ ಹೋಲಿಸಿದ ಪದ್ಯ ವಿಶೇಷತೆಯನ್ನೂ ಮೂಢ ನಂಬಿಕೆಗಳನ್ನು, ಮೌಢ್ಯ ಆಚರಣೆಗಳನ್ನು ಧೈರ್ಯವಾಗಿ ತೆಗಳಿದ್ದನ್ನು ನೋಡಬಹುದು. 'ದೇಹ ದುರ್ಗಾದೀಶ' ಎಂಬ ಅಂಕಿತದಿಂದ ನಲವತ್ತನಾಲ್ಕು ಹಾಡುಗಳನ್ನು ಬರೆದಿದ್ದಾರೆ. ಅಮಾತ್ಯಪ್ಪನವರ 'ಕೈವಲ್ಯ ನವನೀತ'

ಹಾಡಿನ ಕೃತಿ ೮-೮-೧೯೯೯ರಲ್ಲಿ ರಚನೆಯಾಗಿದೆ ಎಂದು ಲೇಖಕರೆ ಹೇಳುವರು. ಪ್ರಕಾಶಕರಾದ ಪಿ.ಸಿ.ಶಾಬಾದಿಮಠ, ಗದಗ ಇವರಿಂದ ಮರುಮುದ್ರಣ ಕಂಡಿದೆ.

### ೧೨. ತಾಳಪಲ್ಲಿ ವೆಂಕಯ್ಯ (ಕ್ರಿ.ಶ.೧೮೫೮-೧೯೨೫)

ಮಾನ್ವಿ ತಾಲೂಕಿನ ಹೊಕ್ರಾಣಿ ಗ್ರಾಮದಲ್ಲಿ ಕ್ರಿ.ಶ.೧೮೫೮ರಲ್ಲಿ ತಾಳಪಲ್ಲಿ ವೆಂಕಯ್ಯನವರು ಜನಿಸಿದರೆಂದು ತಿಳಿದುಬರುತ್ತದೆ. ವೆಂಕಯ್ಯನ ವಂಶಸ್ಥರು ಆಂಧ್ರದಿಂದ ಹೊಕ್ರಾಣಿ ಗ್ರಾಮಕ್ಕೆ ಹತ್ತಿಯ ವ್ಯಾಪಾರ ಮಾಡಲು ಬಂದರೆಂದು, ಮುಂದೆ ರಾಯಚೂರು ತಾಲೂಕಿನ ದಿನ್ನಿಯಲ್ಲಿ ಕ್ರಿ.ಶ.೧೯೨೫ರಲ್ಲಿ ನಿಧನರಾದರೆಂದು ಸ್ಪಷ್ಟವಾಗಿದೆ. ವಾಣಿಜ್ಯಕ್ಷೇತ್ರದಲ್ಲಿ ಉತ್ತಮ ವ್ಯವಹಾರಸ್ಥನಾದ ವೆಂಕಯ್ಯ ಕವಿಯು, ಹೆಂಡತಿ ಕೃಷ್ಣಮ್ಮನ ಸಾವಿನ ನಂತರ ಆಧ್ಯಾತ್ಮಿಕ ಜೀವನ ಸ್ವೀಕರಿಸಿ ಅನೇಕ ಕೃತಿ ರಚಿಸಿದ್ದಾರೆ. ಜಾತಿಯಿಂದ ವೈಶ್ಯರಾದರೂ ಹರಿ ಮತ್ತು ಹರರ ಸಮನ್ವಯತೆಯಿಂದ ಉತ್ತಮ ಬದುಕು ಸಾಗಿಸಿ, ವೀರಶೈವ ದೀಕ್ಷೆ ಪಡೆದರು.

ನಗರೇಶ, ಬೋಳ ಬಸವ, ವೆಂಕಟರಮಣ ಎಂಬ ಅಂಕಿತದಲ್ಲಿ ತತ್ವಪದಗಳನ್ನು ರಚಿಸಿದ್ದು ತಿಳಿದುಬರುತ್ತದೆ. ಕೆಲವು ಪುರಾಣಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಮುಖ್ಯವಾದವುಗಳು ಗುಡುಗುಂಟಿ ಅಮರೇಶ್ವರನ ಪುರಾಣ, ಶಿವಭಕ್ತಸಾರ. ಈ ಕೃತಿಗಳು ಭಾಮಿನಿ ಷಟ್ಪದಿಯಲ್ಲಿವೆ. ಕೆಲವು ಬಯಲಾಟಗಳನ್ನು ರಚಿಸಿದ ಆಧಾರಗಳು ದೊರಕುತ್ತವೆ. ಪ್ರವಚನಕಾರನಾಗಿ, 'ವೈಶ್ಯಕುಲ ಭೂಷಣನೆಂಬ' ಬಿರುದು ಪಡೆದದ್ದನ್ನು ಗುರುತಿಸಬಹುದು. "ಸದಾ ಪೊರಿ ಶ್ರೀಹರಿ ಮುರಾರಿ | ಗರುಡ ನಮನ ನಿಜಶರಣ | ಪಾಲ | ಕರುಣದ ಕಂದನಾಗಿ" ಎಂದು ಸ್ತುತಿಸಿದ ವಿವರಗಳು ದೊರಕುತ್ತವೆ.

### ೧೩. ಬಳಗಾನೂರು ಮರಿಸ್ವಾಮಿ(ಕ್ರಿ.ಶ.೧೮೬೦ - ೧೯೩೦)

ಮರಿಸ್ವಾಮಿಗಳು ಕ್ರಿ.ಶ.೧೮೬೦ರಲ್ಲಿ ಮಾನ್ವಿ ತಾಲೂಕಿನ ಹಾಲಾಪುರದಲ್ಲಿ ಜನಿಸಿ, ಕ್ರಿ.ಶ.೧೯೩೦ರಲ್ಲಿ ಹೊಸಕೋಟೆಯಲ್ಲಿ ಐಕ್ಯರಾದರೆಂದು ತಿಳಿದು ಬರುತ್ತದೆ. ಶ್ರೀ ಶರಭಯ್ಯನವರು ಮರಿಸ್ವಾಮಿಗಳು ಕೊನೆಯಾದ ಕಾಲವನ್ನು "ಸೌಮ್ಯನಾಮ ಸಂವತ್ಸರ, ಚೈತ್ರ ಬಹುಳ ಚತುರ್ದಶಿ ಸೋಮವಾರ ೫ ಗಂಟೆಗೆ ಹಳೇಕೋಟೆಗೆ ಬಂದು ಭಕ್ತರ ಸಮೂಹದಲ್ಲಿ 'ದೇವಿಮಹಾತ್ಮೆಯ' ಪಾರಾಯಣದ ಗಂಟನ್ನು ತಲೆಯ ಮೇಲಿಟ್ಟುಕೊಂಡು ಇಚ್ಛಾಮರಣವನ್ನು ಹೊಂದಿದರೆಂದು" ನನ್ನ ಕ್ಷೇತ್ರಕಾರ್ಯದಿಂದ ಕಂಡುಕೊಂಡಿದ್ದೇನೆ. ಹಳೇಕೋಟೆ ಮತ್ತು ಹೊಸಕೋಟೆ ಎನ್ನುವ ವಿಚಾರಗಳೂ ಮೌಖಿಕವಾಗಿಯೇ ಉಳಿದಿರುವುದರಿಂದ ಗಟ್ಟಿ ನಿರ್ಧಾರದಿಂದ, ಎಲ್ಲಿ ಐಕ್ಯರಾದರೆಂದು ಹೇಳಲು ಬರುವುದಿಲ್ಲ.

ದೇವದುರ್ಗದ ಶಿಖರ ಮಠದ ಸಿದ್ಧರಾಮಸ್ವಾಮಿಗಳಲ್ಲಿ ವಿದ್ಯಾಭ್ಯಾಸ ಪೂರೈಯಿಸಿದರೆಂದು ತಿಳಿದುಬರುತ್ತದೆ. ಆಂಧ್ರದ ಆನಂತಪುರ ಜಿಲ್ಲೆಯ ಉರವಕೊಂಡ ತಾಲ್ಲೂಕಿನ ಉರಗಾದ್ರಿ ಶೂನ್ಯ

ಪೀಠದ ಶಾಖಾಮಠಕ್ಕೆ ಮರಿಸ್ವಾಮಿಗಳಾಗಿ ಅಧಿಕಾರ ಸ್ವೀಕರಿಸಿದರೆಂದು ತಿಳಿದುಬರುತ್ತದೆ. ಭಕ್ತರ ಬೇಡಿಕೆಯಂತೆ ಬಳ್ಳಾರಿ ಜಿಲ್ಲೆಯ ಹೊಸಪೇಟೆಯ ಹತ್ತಿರವಿರುವ ಕಡ್ಡಿರಾಂಪುರ ಮೊದಲಾದ ಊರುಗಳಲ್ಲಿ ಉರಗಾದ್ರಿ ಮಠದ ಶಾಖಾಮಠಗಳನ್ನು ಕಾಣಬಹುದು.

ಮರಿಸ್ವಾಮಿಗಳು ಸಿಂಧನೂರು ತಾಲೂಕಿನ ಬಳಗಾನೂರಿನ ಮಠದಲ್ಲಿದ್ದರೂ ಬಳ್ಳಾರಿ ಜಿಲ್ಲೆಯ ಭಕ್ತರ ಪ್ರಭಾವಕ್ಕೆ ಒಳಗಾಗಿದ್ದ ಕೆಲವು ಘಟನೆಗಳು ಜರುಗಿದವು. ‘‘ಸಿಂಧವಾಳದ ಸಿದ್ದಪ್ಪ ಗೌಡನು, ಚಿನ್ನದ ಚಂದ್ರಹಾರವನ್ನು ಕಾಣಿಕೆಯಾಗಿ ಕೊಟ್ಟಿದ್ದನು. ಅದನ್ನು ಮರಿಸ್ವಾಮಿಗಳು ತನ್ನ ಮರಿಶಿಷ್ಯನ ಕೊರಳಿಗೆ ಹಾಕಿದ್ದರು. ಅದು ಬಳ್ಳಾರಿಯಲ್ಲಿ ಕಳುವಾಯಿತು. ಸ್ವಾಮಿಗಳ ಸೇವೆಯಲ್ಲಿದ್ದ ಕಟ್ಟೆಯ್ಯನೆಂಬಾತ, ತಾನೇ ಕಳ್ಳತನ ಮಾಡಿ ದೂರು ಕೊಟ್ಟಿದ್ದನು. ವಿಚಾರಣೆಗಾಗಿ ಸ್ವಾಮಿಗಳನ್ನು ಕರೆಯಸಿದರು. ಈ ಘಟನೆಯಿಂದಲೇ ಬಳ್ಳಾರಿಯ ಕಛೇರಿ ಕಟ್ಟಡ ಹತ್ತುವ ಪ್ರಸಂಗ ಬಂದಿತೆಂದು’’[೨೩] ನೊಂದು ಮರಿಸ್ವಾಮಿಗಳೇ ತಮ್ಮ ಜೀವನ ಚರಿತ್ರೆಯಲ್ಲಿ ಹೇಳುವರು.

ಹೊಸಪೇಟೆ ತಾಲೂಕಿನ ಕಡ್ಡಿರಾಂಪುರದ ಮಠದಲ್ಲಿ ಮರಿಸ್ವಾಮಿಗಳ ಅನೇಕ ಪವಾಡಗಳನ್ನು ಕಾಣಬಹುದು. ಬಳ್ಳಾರಿ ಹತ್ತಿರದ ಎಮ್ಮಿಗನೂರಿನ ಶ್ರೀ ಜಡೆಪ್ಪ ತಾತನ ಸ್ತೋತ್ರ ರಚಿಸಿದ ವಿವರಗಳು ಲಭಿಸಿವೆ. ‘‘ಶ್ರೀ ಗುರುವರ ಜಡಿರಾಯ ಯೋಗಿಸುತೇಜ| ಮೃಡ ರೂಪ ಜಡರಾಯ | ಮೃಡ ಸಮ ಜಡಯೊಡೆಯ|’’[೨೪] ಎಂದು ಹಾಡಿದ್ದು ಸ್ಪಷ್ಟವಾಗಿದೆ.

ಇದೇ ಜಿಲ್ಲೆಯ ನಾಗಲಿಂಗ ಸ್ವಾಮಿಗಳನ್ನು ಶಂಕರೇಂದ್ರರನ್ನು ಕುರಿತು ಹಾಡಿದ ಪದ್ಯಗಳು ದೊರಕುವುದರಿಂದ, ಬಳ್ಳಾರಿಯಲ್ಲಿಯೇ ಇವರು ಹೆಚ್ಚಾಗಿ ನೆಲೆಸಿರಬೇಕೆಂದು ಹೇಳಲಾಗುತ್ತದೆ. ‘‘ಮರಿಸ್ವಾಮಿಗಳು ತಮಗೆ ಅಣ್ಣನಾದ ನಾಗಲಿಂಗ ಸ್ವಾಮಿಯನ್ನು ಗುರುವೆಂದು ಸ್ತುತಿಸಿ ಹಾಡಿದ್ದು ಕಂಡುಬರುತ್ತದೆ. ಮುಂದೆ ತತ್ವಪದಗಳನ್ನು ಬರೆದರಲ್ಲದೇ ಬಯಲಾಟಗಳನ್ನು ಬರೆದಿದ್ದು ತಿಳಿದುಬರುತ್ತದೆ. ಗಿರಿಜಾ ಕಲ್ಯಾಣ, ಶಿವಜಲಂಧರ, ದೇವಿಯ ಕತೆಗಳನ್ನು ರಚಿಸಿದ ಉಲ್ಲೇಖಗಳನ್ನು ನೋಡಬಹುದು’’.[೨೫] ಪ್ರತಿಯೊಬ್ಬ ಸಾಧಕರ ಹಿಂದೆ ಶಕ್ತಿ ದೇವತೆಯ ಒಲವನ್ನು ಗಮನಿಸಿದ್ದೇವೆ. ಮರಿಸ್ವಾಮಿಗಳಿಗೆ ‘ಬೂಚಿ’ ಎಂಬ ಶಕ್ತಿದೇವತೆ, ಒಲಿದ ವಿವರಗಳುಂಟು. ಇವು ಶಾಂಭವಿ ದೇವತೆಯ ಶಕ್ತಿ ವರ್ಣನೆಯ ತತ್ವಪದಗಳಾಗಿವೆ.

‘‘ವನಜಾಸನ ವಿನುತಾಂಘ್ರಿಯೆ | ಘನ ಸಿದ್ಧಾದ್ರಿ ನಿವಾಸಳೆ|’’ ಎಂದು ಹಾಡಿದ್ದನ್ನು ಸ್ಮರಿಸಬಹುದು. ಇವರ ಹಾಡುಗಳಲ್ಲಿ ಬಹುದೇವಾತ ನೀತಿಯನ್ನು ಕಾಣಬಹುದು. ಸತ್ಯನಾರಾಯಣ, ಶ್ರೀರಾಮಚಂದ್ರ, ಆಂಜನೇಯ, ವೇಣುಗೋಪಾಲ, ನಗರೇಶ್ವರಾದಿ ದೇವತೆಗಳು ಮುಖ್ಯರಾಗುತ್ತಾರೆ. ನಗನಾಗ, ಉರಗ ಉರಗಾದ್ರಿ ಮಠ, ಬಂಧುಶಠ, ಅಂಕಿತಗಳಿಂದ ತಮ್ಮ ಅಣ್ಣನಿಗೆ ವಿನಯವನ್ನು ಪ್ರಕಟಿಸುವರು. ಉರಗಾದ್ರಿ ಗವಿಮಠದ ಕರಿಬಸವ ಸ್ವಾಮಿಗಳ ಸ್ತೋತ್ರ ರಚಿಸಿದ್ದು ಗಮನಿಸಬಹುದು.

ಕವಿಯ ವ್ಯಕ್ತಿತ್ವವನ್ನು ಕಂಡುಹಿಡಿಯಲು ಬಾಹ್ಯ ಆಧಾರಗಳು ತುಂಬಾ ಸಹಾಯಕವಾಗುವುದನ್ನು ಮರೆಯಬಾರದು. ಅವು ಪುಣ್ಯಕ್ಷೇತ್ರಗಳ ಐತಿಹ್ಯಗಳಾದರೂ, ಒಂದೊಂದು ಕ್ಷೇತ್ರಗಳ ಹಿಂದೆ ಒಂದೊಂದು ಪವಾಡಗಳನ್ನು ಕಾಣಬಹುದು.

ತುಂಗಭದ್ರಾ ನದೀತೀರದಲ್ಲಿರುವ ಶ್ರೀ ಶ್ರೀ ಸಿದ್ಧಪರ್ವದ ಅಂಬಾಕ್ಷೇತ್ರ, ರಾಯಚೂರಿನ, ಕೃಷ್ಣಾನದಿ ತೀರದ ನಾರದಗಡ್ಡೆಗಳಂತಾ ಮುಖ್ಯವಾದ ಸ್ಥಳಗಳು, ಮರಿಸ್ವಾಮಿಗಳ ವ್ಯಕ್ತಿತ್ವದ ಮೇಲೆ ಬೆಳಕು ಚೆಲ್ಲುವಂಥ ಸ್ಥಳಗಳಾಗಿವೆ. ಆದರೆ ಕವಿ ಒಂದೇ ಕಡೆ ನೆಲೆ ನಿಂತಿಲ್ಲವೆಂದು ಸ್ಪಷ್ಟವಾಗುವುದರಿಂದ ಕೆಲ ಬಿಡಿ ಬಿಡಿ ವಿವರಗಳು ದೊರಕುವುದರಿಂದ ಕವಿಯ ಜೀವನ ಚರಿತ್ರೆ ಕಟ್ಟಿಕೊಡಲು ಕಷ್ಟವಾಗುತ್ತದೆ.

ಮುಂದೆ ತಮ್ಮ ಭಕ್ತರಿಂದಲೇ ವಂಚನೆಯಾದಾಗ ಹೊಸಕೋಟೆಯ ಅಯ್ಯನ ತೋಟದಲ್ಲಿ ಕೊನೆಯಾಗುವರು. ಭಕ್ತರು ಈಗಲೂ ಮರಿಸ್ವಾಮಿಗಳ ಪುಣ್ಯತಿಥಿಯನ್ನು, ಜಾತ್ರೆ ಮಾಡುವುದನ್ನು ಕಾಣಬಹುದು.

### ೧೪. ಗೊಬ್ಬೂರು ಮಾರ್ತಾಂಡಪ್ಪ(ಕ್ರಿ.ಶ.೧೮೮೦-೧೯೬೦)

ಡಾ.ಬಸವರಾಜ ಸಬರದರು ಮಾರ್ತಾಂಡಪ್ಪನ ಕಾಲವನ್ನು ಕ್ರಿ.ಶ.೧೮೮೦ ರಿಂದ ೧೯೬೦ ಎಂದು ಹೇಳುವರು. ಗೊಬ್ಬೂರು ಮಾರ್ತಾಂಡಪ್ಪನು ಖೇಮಣ್ಣನ ಶಿಷ್ಯನೆಂದು ಗುರುತಿಸಿ, ಹಿರಿಯರಾದ ಖೇಮಣ್ಣನ ಜೀವನದ ಜೊತೆಗೆ ಮಾರ್ತಾಂಡಪ್ಪನ ಕಾಲವನ್ನು ಗುರುತಿಸಬಹುದು. ಕಲ್ಲೂರಿನ ಮಠದ ಪರಿಸರದಲ್ಲಿದ್ದನು. ಮಾರ್ತಾಂಡಪ್ಪ ಕಲ್ಲೂರು ಅಡಿವೀಶರ ಕಾಲ ಕ್ರಿ.ಶ.೧೯೨೧ ಜೂನ್ ೯ರಲ್ಲಿ ಜನಿಸಿ ೧೯೯೫ ಫೆಬ್ರುವರಿ ೧೯ ರಂದು ಕೊನೆಯಾದರೆಂಬ ವಿವರಗಳು ಸಿಗುವುದರಿಂದ ಮಾರ್ತಾಂಡಪ್ಪನಿಗಿಂತ ಕಿರಿಯರು ಕಲ್ಲೂರು ಅಡಿವೀಶ ಶರಣರು. ಕಲ್ಲೂರು ಅಡವೀಶರ ಜೊತೆ ಆಧ್ಯಾತ್ಮಿಕ ಚರ್ಚೆಯನ್ನು ನಡೆಸಿದ್ದನ್ನು ಗಮನಿಸಿ ಇವರ ಕಾಲ ಕ್ರಿ.ಶ.೧೮೮೦ ರಿಂದ ೧೯೬೦ ಎಂದು ಡಾ.ಸಬರದರವರು ಸೂಚಿಸಿದ ಕಾಲವನ್ನು ಇಟ್ಟುಕೊಳ್ಳುವುದು ಸಮರ್ಪಕವೆನಿಸುವುದು.

"ದೇವದುರ್ಗ ತಾಲೂಕಿನಲ್ಲಿ ಗೊಬ್ಬೂರು ಗ್ರಾಮದ ಕಬ್ಬೇರಕುಲದ ಲಕ್ಷ್ಮಣ್ಣನ ಮಗನಾಗಿ ಮಾರ್ತಾಂಡಪ್ಪ ಜನಿಸಿದನೆಂದು ತಿಳಿದುಬರುತ್ತದೆ. ಮಾರ್ತಾಂಡಪ್ಪನಿಗೆ ಬಸ್ಸಮ್ಮ, ರಾಚಮ್ಮ, ಅಕ್ಕಮ್ಮ ಎಂಬ ಹೆಸರಿನ ಮೂವರು ಪತ್ನಿಯರಿಗೆ, ಪ್ರಭು, ಬಂಡೆಪ್ಪ, ಹನುಮವ್ವ ಎಂಬ ಮೂವರು ಮಕ್ಕಳಿದ್ದರೆಂಬ ವಿವರಗಳು ದೊರಕುವವು."[೨]

ಅನುಭಾವ ತಾಣಗಳೆಂಬ ಸಮರ್ಥನೆಗಳು ದೊರಕುವುದರಿಂದ ಮಾರ್ತಾಂಡಪ್ಪನು ಗುರುವಿಗೆ 'ಖೇಮಾರ್ಯ'ನೆಂದು ಗೌರವಿಸಿ, ಸಾಕಷ್ಟು ತತ್ವಪದಗಳನ್ನು ಬರೆದನು. ಖೇಮಣ್ಣನ ನಂತರ ಮುಂದಿನ ದತ್ತಪೀಠಕ್ಕೆ ಮಾರ್ತಾಂಡಪ್ಪ ಗುರುವಾದನೆಂದು ತಿಳಿದುಬರುತ್ತದೆ. ಇವರ ನಂತರ ಮುಂದಿನ ಗುರು

ಯಾರಾಗಿರಬಹುದೆಂಬ ಅನುಮಾನಕ್ಕೆ ಹೆಚ್ಚಿನ ಆಧಾರಗಳು ಬೇಕಾಗುವವು. ಆದರೆ ಕ್ಷೇತ್ರಕಾರ್ಯದ ಮಾಹಿತಿಯಂತೆ ಮಾರ್ತಾಂಡಪ್ಪನ ನಂತರ ಕಾಶಿಮುಕ್ಕಣ್ಣ ದತ್ತಪೀಠದ ಗುರುವಾಗಿದ್ದ. ಆತನ ಶಿಷ್ಯ-ಬಸವರಾಜಪ್ಪ ಅಸ್ಕಿಹಾಳ ಆಗಿದ್ದ. "ವೆಂಕಟಾಪುರಕ್ಕೆ ಹೋಗೋಣ ನಡೆಯಮ್ಮಾ ಸಂಕಟ ದೂರ ಮಾಡೋ ಗುರುವು ಹಾನಮ್ಮ" ಎಂಬ ಹಾಡಿದ ಹಾಡಿನ ಸಮರ್ಥನೆಯನ್ನು ನೋಡಬಹುದು. ಇದು ಮೌಖಿಕವಾಗಿ ನನಗೆ ದೊರಕಿದೆ. ಕ್ಷೇತ್ರಕಾರ್ಯ ಸಂದರ್ಭದಲ್ಲಿ ಗೊಬ್ಬರು ಮಾರ್ತಾಂಡಪ್ಪನವರು ಕನ್ನಡ ತೆಲುಗು ತತ್ವಪದಗಳನ್ನು ಬರೆದನೆಂಬ ಮಾಹಿತಿಗಳು ದೊರಕುವವು. ಇದಕ್ಕೆ ಆಧಾರ ನಮ್ಮ ಮನೆಗೆ ಬೆಳಗಿನ ಸಮಯದಲ್ಲಿ ಒಬ್ಬ ದಾಸನು ಮಾರ್ತಾಂಡಪ್ಪನ ತೆಲುಗು ತತ್ವಪದವನ್ನು ಹಾಡಿದ್ದನ್ನು ನಾನು ಕೇಳಿದ್ದೇನೆ. ತೆಲುಗು ಭಾಷಾ ಪರಿಸರದ ಊರುಗಳಲ್ಲಿ ಮಾರ್ತಾಂಡಪ್ಪನ ಪದ್ಯಗಳು ದೊರಕಬಹುದು. ನನಗೆ ಕೆಲವು ಕನ್ನಡ ತತ್ವಪದಗಳು ರಾಂಪೂರು ಭಜನಾ ಮಂಡಲಿಯಲ್ಲಿ ದೊರಕಿವೆ. ಮಾರ್ತಾಂಡಪ್ಪನ ಸುತ್ತಲೂ ಕೆಲವು ಪವಾಡಗಳು ಕಂಡುಬರುತ್ತವೆ. ತಿಮ್ಮಾಪುರ, ವೆಂಕಟಾಪುರ, ಫೂಲಚಿಂತಿ, ಗೊಬ್ಬೂರು, ಗೂಗಲ್ಲುಗಳಲ್ಲಿ ಮಾರ್ತಾಂಡಪ್ಪನ ಶಿಷ್ಯರು ದೊರಕುವರು. ಕ್ರಿ.ಶ.೧೯೬೦ರಲ್ಲಿ ಮಾರ್ತಾಂಡಪ್ಪನು ಕೋರ್ವಿನಹಾಳ ಗ್ರಾಮದಲ್ಲಿ ಕೊನೆ ಉಸಿರೆಳೆದನು.

## ೧೫. ವಡಿಕೆ ತಾತಪ್ಪಯ್ಯ (ಕ್ರಿ.ಶ.೧೮೯೦-೧೯೬೧)

ಡಾ.ಬಸವರಾಜ ಸಬರದರವರು ತಾತಪ್ಪಯ್ಯನ ಕಾಲವನ್ನು ಕ್ರಿ.ಶ.೧೮೯೦ ರಿಂದ ೧೯೫೯ ಎಂದು ಹೇಳುವರು. ತಾತಪ್ಪಯ್ಯನವರ ಕುಟುಂಬದವರು ಹೇಳುವಂತೆ, ಕ್ರಿ.ಶ.೧೮೯೦ರಲ್ಲಿ ಜನಿಸಿ, ೧೯೬೧ ಶ್ರಾವಣಮಾಸ ೫ನೇ ಸೋಮವಾರ ಕೊನೆಯಾದರೆಂಬ ವಿವರ ಕೊಡುವರು. ಗಂಗಾವತಿ ತಾಲೂಕಿನ ಕನಕಗಿರಿಯ ಸಮೀಪದ ಊರು ವಡಿಕಿ ಗ್ರಾಮವೆಂದು ಸ್ಪಷ್ಟವಾಗಿದೆ. ವಿಶ್ವಕರ್ಮ ಕುಟುಂಬದಲ್ಲಿ ಬುಡ್ಡಪ್ಪಯ್ಯ ಗಂಗಮ್ಮ ದಂಪತಿಗಳ, ೫ನೇ ಮಗನಾಗಿ ತಾತಪಯ್ಯ ಜನಿಸಿದರು. ಇವರ ಪೂರ್ವದ ಹೆಸರು ಲಕ್ಷ್ಮಪ್ಪಯ್ಯ ಆಗಿದ್ದು, ಆ ಗ್ರಾಮದ ಮಹಾಲಕ್ಷ್ಮಿ ದೇವಸ್ಥಾನದ ಅರ್ಚಕರಾಗಿದ್ದರು. ಬಡಿಗತನ ಕೆಲಸದೊಂದಿಗೆ ಅಕ್ಕಸಾಲಿಗ, ಅರ್ಚಕ ವೃತ್ತಿಗಳನ್ನು ಮಾಡುತ್ತಿದ್ದರೆಂಬ ಮಾಹಿತಿ ಸಿಗುತ್ತದೆ.

ಲಕ್ಷ್ಮಪ್ಪಯ್ಯನು ಎಂಟು ಒಂಬತ್ತನೇ ವರ್ಷ ವಯಸ್ಸಿನಲ್ಲಿ ಮಹಾಲಕ್ಷ್ಮಿ ದೇವಿಯ ಆರಾಧಕನಾಗಿ, ದಿಗಂಬರನಾಗಿ ವಡಿಕಿ ಗ್ರಾಮದಲ್ಲಿರುವ 'ತಿರುಹಸ ಗುಡ್ಡ, ಡಬ್ಬಗಳ್ಳಿ ಮತ್ತು ಕೇದಿಗಿ ಬನದಲ್ಲಿ ವಾಸಿಸುತ್ತಿದ್ದರು. ಇದಕ್ಕೆ ಆಧಾರ ಹೀಗಿದೆ. ಅಲ್ಲಿಯೇ ೧೨ ವರ್ಷ ತಪಸ್ಸು ಮಾಡಿದ ಸಮರ್ಥನೆಯಿದೆ. ಮುಂದೆ ಮಹಾಲಕ್ಷ್ಮಿ ದೇವಿಯು ಪ್ರತ್ಯಕ್ಷಳಾಗಿ, 'ನೀನು ನುಡಿದದ್ದು ಮಂತ್ರವಾಗಲಿ, ನಡೆದದ್ದು ದಾರಿಯಾಗಲಿ' ಎಂದು ಹರಸಿದ್ದು ಬಹುಗಮನಾರ್ಹವಾದದ್ದು. ಮುಂದೆ ದೇವಿಯ ಅನುಗ್ರಹದಿಂದ ಲಕ್ಷ್ಮಪ್ಪಯ್ಯ ತಾತಪ್ಪಯ್ಯನಾದದು ತಿಳಿದುಬರುತ್ತದೆ.

ಆಧ್ಯಾತ್ಮ ಜೀವನದೊಂದಿಗೆ ಸಂಸಾರಿಯಾದ ಮಾಹಿತಿಗಳು ಹೀಗಿವೆ. ಲಿಂಗಸೂಗೂರು ತಾಲೂಕಿನ ಕವಿತಾಳ ಗ್ರಾಮದ ರಜಪೂತ ಗೌರಮ್ಮನನ್ನು ವಿವಾಹವಾದರು. ಇಬ್ಬರು ಮಕ್ಕಳ ಇವರಿಗೆ ಆದರು. ವಿಧಿಯ ಇಚ್ಛೆಯೆಂತೆ,ಮುಂದೆ ಲಿಂಗಸೂಗೂರು ತಾಲ್ಲೂಕಿನ ಯಲಗಟ್ಟಿ ಗ್ರಾಮದ ಗೌಡರ ಮಗಳು ಅಂಬಮ್ಮನನ್ನು ವಿವಾಹವಾದರು. ಇವರಿಗೆ ಜ್ಯೋತ್ಯಮ್ಮ ಶರಣಬಸ್ಸಮ್ಮ ಪುತ್ರಿಯರು ಇದ್ದರು. ಅಂಬಮ್ಮನ ನಂತರ ರುದ್ರಮ್ಮನನ್ನು ವಿವಾಹವಾಗಿ, ಗುರುತಾಯಮ್ಮ ಹೆಸರಿನ ಮಗಳು ಇವರ ಸೇವೆ ಮಾಡಿದ್ದನ್ನು ಸ್ವತಃ ಮಗಳಾದ ಜ್ಯೋತ್ಯಮ್ಮನೇ ಹೇಳಿದ್ದಾಳೆ.

ಸಾಂಸಾರಿಕ ಜೀವನದೊಂದಿಗೆ ಆಧ್ಯಾತ್ಮಿಕ ಬದುಕನ್ನು ತಮ್ಮದಾಗಿಸಿಕೊಂಡರು. ಗಂಗಾವತಿ ತಾಲ್ಲೂಕಿನ ಗುಂಡೂರು ಗ್ರಾಮದ ಗುರು 'ಭೀಮೇಶ'ರನ್ನು ಗುರುವಾಗಿ ಸ್ವೀಕರಿಸಿ 'ಭೀಮೇಶ' 'ಮೌನೇಶ', ಅಯ್ಯಪ್ಪ, 'ಗಡಿವಡಿಕೇಶ' ಎಂಬ ಅಂಕಿತಗಳನ್ನು ಬಳಸಿ ತತ್ವಪದಗಳನ್ನು ರಚಿಸಿದರು.

> ''ಊರಿಗೆ ಹೋಗೋನ| ನಡೀರೆ ತಂಗಿ| ಕಲ್ಯಾಣಕೆ ಹೋಗೋನ
> ಹಸಗೊಂಡು ಬಂದೀವಮ್ಮಾ| ಶರಣರ ಬಳಿಗ| ಅಡಿಗಿ ಮಾಡಮ್ಮಾ
> ಅಂಬಾ ಮಠದೊಳಗ''[೨೨]

ತಾತಪ್ಪಯ್ಯನ 'ಅಮೃತ ಶಿಖಾಮಣಿ' ಪುಸ್ತಕದಲ್ಲಿ ೧೪೯ ಹಾಡುಗಳಿವೆ. ಕ್ರಿ.ಸ.೧೯೫೭ರಲ್ಲಿ ಸಾಧನಾ ಪ್ರಿಂಟರ್ಸ್ ರಾಯಚೂರು ಇವರಿಂದ ಪ್ರಕಟಗೊಂಡಿದೆ. ಇವರ ಪದ್ಯಗಳಲ್ಲಿ ಸ್ವಾತಂತ್ರ್ಯ ಪೂರ್ವದ ಆಕ್ರೋಶಗಳನ್ನು ರೂಪಕಗಳ ಮೂಲಕ ಕಾಣಬಹುದು.

ಜಾನಪದ ತತ್ವಗಳಿಂದ ಸಮಕಾಲೀನ ಮೌಲ್ಯಗಳನ್ನು ಹೇಳುವ ಪರಿ ತಾತಪ್ಪಯ್ಯನ ಹಾಡುಗಳಲ್ಲಿ ನೋಡಬಹುದು. ಅಂದಿನ ಸರಕಾರವನ್ನು ಖಂಡಿಸಿದ ರೂಪಕ ಉಪಮೆಗಳು ಇವರ ಹಾಡುಗಳಲ್ಲಿವೆ. ವಡಿಕೆ ಗ್ರಾಮದಲ್ಲಿ ಇವರ ಮಠವಿದೆ. ತೊಪ್ಪಲದೊಡ್ಡಿ, ಕವಿತಾಳ, ದಿನ್ನಿ, ಕೊಟ್ನೇಕಲ್, ಕೊರ್ದೊಡ್ಡಿ ಗ್ರಾಮಗಳಲ್ಲಿ ಇವರ ಶಿಷ್ಯರನ್ನು ಕಾಣಬಹುದು. ಲಿಂಗಸೂಗೂರು ತಾಲೂಕಿನ ಯಲಗಟ್ಟಿಯಲ್ಲಿ ಇವರ ಸಮಾಧಿಯನ್ನು ನೋಡಬಹುದು. ಪ್ರತಿ ವರ್ಷ ಶ್ರಾವಣಮಾಸದ, ಕೊನೆಯ ಸೋಮವಾರ, ತಾತಪ್ಪಯ್ಯನ ಜಾತ್ರೆಯಾಗುತ್ತದೆ. ವಡಿಕೆ ತಾತಪ್ಪಯ್ಯನ ಭಕ್ತರನ್ನು ಈ ಜಾತ್ರೆಯಲ್ಲಿ ಕಾಣಬಹುದು.

## ೧೬. ಹನುಮಂತವ್ವ (ಕ್ರಿ.ಶ.೧೯೦೪-೧೯೮೯)

ಹನುಮಂತವ್ವನ ವಂಶಜರು ಕೋಲಾರ ಜಿಲ್ಲೆಯ ತೀರ್ಥಪುರದ ಗ್ರಾಮದವರೆಂದು ತಿಳಿದು ಬರುತ್ತದೆ. ಗೌತಮಗೋತ್ರದ ತಂದೆ ನಂಜುಂಡಯ್ಯ, ತಾಯಿ ಸೀತಮ್ಮರಿಗೆ, ಕ್ರಿ.ಶ.೧೯೦೪ರಲ್ಲಿ ಹನುಮಂತವ್ವ ಜನಿಸಿದಳು. ಹನುಮಂತವ್ವ ೧೬ನೇ ವಯಸ್ಸಿನಲ್ಲಿ ರಾಯಚೂರಿನ ಪಲಗುಲು ನಾಗಯ್ಯನ ಧರ್ಮಪತ್ನಿಯಾಗಿ ವೃತ್ತಿಯಿಂದ ವ್ಯಾಪಾರಿಯಾದ ಪತಿಯ ವ್ಯವಹಾರಕ್ಕೆ ಸಹಕರಿಸುತ್ತಿದ್ದಳು. ರಸ್ತೆಯ

ಅಂಚಿಗೆ ಭಜಿ, ಪುಗ್ಗಿ, ಮಿರ್ಚಿ ಅಂಗಡಿಯಿಂದ ವ್ಯಾಪಾರ ಪ್ರಾರಂಭವಾಯಿತು. ನಾಗಯ್ಯನವರು ಕಿರಾಣಿ ವರ್ತಕರಾದರೂ ದಂಪತಿಗಳ ಪರಿಶ್ರಮದ ಫಲವಾಗಿ ಪಟೇಲ್ ರಸ್ತೆಯಲ್ಲಿ ಅಂಗಡಿ ಖರೀದಿಸಿ ದೊಡ್ಡ ವ್ಯಾಪಾರಿಗಳಾದರು. ಮುಂದೆ ತಮ್ಮ ಪತಿಗೆ ಬೇರೊಂದು ಮದುವೆ ಮಾಡಿ ಆಧ್ಯಾತ್ಮಿಕ ಜೀವನ ಸ್ವೀಕರಿಸಿದರು.

ಶಶಿಮಹಲ್ ಟಾಕೀಸ್ ನ ಜಹೀರಾಬಾದ್ ಹತ್ತಿರ ಭೀಮಾವಧೂತರ ಆಶ್ರಮಕ್ಕೆ ಭಕ್ತಿಪೂರ್ವಕವಾಗಿ ನಡೆದುಕೊಳ್ಳುತ್ತಿದ್ದರೆಂಬ ಪ್ರಸ್ತಾಪ ಅವರ ಈ ಹಾಡಿನಲ್ಲಿ ಕಾಣಬಹುದು.

> "ನಿತ್ಯಾನಂದ ರೂಪಾಯ| ನಿರ್ವಿಕಾರಾಯ ದೇವನೆ
> ಅಚಲ ಪರಿಪೂರ್ಣ ಬ್ರಹ್ಮಾಯ| ಗುರು ನಾಗಾರ್ಯ
> ದೇವ ನಮೋಸ್ತುತೇ"[೨೮]

ಇದು ಮೌಖಿಕವಾಗಿ ನನಗೆ ದೊರಕಿದೆ. ಇವರ ಗುರು ಪರಂಪರೆ ಹೀಗಿದೆ. ನಾಗಾರ್ಯ - ಭೀಮಾವಧೂತ - ವೆಂಕಟೇಶಾವಧೂತ - ಹನುಮಂತವ್ವ - ಈ ಗುರುಗಳ ಪ್ರಸ್ತಾಪಗಳು ಅವರವರ ವ್ಯಕ್ತಿತ್ವಗಳ ಮೇಲೆ ಬೆಳಕು ಬೀರುವುದನ್ನು ಕಾಣಬಹುದು. ಮುಂದೆ ಹನುಮಂತವ್ವ ವೆಂಕಟೇಶಾವಧೂತರನ್ನು ಗುರುವಾಗಿ ಸ್ವೀಕರಿಸಿದಳೆಂದು ತಿಳಿದುಬರುವುದು.

ಇವರು ತಮ್ಮ ಆಶ್ರಮದ ಪರಿಸರದಲ್ಲಿಯೇ ೩೦೦ಕ್ಕೂ ಮಿಗಿಲಾದ ತತ್ವಪದಗಳನ್ನು ೧೫೦ಕ್ಕೂ ಮೀರಿದ ವಚನ, ರೂಪಕಗಳನ್ನು ಬರೆದಂಥ ಸಮರ್ಥನೆಗಳು ದೊರಕುತ್ತವೆ. ಆದರೆ ಅವುಗಳು ಅಪ್ರಕಟಿತ ಹಾಡಿಗಳಾಗಿವೆ.

ಸ್ತ್ರೀ ದೇವತೆಯನ್ನು ಕುರಿತಾಗಿ ಬರೆದ ಹಾಡುಗಳು ಮತ್ತು ತೆಲುಗು ಹಾಡುಗಳು ಗಮನ ಸೆಳೆಯುತ್ತವೆ. 'ಏಮಿ ಚೇತುರಾ| ಏಮಿ ಚೇತುರಾನೀದೀ ಸೇವಾ| ಏಕ ಮನಸುಲು ಚೇತಮೆಂಟೆ| ತೀರ ಲೋಕಮನೆಲ್ಲಾ ತಿರುಗುಚು|' ಮುಂದೆ ಇವರ ವ್ಯಕ್ತಿತ್ವವನ್ನು ಮನಗಂಡು, ಆದವಾನಿಯ ಭಕ್ತಿಯೋರ್ವಳು ಜಹೀರಾಬಾದ್ ಕ್ಷೇತ್ರದ ಭೂಮಿಯನ್ನು ದಾನವಾಗಿ ನೀಡಿದಳೆಂದು ತಿಳಿದುಬರುತ್ತದೆ. ಈ ನೆಲದ ವಿಸ್ತೀರ್ಣ ನಾಲ್ಕು ಎಕರೆ ಮೂವತ್ತು ಗುಂಟೆ ಇರುತ್ತದೆ. ಹನುಮಂತವ್ವ ಕ್ರಿ.ಶ.೧೯೮೮ರಲ್ಲಿ ಐಕ್ಯರಾದರು. ಮಾಘಮಾಸ, ಬಹುಳ ಬಿದಿಗಿ, ಇವರ ಪುಣ್ಯ ತಿಥಿಯಾಗಿದ್ದು, ರಾಯಚೂರು ಆಕಾಶವಾಣಿಯ ಪಶ್ಚಿಮಕ್ಕೆ ಆಶ್ರಮವನ್ನು ಮತ್ತು ಇವರ ಸಮಾಧಿಯನ್ನು ಈಗಲೂ ಕಾಣಬಹುದು.

## ೧೭. ಮಾಣಿಕಪ್ಪ (ಕ್ರಿ.ಶ.೧೯೦೨-೧೯೬೪)

ವೃತ್ತಿಯಲ್ಲಿ ಬಡಿಗನಾದರೂ ಪ್ರವೃತ್ತಿಯಲ್ಲಿ ಆಧ್ಯಾತ್ಮಯೋಗಿ ೨-೯-೧೯೦೨ರಲ್ಲಿ ರಾಯಚೂರಿನಲ್ಲಿ ಜನಿಸಿದರು. ಹೈದ್ರಾಬಾದ್, ಕೇರಳ, ಉಡುಮಲ್ ಪೇಟೆ ಮುಂತಾದ ಪಟ್ಟಣಗಳನ್ನು ಸುತ್ತಿ, ೨೬-

೧-೧೯೬೪ರಲ್ಲಿ ನಿಧನರಾದರೆಂದು ತಿಳಿದುಬರುತ್ತದೆ. 'ಪರಶುರಾಮಾರ್ಯ' ಎಂಬ ಅಂಕಿತವನ್ನಿಟ್ಟುಕೊಂಡು ತತ್ವಪದಗಳನ್ನು ಬರೆದರೆಂದು ತಿಳಿದುಬರುತ್ತದೆ.

ರಾಯಚೂರು ನಗರದ ತಿಮ್ಮಾಪೂರು ಪೇಟೆಯ ಗಂಗಾಮತದ ಜಂಬಯ್ಯ, ಗಂಗಮ್ಮ ದಂಪತಿಗಳಿಗೆ ಮಾಣಿಕಪ್ಪನವರು ಜನಿಸಿದರು. ಬಾಲರಾಮ ಗುಡಿಶಾಲೆಯಲ್ಲಿ ಕನ್ನಡ ಭಾಷೆಯ ಜೊತೆಗೆ ಮಗ್ಗಿ, ಖಾತೆ, ಪಕ್ಕಾ ರೋಜು ಬರೆಯುವುದನ್ನು ತೆಲುಗು ತತ್ವಪದಗಳನ್ನು ಹಾಡುವುದನ್ನು ರೂಢಿಸಿಕೊಂಡರು. ಮುಂದೆ ಕ್ರಿ.ಶ.೧೯೨೦ರ ಸಮಯದಲ್ಲಿ ಹೈದ್ರಾಬಾದ್‌ನಲ್ಲಿ ಕ್ರಿಶ್ಚಿಯನ್ ಶಾಲೆಯಲ್ಲಿ ವಿದ್ಯಾಭ್ಯಾಸ ಮಾಡಿದರು. ಅದೇ ಸಂದರ್ಭದಲ್ಲಿ ಓರ್ವ ಕ್ರೈಸ್ತ ಯುವತಿ ಇವರ ಜೀವನದಲ್ಲಿ ಪ್ರವೇಶದ ಘಟನೆ ಬರುವುದು, ಮನೆಯಲ್ಲಿ ಈ ವಿಷಯ ತಿಳಿದು, ಜಮಲಮ್ಮನ ಜೊತೆ ವಿವಾಹವಾದರೆಂದು ತಿಳಿದುಬರುತ್ತದೆ.

ಸಂಸಾರದ ನಿರ್ವಹಣೆ ತೊಂದರೆಯಾದಾಗ ಕೃಷಿ, ಬಡಿಗತನ, ವೈದ್ಯ ಹಾಗೂ ಜ್ಯೋತಿಷ್ಯ ವೃತ್ತಿಯನ್ನು ತಮ್ಮ ಜೀವನದಲ್ಲಿ ಪರಿಣಾಮಕಾರಿಯಾಗಿ ಬಳಸಿಕೊಂಡರು. ಕ್ರಿ.ಶ.೧೯೨೮ರ ಸಮಯದಲ್ಲಿ ರಾಯಚೂರು ಬಯಲಾಟದಲ್ಲಿ ಆಸಕ್ತಿ ಹೊಂದಿದ ಕ್ಷೇತ್ರವಾಗಿತ್ತೆಂಬ ಮಾಹಿತಿಗಳು ದೊರಕುವವು. ಬಯಲಾಟ ಬರೆದು ಆಡಿಸುವ ತಂಡಗಳು ಅನೇಕವಿದ್ದವೆಂಬುದು ಗಮನಾರ್ಹ. ಅಂಥವರಲ್ಲಿ ಮಾಣಿಕಪ್ಪನು ಬಯಲಾಟದ ವ್ರತಾಚಾರಿ ಆಗಿದ್ದನು.

ಬಯಲಾಟದ ಮಾಸ್ತರಿಕೆ ಪ್ರಯೋಜನವಾಗದಿದ್ದಾಗ; ಆಯುರ್ವೇದ ವೈದ್ಯ ವೃತ್ತಿಯಲ್ಲಿ ಮುಂದುವರಿದರು. ಜೊತೆಗೆ ಮನೆಯಲ್ಲಿ ಪಾನ್‌ಮಸಾಲ, ಜರ್ದಾನಾಸಿ ಮುಂತಾದವುಗಳನ್ನು ತಯಾರಿಸಿ ಮಾರಾಟ ಮಾಡಿದ ವಿವರಗಳು ಲಭಿಸುವವು. ಕರ್ನೂಲ್, ಹೈದ್ರಾಬಾದ್, ಕೇರಳ, ಉಡುಮಗಲ್ ಪೇಟೆ, ರಾಯಚೂರಿನ ಸುತ್ತಮುತ್ತಲಿನ ಅನೇಕ ಹಳ್ಳಿ ಜನರು ಔಷಧಕ್ಕಾಗಿ ಬರುತ್ತಿದ್ದ ವಿವರಗಳು ದೊರೆಯುತ್ತವೆ. ಜೊತೆಗೆ ಚಿತ್ರಕಲೆಯಲ್ಲಿ ಪ್ರಾವಿಣ್ಯತೆ ಪಡೆದಿದ್ದರ ಬಗ್ಗೆ ದಾಖಲೆಗಳಿವೆ.

ರಾಂಪೂರು ಲಕ್ಷ್ಮಣದಾಸ, ಮಾಣಿಕಪ್ಪನವರು ಇಬ್ಬರೂ ಆಧ್ಯಾತ್ಮಿಕ ಸ್ನೇಹಿತರು. ಆದರೆ ಮಾಣಿಕಪ್ಪನವರು ವೈದ್ಯ ವೃತ್ತಿಯನ್ನು ಪರಿಣಾಮಕಾರಿಯಾಗಿ ಬಳಸಿಕೊಂಡ ವಿವರಗಳು ಹೀಗಿವೆ. ಬೇರೆ ಬೇರೆ ರಾಜ್ಯದ ಜನರು ಔಷಧಿಗಾಗಿ ಇವರ ಹತ್ತಿರ ಬರುತ್ತಿದ್ದರು. ಇವರ ಔಷಧಿಯಿಂದ ರೋಗಮುಕ್ತರಾಗಿ ಸಂತೋಷದಿಂದ ಹೋದಂಥ ವಿವರಗಳು ಕಾಣಸಿಗುವವು. ಮಲಯಾಳಿ, ಗುಜರಾತಿ, ಪಂಜಾಬಿ, ಉರ್ದು, ಭಾಷೆಗಳನ್ನು ಬಲ್ಲವರಾಗಿದ್ದು, ಪ್ರತಿಯೊಂದು ಭಾಷೆಯಲ್ಲಿ ಪ್ರತಿಯೊಂದು ವನಸ್ಪತಿಗೆ ಯಾವ ಭಾಷೆಯಲ್ಲಿ ಏನು ಔಷಧಿ ಎನ್ನುತ್ತಾರೆ ಎಂಬ ಬಗ್ಗೆ ಲಿಖಿತವಾಗಿ ಬರೆದ ದಾಖಲೆಗಳು ಅವರ ಮನೆಯಲ್ಲಿ ಈಗಲೂ ಕಂಡುಬರುತ್ತವೆ. ವೈದ್ಯ ಶಾಸ್ತ್ರದಲ್ಲಿ ಅನೇಕ ಗ್ರಂಥಗಳನ್ನು ಬರೆದ ಮಾಹಿತಿಗಳು ದೊರಕುತ್ತವೆ.

೧. ಅನುಭವ ವೈದ್ಯ ಶಿಖಾಮಣಿ, ೨. ವೈದ್ಯ ಸಂಗ್ರಹಮುಲು, ೩. ವೈದ್ಯ ಚಿಂತಾಮಣಿ, ೪. ವನಸ್ಪತಿ ನಿಘಂಟು (ಇದು ಚಿತ್ರ ಸಹಿತ ಬಾಲನಿಘಂಟು), ೫. ಜ್ಯೋತಿಷ್ಯ ಸರ್ವಭೋಧಾಮೃತಮು,

೬. ಯಂತ್ರ ಚಿಂತಾಮಣಿ, ತಂತ್ರ ಚಿಂತಾಮಣಿ, ೭. ಇಂದ್ರಜಾಲ, ಮಹೇಂದ್ರ ಜಾಲ ಇವೆಲ್ಲವೂ ಅಪ್ರಕಟಿತ ತೆಲುಗು ಗ್ರಂಥಗಳಾಗಿವೆ.

'ನಿರ್ಮಲಾತ್ಮಕ ಶತಕಮು' ಎಂಬ ತತ್ವಪದಗಳ ಸಂಗ್ರಹ ತೆಲುಗು ಪುಸ್ತಕವಾಗಿದ್ದು, ೫೬ ತತ್ವಪದಗಳನ್ನು ಒಳಗೊಂಡಿದ್ದು 'ಪರಶುರಾಮಾರ್ಯ' ಎಂಬ ಅಂಕಿತದಿಂದ ಬರೆದುದನ್ನು ಗುರುತಿಸ ಬಹುದು. ೧೬೫ ವಚನ, ೨೫ ಲಾವಣಿಗಳನ್ನು ಬರೆದ ಮಾಹಿತಿಗಳು ದೊರಕುವವು. 'ಶ್ರೀ ಈಶ್ವರಿ ಪ್ರಿಂಟರ್ಸ್ ಕರ್ನೂಲ್' ಇವರಿಂದ ೧೯೮೫ರಲ್ಲಿ ಈ ಪುಸ್ತಕ ಪ್ರಕಟವಾಗಿದೆ. ಇವರ ಗುರುಪರಂಪರೆಯ ಸಂಬಂಧ ಹೀಗಿದೆ.

೧. ಶ್ರೀಮದ್ ಬೃವದ್ದಯಾದಿಷ್ಟ ಅಚಲ ಬೋಧಸಿದ್ಧಾಂತ

೨. ರಾಮಲಿಂಗಾರ್ಯ

೩. ಪರಮರಾಧ್ಯ

೪. ಪರದೇಶಿಕಾಚಾರ್ಯ

೫. ನಾಗನಾರ್ಯ

೬. ಬಾಲರಾಮ

೭. ಪರಶುರಾಮಾರ್ಯ

೮. ಮಾಣಿಕ್ಯಾರ್ಯ

ಈ ಗುರುಪರಂಪರೆ ಕಾಲಮಾನಕ್ಕನುಗುಣವಾಗಿ ವ್ಯವಸ್ಥಿತ ವಿವರಣೆಯನ್ನು ಸ್ಪಷ್ಟಪಡಿಸಿದೆ. ರಾಯಚೂರಿನ ಶ್ರೀಗಿರಿ ಮಠಕ್ಕೆ ಗುರು ಪರಶುರಾಮಾರ್ಯನ್ನು ಕಾಣಲು ಹೋದ ಮಾಹಿತಿಗಳು ದೊರಕುತ್ತವೆ.

"ಪರತತ್ವಮೂಲಮಿದಿ ನರುಲಕು | ಸ್ಥಿರ ಮೈನ ದಾರಿ | ಬೋಧ
ನಿರತಮುಮದಿಲೋನ | ಮರವತು ಅನುದಿನಮು
ಪರಶುರಾಮುಲ ಗುರು |
ಎಂಬ ಹಾಡನ್ನು ನೋಡಬಹುದು"[೨೯]
ಮಾಣಿಕಪ್ಪನವರ ಆಧ್ಯಾತ್ಮಿಕ ಸಾಹಿತ್ಯ ಹೀಗಿದೆ.

೧. ಷಟ್‌ಚಕ್ರ, ೨. ಧರ್ಮದೀಕ್ಷೆ ೩. ಪಿಂಡೋತ್ಪತ್ತಿ ಲಕ್ಷಣಗಳು ೪. ಸಚ್ಚಿದಾನಂದ ಸ್ವರೂಪ ನಿರ್ಣಯವು ೫. ನಿಜವಾಕ್ಯ ಪ್ರಬೇಧ ೬. ಗುರು ಶಿಷ್ಯ ಸಂವಾದ.

ಇವೆಲ್ಲಾ ಅಪ್ರಕಟಿತ ಗ್ರಂಥಗಳಾಗಿದ್ದು ಆಧ್ಯಾತ್ಮಕತೆಯನ್ನು ಆಕರ್ಷಕವಾಗಿ ವಿವರಿಸುವ ಪರಿ ಇಲ್ಲಿ ಕಾಣಬಹುದು. ಮಾಣಿಕ್ಯಪ್ಪನ ಮಗನಾದ ದಾಸಪ್ಪನು ಬಹುಜೋಪಾನವಾಗಿ ಈ ಗ್ರಂಥಗಳನ್ನು

ತೋರಿಸಿದನು. ತನ್ನ ತಂದೆಯನ್ನು ಗುರುವಾಗಿ ಸ್ವೀಕರಿಸಿದ ಇವರ ಸಮಾಧಿ, ಯರಗೇರ ರಸ್ತೆಯ ಕನಕಗಿರಿಯ ಹತ್ತಿರ ಕಾಣಬಹುದು. ಮಾಘಶುದ್ಧ ೨ರಲ್ಲಿ ಮಾಣಿಕಪ್ಪನವರ ಆರಾಧನೆಯಾಗುತ್ತದೆ.

### ೧೮. ರಾಂಪೂರು ಲಕ್ಷ್ಮಣದಾಸ (ಕ್ರಿ.ಶ.೧೯೧೫-೧೯೭೦)

ರಾಯಚೂರು ತಾಲ್ಲೂಕಿನ ರಾಂಪೂರ ಗ್ರಾಮದ ಛಲವಾದಿ ಕುಟುಂಬದಲ್ಲಿ ಲಕ್ಷ್ಮಣದಾಸ ಜನಿಸಿದರೆಂದು ತಿಳಿದುಬರುತ್ತದೆ. ಇವರ ತಂದೆ ತಾಯಿಯ ವಿವರ ಲಭ್ಯವಾಗಿಲ್ಲ. ಭೀಮಾವಧೂತನೆಂಬ ಗುರುವಿನ ಮಾರ್ಗದರ್ಶನದಲ್ಲಿ ಆಧ್ಯಾತ್ಮ ದೀಕ್ಷೆ ಪಡೆದನು. ದೀಕ್ಷೆ ಪಡೆದಾಗ ಇವರ ವಯಸ್ಸು ४೦ ಎಂದು ತಿಳಿದುಬರುತ್ತದೆ. ಸಂಸಾರಿಕ ಜೀವನದೊಂದಿಗೆ, ಜನಪರ ಕೆಲಸಗಳಲ್ಲಿ ತೊಡಗಿದ ಮಾಹಿತಿ ದೊರಕುವುದು. ತಮ್ಮ ಜಾತಿಯ ಜನರಿಗೆ ರೈಲ್ವೆ ಇಲಾಖೆಯಲ್ಲಿ ನೌಕರಿ ಕೊಡಿಸಿದ್ದನ್ನು ಇಲ್ಲಿ ಸ್ಮರಿಸಬಹುದು. ತಿಮ್ಮಾಪೂರು ಪೇಟೆಯ ಮಾಣಿಕಪ್ಪನ ಜೊತೆಗೆ ಸ್ನೇಹದಿಂದ ಇದ್ದು, ಅವರ ವೃತ್ತಿಯನ್ನು ಗೌರವಿಸುತ್ತಿದ್ದರು. ನಾಡಿಶಾಸ್ತ್ರದಲ್ಲಿ ಪರಿಣತಿ ಹೊಂದಿದ್ದರೆಂದು ಅವರ ಶಿಷ್ಯನಾದ ಭೀಮಣ್ಣನವರು ಹೇಳುವರು. ಆದರೂ ಇವರ ಆಧ್ಯಾತ್ಮದ ಜೊತೆಗೆ ವೈದ್ಯಕೀಯ ಕೆಲಸದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರೆಂಬುದಕ್ಕೆ ಆಧಾರಗಳು ಸ್ಪಷ್ಟವಾಗಿರುವುದಿಲ್ಲ.

> "ಖಂಡಿತ ಗುರುವಿನ ಕರುಣೆ ಪಡೆದೆವು |
> ಪಂಡಿತನಾಗಿದ್ದು ಫಲವೇನಯ್ಯಾ |
> ಅಂಗದಿ ಒಂಬತ್ತು ದ್ವಾರಗಳು ಮುಚ್ಚಿ |
> ಕಂಗಳ ಮದ್ಯದಿ ವಾಯು ಬಿಚ್ಚಿ"[೩೦]

ರಾಂಪೂರ ಲಕ್ಷ್ಮಣದಾಸರ ಈ ಹಾಡನ್ನು ರಾಂಪೂರ ಭಜನಾ ಮಂಡಳಿಯಲ್ಲಿ ರಾಂಪೂರ ಭೀಮಣ್ಣನವರು ಹಾಡಿದ ಹಾಡನ್ನು ಗಮನಿಸಬೇಕು. ಗುರು ಸ್ತುತಿಯ ಯೋಗದ ಹಾಡಿನ, ವಿವರ ಇಲ್ಲಿದೆ. 'ಭೀಮೇಶ' ಎಂಬ ಅಂಕಿತದೊಂದಿಗೆ, ೬೦ ಹಾಡುಗಳನ್ನು ಬರೆದಿರುವ ಆಧಾರಗಳುಂಟು. ಇವರ ವಂಶಜರು, ಈಗಲೂ ರಾಂಪೂರ ಗ್ರಾಮದಲ್ಲಿರುವರು. ರಾಯಚೂರಿನ ಅಸ್ಕಿಹಾಳ, ಹೊಸೂರು, ಕಲ್ಮಾಲಾ, ನೆಲಹಾಳ, ಮುಂತಾದೆಡೆಯಲ್ಲಿ ಶಿಷ್ಯರು ಕಂಡುಬರುತ್ತಾರೆ. ರಾಂಪೂರು ಭಜನಾ ಮಂಡಳಿಯಲ್ಲಿ ಈಗಲೂ ಇವರು ಹಾಡುಗಳನ್ನು ಹಾಡುತ್ತಾರೆ. ನನ್ನ ಕ್ಷೇತ್ರ ಕಾರ್ಯದಲ್ಲಿ ಇವರೇ ಬರೆದ ೫೦ ಹಾಡುಗಳ ಸಂಗ್ರಹವನ್ನು ನೋಡಿದ್ದೇನೆ. ಈ ಹಾಡುಗಳು ಪುಸ್ತಕ ರೂಪದಲ್ಲಿ ಪ್ರಕಟವಾಗಿಲ್ಲ.

### ೧೯. ರಮಾನಂದ ಸರ್ತಿಗೇರಿ (೧೯೧೬-೧೯೮೪)

ಮಾನ್ವಿ ತಾಲೂಕಿನ ನೀರ್ಮಾನ್ವಿ ಗ್ರಾಮದ ಯಲ್ಲಪ್ಪ ಛಲವಾದಿ ಕುಟುಂಬದ ೨ನೇ ಮಗನು ರಮಾನಂದರೆಂದು ತಿಳಿದುಬರುತ್ತದೆ. ನೀರ್ಮಾನ್ವಿ ಗ್ರಾಮದ ಯಲ್ಲಮ್ಮನ ಗುಡಿ ಎದುರು ಇರುವ ಪರಶುರಾಮ ದೇವಾಲಯದ, ಪುರೋಹಿತರಾಗಿದ್ದರೆಂದು ಕಂಡುಬರುತ್ತದೆ.

ವೃತ್ತಿಯಲ್ಲಿ ಪೌರೋಹಿತ್ಯ ಹೊಂದಿ ಆಧ್ಯಾತ್ಮಿಕತೆಯನ್ನು ರೂಢಸಿಕೊಂಡರು. ಗುರುವಿಗಾಗಿ ಹುಡುಕಾಟ ಪ್ರಾರಂಭಿಸಿದ್ದರು. ಆದೋನಿ ತಾಲ್ಲೂಕಿನ ಹತ್ತಿರದ ಕೊರವಿ ಗ್ರಾಮದ ನರಸಯ್ಯನನ್ನು ಗುರುವಾಗಿ ಸ್ವೀಕರಿಸಿದರು. ಈ ನರಸಯ್ಯನ ಗುರು ತಿಮ್ಮದಾಸ ಕಪ್ಪಟಿ, ಇಂಥಾ ಪರಿಸರದಲ್ಲಿ ತತ್ವಪದಗಳನ್ನು ಬರೆಯಲು ಪ್ರಾರಂಭಿಸಿದರು. ಮುಂದೆ ನರಸಯ್ಯ ಸಮಾಧಿಸ್ಥನಾದನೆಂದು ತೋರುತ್ತದೆ.

ನೀರ್ಮಾನ್ವಿಯಿಂದ ರಾಯಚೂರಿಗೆ ಕಾಯಕವನ್ನರಸುತ್ತಾ ಬಂದರು. ಮುಂದೆ ರಾಜೇಂದ್ರ ಗಂಜ್‌ನ, ಕುಂಟ್ನಾಳ್ ಈರಣ್ಣನವರ ಅಂಗಡಿಯಲ್ಲಿ ಗುಮಾಸ್ತರಾಗಿ ಕೆಲಸಕ್ಕೆ ಸೇರಿಕೊಂಡರು. ಛಲವಾದಿ ಜಾತಿಯಾದರೂ ವೀರಶೈವ ಧರ್ಮವನ್ನು ಸ್ವೀಕರಿಸಿ ಸಾಧಕರಾದ ಘಟನೆ ಅವರ ಜೀವನದಲ್ಲಿ ಕಂಡುಬರುತ್ತದೆ. ತಮ್ಮ ಮನೆಯಲ್ಲಿಯೇ ೫೨ ಜನ ಶಿಷ್ಯರೊಂದಿಗೆ, ಪ್ರತಿ ಶನಿವಾರ ಭಜನೆ ಮಾಡುತ್ತಿದ್ದ ಉಲ್ಲೇಖಗಳಿವೆ. ರಮಾನಂದರ ಗುರುಪರಂಪರೆ ಈ ರೀತಿ ನೋಡಬಹುದು.

ತಿಮ್ಮದಾಸ ಕಪ್ಪಟಿ, ನರಸಪ್ಪ ಕೊರವಿ, ರಮಾನಂದ, ಸತಗೇರಿ ಶಿಷ್ಯರಾಗಿದ್ದ 'ಕೊರವೇಶ್ವರ' ಅಂಕಿತದಿಂದ ಸುಮಾರು ೫೦ ಹಾಡುಗಳನ್ನು ರಚಿಸಿದ್ದು, ಕ್ಷೇತ್ರಕಾರ್ಯದ ಸಂದರ್ಭದಲ್ಲಿ ೨೨ ಹಾಡುಗಳು ದೊರಕಿವೆ. ಆದರೆ ಇವು ಅಪ್ರಕಟಿತ ಹಾಡುಗಳಾಗಿವೆ. ಇವರ ಹಾಡುಗಳಲ್ಲಿ ಸಾಹಿತ್ಯ ಧರ್ಮ ಕರ್ಮಗಳ ಸೂಕ್ಷ್ಮತೆ, ಪಂಚಾಕ್ಷರಿ ಮಂತ್ರದ ವಿವರಣೆ, ಅಲಕ್ಷಿತ ಜಾತಿಯ ವಿಮರ್ಶೆಗಳನ್ನು ಕಾಣಬಹುದು. ೫ ಜನ ಮಕ್ಕಳೊಂದಿಗೆ ಸುಖಿ ಜೀವನ ಹೊಂದಿ ಕ್ರಿ.ಶ.೩-೧-೧೯೮೮ರಲ್ಲಿ ಹೃದಯಾಘಾತದಿಂದ ವಿಧಿವಶರಾದರು.

## ೨೦. ಯರ್ರಮಾರೆಪ್ಪ (ಕ್ರಿ.ಶ.೧೯೨೫-೨೦೦೦)

ರಾಯಚೂರಿನ ಗಾಜಗಾರ ಪೇಟೆಯ ನವಾಬ್ ಗಡ್ಡೆಯಲ್ಲಿ ತಿಕ್ಕಯ್ಯ ಮತ್ತು ಸೂರಮ್ಮ ಹರಿಜನ ದಂಪತಿಗಳಿಗೆ ಕ್ರಿ.ಶ.೧೯೨೫ರಲ್ಲಿ ಯರ್ರಮಾರೆಪ್ಪನು ಜನಿಸಿದರೆಂದು ತಿಳಿದುಬರುತ್ತದೆ. ಇವರು ೭ನೇ ತರಗತಿಯವರೆಗೆ ಶಿಕ್ಷಣ ಪಡೆದು, ಉರ್ದು ಮತ್ತು ತೆಲುಗು ಭಾಷೆಯನ್ನು ಬಲ್ಲವರಾಗಿದ್ದರು. ಸೋದರ ಮಾವನ ಮಗಳಾದ ಚಂದ್ರಮ್ಮನೊಂದಿಗೆ ವಿವಾಹವಾದರು. ಮನೆಯ ಕಾಯಕವಾದ ಚಪ್ಪಲಿ ಹೊಲಿಯುವುದನ್ನು ರೂಢಿಸಿಕೊಂಡು ರಾಯಚೂರಿನ ಸಾತ್ ಕಛೇರಿಯ ಮರದಡಿಯಲ್ಲಿ ಹರಿದ ಚಪ್ಪಲಿಗಳನ್ನು ಹೊಲಿದು ಜೀವನ ಸಾಗಿಸುತ್ತಿದ್ದರೆಂಬುದು ಗಮನಾರ್ಹ ಸಂಗತಿ.

"ರಜಾಕಾರಕ ಸಂಗ್ರಾಮದಲ್ಲಿ ಗಾಂಧಿ ಟೋಪಿ ಹಾಕಿದ್ದಕ್ಕಾಗಿ ೧೫ ದಿವಸ ರಾಯಚೂರು ಜೈಲಿನಲ್ಲಿ ಇದ್ದರು. ಆಂಧ್ರ ಪ್ರದೇಶದ ಗದ್ವಾಲ ತಾಲ್ಲೂಕಿನಲ್ಲಿ ದಲಿತ ಜನ ಸಂಗ್ರಾಮಕ್ಕಾಗಿ ಹೋರಾಡಿದ ಮಾಹಿತಿಗಳು ದೊರಕುವವು."[೬೧] ಇತಿಹಾಸದ ಕರಿನೆರಳಿನಿಂದ ಶಾಪಮುಕ್ತವಾಗುವ ಹಂಬಲದೊಂದಿಗೆ ಆಧ್ಯಾತ್ಮಿಕ ಜೀವನ ಪ್ರವೇಶಿಸಿದರು. ಯಲಬುರ್ಗಾದ 'ರಾಜೂರು ಹನುಮೇಶ'ರನ್ನು

ಗುರುಗಳಾಗಿ ಸ್ವೀಕರಿಸಿದರು. ದೀಕ್ಷಾಗುರು ಜಹೀರಾಬಾದ್ ತಿಪ್ಪಣ್ಣ ಎಂಬುದು ಗಮನಾರ್ಹ. ಇದಕ್ಕೆ ಆಧಾರ ಈ ಹಾಡನ್ನು ನೋಡಬಹುದು.

"ರಾಯಚೂರು ಪುರದಲ್ಲಿ|
ಮೆರೆಯುವ ಜಹೀರಾಬಾದಿನಲ್ಲಿ ವರಗುರು|
ಹನುಮಂತೇಶನಿರುವನೆಲ್ಲಿ |
ಶಿವಯೋಗಿ ತಿಪ್ಪಣ್ಣನ |
ಕಮಲ ಹೃದಯದಲಿ"[೩೨]

ಇವರ ಗುರು ಪರಂಪರೆಯೆಂದರೆ, ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ

ಚಂದಾ ಹುಸೇನ್ ಸಾಬ್, ರಾಜೂರು ಹನುಮಂತೇಶ, ಜಹೀರಾಬಾದ್‌ತಿಪ್ಪಣ್ಣನೆಂದು ಗುರುತಿಸಬಹುದು. ಯರ್ರಮಾರೆಪ್ಪನ ಹಾಡುಗಳ ವಿವರ ಹೀಗಿದೆ. ಅಸ್ಪೃಶ್ಯತೆ, ವರ್ಣ ಸಂಕೋಲೆಗಳ ಧ್ವನಿಗಾಗಿ ಮಿಡಿದ ಹಾಡುಗಳು ಜನಪರ ಮೌಲ್ಯಗಳ ಹೋರಾಟಗಳನ್ನು ರೂಪಕ ಮತ್ತು ದೃಷ್ಟಾಂತಗಳೊಂದಿಗೆ ಹೇಳಿದ ವಿಚಾರಗಳು ವಿಮರ್ಶಕರ ಗಮನ ಸೆಳೆಯುತ್ತವೆ. ಕರ್ನಾಟಕ ಜಾನಪದ ಯಕ್ಷಗಾನ ಅಕಾಡೆಮಿಯಿಂದ ಗುರು ಶಿಷ್ಯರ ತತ್ವಪದಗಳು ಇದರಲ್ಲಿ ೧೬ ಹಾಡುಗಳು ಪ್ರಕಟವಾಗಿವೆ. 'ಹಲವು ತೋಟದ ಹೂಗಳು, ಈ ಪುಸ್ತಕದಲ್ಲಿ ಕೆಲ ಬಿಡಿ ಹಾಡುಗಳು ಪ್ರಕಟವಾಗಿದ್ದನ್ನು ನೋಡಬಹುದು. ಯರ್ರಮಾರೆಪ್ಪನು ಕ್ರಿ.ಶ.೨೦೦೦ದಲ್ಲಿ ಮರಣ ಹೊಂದಿದರು.

## ೨೧. ಮುಂದಕಲ್ ಭೀಮಲಿಂಗಪ್ಪ(೧೯೨೬-೧೯೯೯)

ಮಾನ್ವಿ ತಾಲ್ಲೂಕಿನ ಗುಡಿಹಾಳ ಗ್ರಾಮದ ವಾಲ್ಮೀಕಿ ಮತದಲ್ಲಿ ಹನುಮಂತಪ್ಪ ಮತ್ತು ಶಿವಮ್ಮ ದಂಪತಿಗಳಿಗೆ ಹಿರಿಮಗನಾಗಿ ಕ್ರಿ.ಶ.೧೯೨೬ರಲ್ಲಿ ಭೀಮಲಿಂಗಪ್ಪ ಜನಿಸಿದರೆಂದು ತಿಳಿದುಬರುತ್ತದೆ. ಕಿರಿ ಮಗ ಸಿದ್ದಪ್ಪನೆಂದು ಸ್ಪಷ್ಟವಾಗಿದೆ. ವ್ಯವಸಾಯ ವೃತ್ತಿಯನ್ನು ಸ್ವೀಕರಿಸಿ ನಾಗಮ್ಮನೊಂದಿಗೆ ವಿವಾಹವಾದರು. ಭೀಮಲಿಂಗಪ್ಪ ದಂಪತಿಗಳಿಗೆ ಅಮರಪ್ಪ, ಹನುಮಂತು, ನಾಗಪ್ಪ, ಬಸ್ಸಣ್ಣ ಎನ್ನುವ ಗಂಡು ಮಕ್ಕಳು, ಒಬ್ಬ ಹೆಣ್ಣು ಮಗಳು ಇವರಿಗಿದ್ದರು. ಕೃಷಿ ಕಾಯಕದೊಂದಿಗೆ ತತ್ವಸಾಧನೆ ಮಾಡಿದೆನೆಂದು ಅವರೇ ಹೇಳುವರು. "ಗುಪ್ತವಾಗಿ ಐತಿ ನೋಡು ನಮ್ಮ ಹೊಲಾ | ಭೂಮಿಯೊಳಗೆ ಮಹಲಿಲ್ಲ ಯಿಂಥಾ ನೆಲಾ|" ಎನ್ನುವ ಹಾಡನ್ನೇ ನೋಡಬಹುದು. ಮುಂದೆ ವಿರಾಗಿ ಜೀವನಕ್ಕೆ ಕಾರಣವನ್ನು ಅವರೆ ಕೊಡುವರು. ನಾನು ಸುಮಾರು ೩೫ ವರ್ಷದವನಾಗಿದ್ದಾಗ ಕನಸಿನಲ್ಲಿ ಹಂಪೆಯ ವಿರೂಪಾಕ್ಷನು ಸಂಸಾರವನ್ನು ತ್ಯಜಿಸಿ ನನ್ನ ಸನ್ನಿದಾನಕ್ಕೆ ಬಾ ಎಂದು ಕರೆದಂತಾಯಿತಂತೆ, ಆದರೂ ಇವರು ವಿರೂಪಾಕ್ಷನ ಕರೆಗೆ ಓಗೊಡದೇ ಕೃಷಿ ಕಾಯಕದಲ್ಲಿ ನಿರತನಾದೆ. ಮುಂದೆ ವಿರೂಪಾಕ್ಷನ ಕರೆ ಹೆಚ್ಚಾದಾಗ ಸಂಸಾರವನ್ನು ತ್ಯಜಿಸಿ ವಿರಾಗಿಯಾದೆ ಎಂದು ಹೇಳುವರು.

ಕಲ್ಲೂರು ಅಡಿವೇಂದ್ರರಿಂದ ದೀಕ್ಷೆ ಪಡೆದು ಅವರನ್ನೇ ಗುರುವಾಗಿ ಸ್ವೀಕರಿಸಿದರೆಂಬುದನ್ನು ಇಲ್ಲಿ ಸ್ಮರಿಸಬಹುದು. ಕ್ರಮೇಣ ದತ್ತ ಪರಂಪರೆಗೆ ಬದ್ಧರಾದರೆಂದು ಕಂಡುಬರುತ್ತದೆ. ಆದರೂ ಇವರ ಮುಂದಿನ ಗುರು ಪರಂಪರೆಗೆ ಹೆಚ್ಚಿನ ಆಧಾರಗಳು ಲಭ್ಯವಾಗಿಲ್ಲ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮಂದಕಲ್ ಭೀಮಪ್ಪನವರನ್ನು ಸಂದರ್ಶನ ಮಾಡಿದಾಗ ನಾನು ವಿರೂಪಾಕ್ಷನ ಭಕ್ತನೆಂದು ಪದೇ ಪದೇ ಸ್ಮರಿಸುವ ಭೀಮಲಿಂಗಪ್ಪ ಅವರ ಮಾತುಗಳು ಹೀಗಿವೆ. ನಿದ್ರೆಯಲ್ಲಿರುವ ಭೀಮಲಿಂಗಪ್ಪನಿಗೆ ಹಂಪೆಯ ವಿರೂಪಾಕ್ಷ ತಲೆದಿಂಬಿಗೆ ನಿಂತುಕೊಂಡು ಹೀಗೆ ಹೇಳಿದನಂತೆ. 'ನಿನಗೆ ೧೦೦, ೧೫೦ ರೂ ಖರ್ಚಾಗ್ತದ ರಾಯಚೂರಿಗೆ ಹೋಗು ಮುಂದೆ ನೀನೇ ದಾರಿ ಕಂಡುಕೊಳ್ಳುವೆ ಎಂದು ಹೇಳಿದಂತಾಯಿತಂತೆ. ರಾಯಚೂರು ಮಾರ್ಗವಾಗಿ ಯಾವ ದಾರಿ ಎಂದು ತಿಳಿಯದೇ ಬಸ್ಸು ಹತ್ತುತ್ತಾರೆ. ಅದು ಬಳ್ಳಾರಿ ಜಿಲ್ಲೆಯ ಹೊಸಪೇಟೆಗೆ ಬರುತ್ತದೆ. ಮುಂದೆ ಹೊಸಪೇಟೆಯಲ್ಲಿ ಕಲ್ಲೂರು ಅಡಿವೇಂದ್ರ ಆಶ್ರಮದ ಶಾಖಾಮಠದಲ್ಲಿ ನೆಲೆ ನಿಲ್ಲುತ್ತಾರೆ. ಹಾಗೇ ೧೮, ೨೦ ವರ್ಷಗಳವರೆಗೆ ಅಲ್ಲೇ ಇದ್ದೆನೆಂದು ಭೀಮಲಿಂಗಪ್ಪನು ಹೇಳಿದ್ದನ್ನು ಇಲ್ಲಿ ಉದಾಹರಿಸಬಹುದು. ಮುಂದೆ ಹಾಡುಗಳನ್ನು ಬರೆಯಲು ಪ್ರಾರಂಭಿಸಿದ ಎನ್ನುವರು.

ಭೀಮಲಿಂಗಪ್ಪನವರು ಸುರುಪುರದ ತಿಂತಿಣಿ ಮೋನಪ್ಪಯ್ಯನ ಸುಪ್ರಭಾತವನ್ನು ಬರೆದಿದ್ದು ಅದು ಕ್ಯಾಸೆಟ್ ಮುಖಾಂತರ ಹೊರಬಂದಿದೆ. 'ಭೀಮಲಿಂಗ'ವೆಂಬ ಅಂಕಿತದಲ್ಲಿ ೧೪೦ ಹಾಡುಗಳನ್ನು ಬರೆದ ಉಲ್ಲೇಖವಿದೆ. ಆದರೆ ಅವು ಅಪ್ರಕಟಿತ ಹಾಡುಗಳಾಗಿವೆ. ಅನೇಕ ದೇವತೆಗಳನ್ನು ಸ್ತುತಿಸಿ ಹಾಡಿದ ಹಾಡುಗಳು ಹೆಚ್ಚಾಗಿವೆ. ಅವರ ಒಂದು ಮುಖ್ಯವಾದ ಹಾಡು ಹೀಗಿದೆ. 'ಏಳು ಕೊಳ್ಳ ಸುತ್ತಿ ಸುತ್ತಿ ಬಂದೆ ಯಲ್ಲವ್ವ| ಕುಂತಾಳೆ ನೆತ್ತಿಯ ಮೇಲೆ | ಸುತ್ತ ಸುಳವು ಯಾರೂ ಇಲ್ಲ ನೋಡಿ|' ಎಂದು ಯೋಗಪ್ರತಿಪಾದನಾ ಸ್ಥಲದಲ್ಲಿ ಹಾಡಿದ್ದನ್ನು ನೋಡಬಹುದು.

ಭೀಮಲಿಂಗಪ್ಪನವರ ಹಾಡುಗಳನ್ನು ಶ್ರೀ ಶಿವಯೋಗಿ ಅಡಿವೀಶ್ವರ ಭಜನಾ ಮಂಡಳಿಯವರು ಹಾಡುವುದನ್ನು ಈಗಲೂ ಕಾಣಬಹುದು. ರಾಯಚೂರು ತಾಲ್ಲೂಕಿನ ಸುತ್ತಲಿನ ಗ್ರಾಮದ ಅನೇಕ ಭಜನಾ ಮಂಡಳಿಯವರು ಭೀಮಲಿಂಗಪ್ಪನವರ ಪದ್ಯಗಳನ್ನು ಹಾಡುವುದು ಕಂಡುಬರುತ್ತದೆ. ದಿನಾಂಕ ೫-೮-೧೯೯೯ರಂದು ಹೊಸಪೇಟೆಯಲ್ಲಿ 'ಆಷಾಢ ಬಹುಳ ದಶಮಿ'ಯೆಂದು ಕೊನೆಯುಸಿರೆಳೆದರೆಂದು ತಿಳಿದುಬರುತ್ತದೆ.

### ೨೨. ಮಂಜಲ್ರ್ಲಾ ಖಾದರ್ ಸಾಬ್ (ಕ್ರಿ.ಶ.೧೯೩೦-೧೯೭೫)

ಖಾದರ್ ಸಾಬ್‌ನ ಮೂಲ ನೆಲೆ ಆಂಧ್ರ ಪ್ರದೇಶದ ಕಡಪ ಜಿಲ್ಲೆಯ ಅಂಬಾವರಂ. ತಂದೆ ಪೀರ್ ಸಾಬ್, ತಾಯಿ ಖಾದರ ಬೀ, ಇವರು ಕಂಚಿನ ವ್ಯಾಪಾರ ಮಾಡುತ್ತಿದ್ದು ಅದರಿಂದ ನಷ್ಟಹೊಂದಿ ಕರ್ನಾಟಕದ ರಾಯಚೂರು ತಾಲೂಕಿನ ವಡ್ಡವಟ್ಟಿ ಗ್ರಾಮಕ್ಕೆ ಬಂದರೆಂಬ ಮಾಹಿತಿ ದೊರಕುತ್ತದೆ.

ವಡ್ಡವಟ್ಟಿ ಗ್ರಾಮದಲ್ಲಿ ಇವರು ವಾಸಿಸುವ ಗುಡಿಸಲಿಗೆ ಬೆಂಕಿ ಬಿದ್ದು ನಷ್ಟ ಹೊಂದುವರು. ಮಕ್ಕಳಾಗದ ಪೀರ್‌ಸಾಬ್ ಖಾದರ್ ಬೀ ಇವರಿಗೆ, ದೇವರ ಹರಕೆಯಂತೆ ಜನೇ ಮಗನಾಗಿ ಕ್ರಿ.ಶ.೧೯೩೦ರಲ್ಲಿ ಖಾದರ್ ಸಾಬ್ ಜನಿಸಿದನು. ಮುಂದೆ ತಂದೆ ತೀರಿಕೊಂಡಾಗ ಮನೆಯ ಜವಾಬ್ದಾರಿ ಮತ್ತು ಬಡತನದಿಂದ ಜರ್ಝರಿತರಾದರು. ಕೊರ್ವಿಹಾಳದಲ್ಲಿರುವ ಇವರ ಅಕ್ಕನು ತನ್ನ ಆಭರಣಗಳನ್ನು ಮಾರಿ ಅಂಗಡಿಯನ್ನು ಇಟ್ಟುಕೊಟ್ಟಳಂತೆ. ಅದನ್ನೂ ಸರಿಯಾಗಿ ಮಾಡಲಿಲ್ಲವೆಂದು ಸ್ಪಷ್ಟವಾಗುತ್ತದೆ. ಮುಂದೆ ಕಿರಾಣಿ ವ್ಯಾಪಾರದ ನಂತರ ಹೊಲಿಗೆ ಕೆಲಸ, ಕಮ್ಮಾರಿಕೆ ಮಾಡಿದರು. ಇದರಲ್ಲೂ ಯಶಸ್ಸು ಕಾಣದಾದಾಗ ಮನೆಯಲ್ಲಿ ಮಲಕಾಪುರದ ಮೆಹಬೂಬ್‌ಬೀಯೊಂದಿಗೆ ಮದುವೆ ಮಾಡುತ್ತಾರೆ. ವೈವಾಹಿಕ ಜೀವನ ಸಂತೃಪ್ತಿ ಕಾಣದೆ ಪೂರತಿಪ್ಲಿ ಗ್ರಾಮದ ಸಿದ್ದರಾಮಯ್ಯನೊಂದಿಗೆ ಗುರುದೀಕ್ಷೆ ಪಡೆದರೆಂದು ಗುರುತಿಸಬಹುದು. ಸಿದ್ದರಾಮಯ್ಯ ಕಲ್ಲೂರು ಅಡಿವೇಂದ್ರ ಮಠದ ಗುರು ಪರಂಪರೆಯಲ್ಲಿ ಒಬ್ಬರು. ಕಲ್ಲೂರು ಅಡಿವೇಂದ್ರ ಮಠದ ಗುರುಪರಂಪರೆ ಹೀಗಿದೆ. ಗದ್ವಾಲ್ ತಾಲೂಕಿನ ತುಕಾರಾಮಪ್ಪ-ಪೇಟೆ ರಂಗಪ್ಪ-ಫೂಲ್ ಚಂತಿ ಬಂಡೇಗುರು-ಅರಳೆಬಂಡೆ ತಾತ - ಕೃಷ್ಣಾವಧೂತರು-ವೆಂಕಾವಾಧೂತರು-ಕಲ್ಲೂರು ಅಡಿವೇಂದ್ರ ಸ್ವಾಮಿಗಳು-ಶಿವರಾಮ ದಾಸರು- ಪೂರತಿಪ್ಲಿ-ಸಿದ್ದರಾಮಯ್ಯ-ಮಂಜರ್ಲಾ ಖಾದರ್ ಸಾಬ್-ದಾದಾ ಪೀರ್ ಮೇಲಿನ ಈ ಗುರುಪರಂಪರೆಯು ದತ್ತಪೀಠದ ಅನೇಕ ಶಾಖೆಯ ಗುರುಗಳೆಂದು ಗುರುತಿಸಬಹುದು. ಕಲ್ಲೂರು ಅಡಿವೇಂದ್ರ ಸ್ವಾಮಿಗಳು ಖೇಮಾರ್ಯರಿಗಿಂತ ವಯಸ್ಸಿನಲ್ಲಿ ಚಿಕ್ಕವರೆಂಬ ಮಾಹಿತಿ ದೊರಕುವುದು. ಖೇಮಣ್ಣನ ತತ್ವಪದಗಳಿರುವಂತೆ, ಅಡಿವೇಂದ್ರ ಸ್ವಾಮಿಗಳ ತತ್ವಪದಗಳು ದೊರಕುವುದಿಲ್ಲ. ಈ ಕುರಿತು ಸಮಗ್ರ ಸಂಶೋಧನೆಯ ಅಗತ್ಯವಿದೆ.

ಖಾದರ್ ಸಾಬ್‌ನ ಹಾಡುಗಳು ಭಾವ್ಯಕ್ಯತೆಯ ಮಹತ್ವದ ಸ್ಥಾನ ಸೂಚಿಸುತ್ತದೆ. ತೆಲುಗು ಮತ್ತು ಹಿಂದಿ ಭಾಷೆಯ ಹಾಡುಗಳನ್ನು ಪರಿಣಾಮಕಾರಿಯಾಗಿ ಇವರು ಹಾಡುತ್ತಿದ್ದರು. 'ಸಿದ್ದರಾಮ' ಎಂಬ ಅಂಕಿತದೊಂದಿಗೆ ೬೯ ಹಾಡುಗಳಿವೆ. 'ಕಹಾಸೆ ಆಯಾ ತೂ| ಕಿದರ್ ಸೆ| ಜಾರಹಾ ಹೈ| ಎಂಬ ಹಿಂದಿ ಹಾಡು, 'ಆರು ಮೂಡುಲೋ ಚುಕ್ಕಿ ಅಲ್ಲಾಡು ತುನ್ನಾವಿ' ಎಂಬ ತೆಲುಗು ಹಾಡುಗಳನ್ನು ಗುರುತಿಸ ಬಹುದು. ಆದರೆ ಈ ಹಾಡುಗಳು ಅಪ್ರಕಟಿತವಾದವುಗಳಾಗಿವೆ.

ಖಾದರ್‌ಸಾಬ್‌ನ ಹಾಡುಗಳು ಹಂತಹಂತವಾಗಿ ಅವರ ವ್ಯಕ್ತಿತ್ವ ಪರಿಚಯಿಸುವುದನ್ನು ಕಾಣಬಹುದು. ಹಾಡುಗಳಲ್ಲಿ ವ್ಯಕ್ತವಾಗುವ ಆಂತರಿಕ ಪರಿಶೋಧನೆ, ಭಾವೈಕ್ಯತೆಯನ್ನು ಸೂಚಿಸುವ ಹೊಸತನ, ದೇವನೊಬ್ಬನೆ ಎನ್ನುವ ಪರಿಪೂರ್ಣ ಪ್ರಜ್ಞೆಯ ತೀಕ್ಷ್ಣತೆಯನ್ನು ಹೆಚ್ಚಿಸುವ ಹಾಡುಗಳನ್ನು ಕಾಣಬಹುದು. ಇವರ ಮಗನಾದ 'ದಾದಾಪೀರ್' ಸುಶ್ರಾವ್ಯವಾಗಿ ಹಾಡುವುದನ್ನು ಇಲ್ಲಿ ಸ್ಮರಿಸಬಹುದು. ತಂದೆ ರಚಿಸಿದ ಹಾಡುಗಳು ಕ್ಯಾಸೆಟ್ ಮೂಲಕ ಸಂಗೀತಾಸಕ್ತರ ಗಮನ ಸೆಳೆದ್ದದು ಗಮನಾರ್ಹ. ಇವರು ಕ್ರಿ.ಶ.೧೯೭೫ ವೈಶಾಖ ಶುದ್ಧ ಪೂರ್ಣಮಿಯಿಂದು ಕೊನೆಯಾದರು. ಮಂಜರ್ಲಾದಲ್ಲಿ ಇವರ ಸಮಾಧಿಯನ್ನು

ಈಗಲೂ ನೋಡಬಹುದು. ಪ್ರತಿವರ್ಷ ಈ ಸಂತನ ಆರಾಧನೆ ಮಾಡುವರು. ಇವರ ಅಕ್ಕನ ಮಗನಾದ ಕೊರ್ವಿಹಾಳ್ ಕಬೀರ ಶಿಷ್ಯನಾಗಿ, ತತ್ವಪದಕಾರನಾಗಿ ಗುರುತಿಸಿಕೊಂಡಿದ್ದಾನೆ.

## ೨೩. ಜಹೀರಾಬಾದ್ ತಿಪ್ಪಣ್ಣತಾತ (ಕ್ರಿ.ಶ.೧೯೪೦)

ರಾಯಚೂರಿನ ಮಲಿಯಾಬಾದ ಫಕೀರಪ್ಪ ಮತ್ತು ಲಕ್ಷ್ಮಮ್ಮ ಎಂಬ ಹರಿಜನ ದಂಪತಿಗಳಿಗೆ ಕ್ರಿ.ಶ.೧೯೪೦ ಮಂಗಳವಾರ ಸ್ವಾತಿ ನಕ್ಷತ್ರದಂದು ೯ನೇ ಮಗುವಾಗಿ ಮುನಿಸ್ವಾಮಿ ಜನಸಿದರೆಂದು ತಿಳಿದುಬರುತ್ತದೆ. ಇವರ ಮೊದಲ ಹೆಸರು ಮುನಿಸ್ವಾಮಿಯಾಗಿದ್ದು, ಮುಂದೆ ತಿಪ್ಪಣ್ಣ ತಾತನೆಂದು ಕರೆಯಿಸಿಕೊಂಡಿರಬೇಕು. ಗುರುಸಿದ್ದಯ್ಯ ಸ್ವಾಮಿಯ ಆಶೀರ್ವಾದದಿಂದ ಅನೇಕ ಕಂಟಕಗಳಿಂದ ದೂರವಾಗಿ ಮುನಿಸ್ವಾಮಿ ಬೆಳೆದನು. ಮುಂದೆ ಟಿ.ಸ್ಯಾಮುವೆಲ್ ರವರಿಂದ ಅಭ್ಯಾಸ ಮಾಡಿದೆನೆಂದು ಪ್ರಸ್ತಾಪಿಸುವರು. ಕುಷ್ಟಗಿ ತಾಲೂಕಿನ 'ಕಿಶನ್‌ರಾವ್' ಇವರನ್ನು ವಿದ್ಯಾರ್ಥಿಯಾಗಿ ಸ್ವೀಕರಿಸಿ ರಾಯಚೂರಿನ ಜಹೀರಾಬಾದನಲ್ಲಿ ಕಿಶನ್‌ರಾವ್ ಇವರೂ ಸೇರಿ ಬಾಪೂಜಿ ಪಾಠ ಶಾಲೆ ಪ್ರಾರಂಭ ಮಾಡಿದರು. ಮುಂದೆ ಉಸ್ಮಾನಿಯಾ ವಿಶ್ವವಿದ್ಯಾಲಯದಿಂದ ಖಾಸಗಿಯಾಗಿ ಬಿ.ಎ. ಪದವಿ ಪಡೆದು ಕ್ರಿ.ಶ.೧೯೬೦ರಲ್ಲಿ ಸೋಷಿಯಲ್ ವೆಲ್ ಫೇರ್ ಇನ್ಸ್‌ಪೆಕ್ಟರಾಗಿ ಯಲಬುರ್ಗಾದಲ್ಲಿ ಸೇವೆ ಮಾಡಿದರೆಂದು ತಿಳಿದುಬರುತ್ತದೆ.

ವೈವಾಹಿಕ ಜೀವನದಲ್ಲಿ ಮೊದಲ ಹೆಂಡತಿ ಮನೋಹರಮ್ಮನ ನಿಧನಾನಂತರ ಎರಡನೇ ಹೆಂಡತಿ ಶರಣಮ್ಮನೊಂದಿಗೆ ವಿವಾಹವಾದರು. ಶರಣಮ್ಮನೊಂದಿಗಿನ ದಾಂಪತ್ಯ ಜೀವನದಿಂದ ಹತ್ತು ಮಂದಿ ಜನಿಸಿದರು. ಯಲಬುರ್ಗಾ ತಾಲೂಕಿನ ರಾಜೂರು ಗ್ರಾಮದ ಹನುಮೇಶರನ್ನು ಇವರು ಶಿಕ್ಷಕರಾಗಿದ್ದಾಗ ಗುರುವಾಗಿ ಸ್ವೀಕರಿಸಿದರು. ರಾಯಚೂರಿನ ಚಿಕ್ಕಸೂಗೂರು ಗ್ರಾಮದಲ್ಲಿ ನಿವೃತ್ತಿಯಾದರು ಎಂದು ತಿಳಿದುಬರುತ್ತದೆ. ಕ್ರಿ.ಶ.೧೯೭೨ರಲ್ಲಿ ಜಹೀರಾಬಾದ್‌ನಲ್ಲಿ ಆಶ್ರಮ ಸ್ಥಾಪನೆ ಮಾಡಿದರು. ೩೦ x ೩೦ ಅಳತೆಯ ಈ ಆಶ್ರಮವು ಅನೇಕ ಭಕ್ತರಿಂದ ಜನನಿಬಿಡವಾಗಿದ್ದನ್ನು ನೋಡಬಹುದು. ಇಲ್ಲಿಂದಲೇ ಆಧ್ಯಾತ್ಮಿಕ ಜೀವನಕ್ಕೆ ಪ್ರವೇಶಿಸಿದರೆಂದು ತಿಳಿದುಬರುತ್ತದೆ.

ಪ್ರತಿ ಅಮಾವಸ್ಯೆಗೆ ಮತ್ತು ವಿಶೇಷ ದಿನಗಳಲ್ಲಿ ಆಧ್ಯಾತ್ಮಿಕ ಚರ್ಚೆ, ಭಜನೆ ಮಾಡವುದನ್ನು ಈಗಲೂ ಕಾಣಬಹುದು. ಆಧ್ಯಾತ್ಮಿಕ ಚರ್ಚೆ ಮಾಡುವ ಸ್ಥಳಕ್ಕೆ ಅನುಭವ ಮಂಟಪವೆಂದು ಹೆಸರಿಟ್ಟು, ಆ ಸ್ಥಳದ ಆರು ಮೆಟ್ಟಲಿಗೆ ಷಟ್‌ಸ್ಥಲವೆಂದು ಕರೆಯುತ್ತಿದ್ದರು. ಅದರ ವಿವರ ಹೀಗಿದೆ.

೧. ಆಧಾರ - ನ

೨. ಸ್ವಾದಿಷ್ಟ - ಮಃ

೩. ಮಣಿಪುರ - ಶಿ

೪. ಅನಾಹತ - ವಾ

೫. ವಿಶುದ್ಧ - ಯ

೬. ಆಜ್ಞೆ - ಓಂ

ಗುರುಪರಂಪರೆ ಹೀಗಿದೆ,

೧. ಚಂದಾಹುಸೇನ ತಾತ (ಮುನಿರಾಬಾದ್ ಹೊಸಪೇಟೆ)

೨. ಹನುಮೇಶಪ್ಪ (ರಾಜೂರು)

೩. ತಿಪ್ಪಣ್ಣ ತಾತ (ರಾಯಚೂರು)

ಶಿಷ್ಯ ಪರಂಪರೆ

೧. ಹೊಸೂರು ತಿಪ್ಪಣ್ಣ (ಯಕ್ಲಾಸಪುರ)

೨. ಬಸವರಾಜ ಹೊಸಪೇಟೆ (ಮರ್ಚೇಡ್)

೩. ಯರ‍್ರಮಾರೆಪ್ಪ (ರಾಯಚೂರು)

೪. ಮುನಿವೆಂಕಟೇಶ

೫. ಸುಧನ್ವ

ಇವರಲ್ಲಿ ಕೆಲವರು ತತ್ವಪದಕಾರರಾಗಿದ್ದು ಕೆಲವರು ಲೇಖಕರಾಗಿದ್ದಾರೆ. ಇವರಿಗೆ ತಿಪ್ಪಣ್ಣ ತಾತನೇ ಗುರುವೆಂಬುದು ಗಮನಾರ್ಹ.

ತಿಪ್ಪಣ್ಣ ತಾತನ ಒಟ್ಟು ಹಾಡುಗಳು ೧೦೦ಕ್ಕೂ ಮೇಲ್ಪಟ್ಟಿವೆ. ೬೦ ವಚನಗಳಿವೆ. 'ಹನುಮೇಶ' ಎಂಬ ಅಂಕಿತದಲ್ಲಿ ಈ ಪದ್ಯಗಳನ್ನು ನೋಡಬಹುದು. ಕೆಲ ಹಾಡುಗಳು ಕರ್ನಾಟಕ ಜಾನಪದ ಯಕ್ಷಗಾನ ಅಕಾಡೆಮಿಯಿಂದ 'ಗುರುಶಿಷ್ಯರ ತತ್ವಪದಗಳು', ಡಾ.ಕಾಳೇಗೌಡ ನಾಗಾವಾರರ 'ಹಲವು ತೋಟದ ಹೂಗಳು' ಈ ಪುಸ್ತಕಗಳಲ್ಲಿ ಪ್ರಕಟವಾದದ್ದನ್ನು ಕಾಣಬಹುದು.

"ಎಷ್ಟು ಹುಡುಕಿದರೂ ತಂಗಿ| ನಾದವು ಸಿಗದಮ್ಮಾ|
ತಂಗಿ ಎತ್ತ ಹೋದರೂ | ಏನೂ ಸಿಗದಮ್ಮಾ
ಕಾಕನ ಪುರದೊಳು ಕಾಕನ ದೊಳಗೈತ್ಯಮ್ಮ"[೩೩]

ರಾಯಚೂರಿನ ಜಹೀರಾಬಾದನಲ್ಲಿ 'ಶ್ರೀಸದ್ಗುರು ಶರಣಾನ್ವೇಶ್ವರ ಶೂನ್ಯಸಿಂಹಾಸನ ಪ್ರಕಾಶನ ಪ್ರಭುಲಿಂಗಲೀಲೆ ಅನುಭವ ಮಂಟಪ'ದಲ್ಲಿ ಗುರು ಹನುಮೇಶರ ಮೂರ್ತಿಯನ್ನು ಈಗಲೂ ನೋಡಬಹುದು. ಮೂರ್ತಿಯ ಕೆಳಗೆ ಯೋಗ ಮಂಟಪದ ಗುಹೆ ಇದೆ. ಆಶ್ರಮದ ಉತ್ತರ ಭಾಗದಲ್ಲಿ ತಿಪ್ಪಣ್ಣ ತಾತನ ಮನೆಯನ್ನು ನೋಡಬಹುದು. ರಾಯಚೂರಿನ ದಲಿತ ಪರಂಪರೆಯ ತತ್ವಪದಕಾರರಲ್ಲಿ ಸಾಮೂಹಿಕ ಸಂಘಟನೆಯೊಂದಿಗೆ, ಬದುಕನ್ನು ಬಹು ಹತ್ತಿರದಿಂದ ಕಂಡಂಥ ಇವರ ಜೀವನ ಮತ್ತು ಹಾಡುಗಳು ಅನುಭವದ ಶಕ್ತಿಗಳೆಂಬುದರಲ್ಲಿ ಎರಡು ಮಾತಿಲ್ಲ.

## ೨೪. ಕಲ್ಮಲಾ ತಾಯಣ್ಣ (ಕ್ರಿ.ಶ.೧೯೪೨-೧೯೮೨)

ಡಾ.ಬಸವರಾಜ ಸಬರದರವರು ತಿಪ್ಪಣ್ಣನ ಕಾಲವನ್ನು ಕ್ರಿ.ಶ.೧೯೪೩-೧೯೮೦ ಎಂದು ಹೇಳುವರು. ಆದರೆ ಕಲ್ಮಲಾ ತಾಯಣ್ಣನ ಸಹೋದರ ಮೂಕಪ್ಪ ವಕೀಲರು ಇವರ ಕಾಲವನ್ನು ಕ್ರಿ.ಶ.೧೯೪೨ರಲ್ಲಿ ಜನಿಸಿ, ೨೦-೬-೧೯೮೨ರಲ್ಲಿ ಕೊನೆಯಾದರೆಂದು ಹೇಳುವರು. ಆದ್ದರಿಂದ ಮೂಕಪ್ಪನವರು ಹೇಳಿದ ಕಾಲವನ್ನು ಇಟ್ಟುಕೊಳ್ಳುವುದು ಸಮಂಜಸವೆನಿಸುವುದು. ದಲಿತ ಕುಟುಂಬದ ಪೋಲಯ್ಯ ಮತ್ತು ತಿಮ್ಮವ್ವ ದಂಪತಿಗಳಿಗೆ ತಾಯಣ್ಣ ಜನಿಸಿದರು. ೫ನೇ ತರಗತಿ ಓದುವಾಗಲೇ ಕುರುಡಿ ಗ್ರಾಮದ ರಾಮಚಂದ್ರರ ಸ್ನೇಹ ಬೆಳೆಸಿ ಅವರ ಜೊತೆ ಅನೇಕ ಭಜನಾ ತಂಡಗಳೊಂದಿಗೆ ಹಾಡಲು ಹೋಗುತ್ತಿದ್ದರು. ಮುಂದೆ ರಾಯಚೂರಿನ ಹಂದರ್ದಾ ಹೈಸ್ಕೂಲಿನಲ್ಲಿ ವಿದ್ಯಾಭ್ಯಾಸ ಮಾಡಿದರು. ಹೈಸ್ಕೂಲ್ ಓದುವಾಗಲೇ ಐಚ್ಛಿಕ ವಿಷಯವಾಗಿ ಸಂಸ್ಕೃತ ತೆಗೆದುಕೊಂಡು, ಎಲ್.ವಿ.ಡಿ. ಕಾಲೇಜ್‌ನಲ್ಲಿ ಬಿ.ಎ. ಪದವಿ ಮುಗಿಸಿ, ಕಂದಾಯ ಇಲಾಖೆಯಲ್ಲಿ ಎರಡನೇ ದರ್ಜೆ ಸಹಾಯಕರಾಗಿ ಸೇರಿದರು. ಸಂಸಾರಕ್ಕೆ ಬದ್ದರಾಗಿ ಕಮಲಮ್ಮನ ಜೊತೆ ಕ್ರಿ.ಶ.೧೯೬೫ರಲ್ಲಿ ವಿವಾಹವಾದರೆಂದು ತಿಳಿದುಬರುತ್ತದೆ. ದೇವದುರ್ಗ, ಕುಷ್ಟಗಿ, ಮಾನ್ವಿ, ಗಂಗಾವತಿ, ರಾಯಚೂರು ತಾಲೂಕುಗಳಲ್ಲಿ ಸರಕಾರಿ ಕೆಲಸ ಮಾಡಿದ ವಿವರಗಳು ದೊರಕುತ್ತವೆ.

ರಾಯಚೂರಿನ ಅಸ್ಪೃಶ್ಯ ಸಮಾಜದಲ್ಲಿ ವರ್ಣ ಸಂಕೋಲೆ ಬಂದಿತವಾದಾಗ ಅದರ ಬಿಡುಗಡೆಗಾಗಿ ನಾನಾ ಸಂಪ್ರದಾಯದ ಗುರುಗಳು ಶ್ರಮಿಸಿದರೆಂದು ತಿಳಿದುಬರುತ್ತದೆ. ಅದರಲ್ಲಿ ಜಹೀರಾಬಾದ್ ತಿಪ್ಪಣ್ಣತಾತನೂ ಒಬ್ಬರೆಂದು ಕಂಡುಬರುತ್ತದೆ. ಮುಂದೆ ಇವರನ್ನೇ ಗುರುಗಳಾಗಿ ಸ್ವೀಕರಿಸಿ, ಆಧ್ಯಾತ್ಮಿಕ ಜೀವನದೊಂದಿಗೆ ತತ್ವಪದಗಳನ್ನು ಬರೆಯಲು ಪ್ರಾರಂಭಿಸಿದರು. ಮೂಲ ಗುರು ರಾಜೂರು ಹನುಮೇಶರಾಗಿದ್ದು ಹನುಮೇಶರನ್ನು ನೆನೆಯುತ್ತಾ ಮನದುಂಬಿ ಹಾಡಿದ್ದ ಪ್ರಸ್ತಾಪ ಈ ಹಾಡಿನಲ್ಲಿದೆ.

> "ನಮೋಃ ನಮೋಃ ಓಂ ಶ್ರೀ ಹನುಮೇಶ|
> ಪಾರು ಮಾಡೋ ಪಾಶಾ|
> ಬೇಡುವೆ ಶಿಷ್ಯನೆಂದು|
> ತಮ್ಮ ಪರಮ ಗುರುವಿನ|"[೩೪]

ನೆಲೆಗೆ ವಂದಿಸಿದ್ದಾರೆ. ರಾಜೂರು ವಾಸನೇ ಎಂಬ ಹಾಡನ್ನು ಗಮನಿಸಬಹುದು. ಜಹೀರಾಬಾದ್ ತಿಪ್ಪಣ್ಣ ತಾತನ ಆಶ್ರಮಕ್ಕೆ ಭಕ್ತಿಯಿಂದ ನೆನೆದ ಪ್ರಸಂಗ ಹೀಗಿದೆ.

> "ಜಹೀರಾಬಾದ್ ವಾಸ | ಮಠವೊಂದು ಚಿಕ್ಕದು
> ಸೊಗಸ | ಶಿಷ್ಯವೃಂದ ನೆನಪಾ|"[೩೫]

ಈ ಗುರುಪರಂಪರೆಗೆ ಮೇಲಿನ ಹಾಡುಗಳು ಪೋಷಕವಾದವುಗಳು ಎಂದು ಹೇಳಬಹುದು.

ತಾಯಣ್ಣನವರಿಗೆ ನಾನು ದಲಿತನೆನ್ನುವ ನೋವು ಕಾಡಿರಬೇಕೆನಿಸುತ್ತದೆ. ಇವರ ವ್ಯಕ್ತಿತ್ವದ ಪ್ರಸ್ತಾಪ ಹೀಗಿದೆ. "ಸಾಧನೆಯೆನ್ನುವುದು ಮಂತ್ರ ತಂತ್ರಗಳಿಂದಲ್ಲ. ಅದು ಆಧ್ಯಾತ್ಮಿಕ ನಿಷ್ಠೆ ಎಂದು ಹೇಳುತ್ತಿದ್ದರಂತೆ. ಆಧ್ಮಾತಿಕ ಚರ್ಚೆಯಲ್ಲಿ ಯಾರಾದರೂ ಇವರನ್ನು ಪ್ರಶ್ನಿಸಲು ಬಂದರೆ ಅವರಿಗೆ ನೀವು ನನ್ನನ್ನು ಪರೀಕ್ಷಿಸಲು ಬಂದಿರುವಿರೋ ಎಂದು ಕೇಳಿ ಪರೀಕ್ಷಿಸಲು ಬಂದರೆ ನನಗೇನೂ ತಿಳಿಯದು ಎಂದು ಹೇಳಿದ ಮಾತುಗಳು ತಾಯಣ್ಣನವರ ಜೀವನದ ಮೇಲೆ ಬೆಳಕು ಬೀರುವ ಪ್ರಸಂಗವೆಂದು ಹೇಳಬೇಕಾಗುತ್ತದೆ.

ಅದ್ವೈತ ಸಿದ್ಧಾಂತದ ಪ್ರತಿಪಾದಕರೆಂದು ನಾದವೇ ಬ್ರಹ್ಮನೆನ್ನುವ ತತ್ವವನ್ನು ಒಪ್ಪಿಕೊಳ್ಳುತ್ತಿದ್ದರೆಂಬ ಮಾಹಿತಿಯುಂಟು. ಗುರು ತಿಪ್ಪಣ ಎಂಬ ಅಂಕಿತದೊಂದಿಗೆ ತತ್ವಪದಗಳನ್ನು ರಚಿಸಿದ್ದಾರೆ. ತತ್ವಪದಗಳ ಸಂಖ್ಯೆ ಎಷ್ಟು ಎಂಬ ಮಾಹಿತಿಯಿಲ್ಲ. ಕೆಲ ಬಿಡಿ ಹಾಡುಗಳು ಪ್ರಕಟಗೊಂಡದ್ದನ್ನು ಕಾಣಬಹುದು. ಡಾ.ಜಯಶ್ರೀ ಸಬರದರ 'ಗುರುಶಿಷ್ಯರ' ತತ್ವಪದಗಳು, 'ಹಲವು ಬಗೆಯ ತೋಟದ ಹೂಗಳು' ಈ ಪುಸ್ತಕಗಳಲ್ಲಿ ಇವರ ಹಾಡುಗಳು ಪ್ರಕಟಗೊಂಡದ್ದನ್ನು ನೋಡಬಹುದು. ಈಗಲೂ ತಾಯಣ್ಣನವರ ಹಾಡುಗಳನ್ನು ಕೆಲ ಭಜನಾ ಮಂಡಳಿಗಳಲ್ಲಿ ಹಾಡುವುದನ್ನು ಕಾಣುತ್ತೇವೆ. ರಾಯಚೂರಿನ ಪ್ರಮುಖ ತತ್ವಪದಕಾರರ ಪ್ರೇರಣೆ ಇವರ ಹಾಡುಗಳಲ್ಲಿ ಕಂಡುಬರುತ್ತದೆ. ಗುರುಶಿಷ್ಯರ ಹಾಡುಗಳು, ಸತಿ-ಪತಿ ಭಾವದ ಹಾಡುಗಳು ಗಮನ ಸೆಳೆಯುವುದನ್ನು ನೋಡಬಹುದು.

ಶ್ರೀ ಮೂಕಪ್ಪನವರು ತಮ್ಮ ಸಹೋದರ ಕೊನೆಯಾದ ವಿಚಾರವನ್ನು ಹೀಗೆ ಹೇಳುವರು. ಕುಷ್ಟಿಗಿಯಲ್ಲಿ ಸರಕಾರಿ ಸೇವೆಯಲ್ಲಿರುವಾಗ ಎಲ್ಲರಿಗೂ ಆಫೀಸ್‌ನಲ್ಲಿ ಇದೇ ನನ್ನ ಕೊನೆಯ ಭೇಟಿಯೆಂದು ಹೇಳಿ ಎಲ್ಲರೊಂದಿಗೆ ಚಹಾ ಕುಡಿದು ಮನೆಗೆ ಬಂದು ಪತ್ನಿಗೆ ನಾನು ಸ್ವಲ್ಪ ಮಲಗುತ್ತೇನೆ ಹಾಸಿಗೆ ಹಾಸೆಂದರು. ಮಲಗಿದ ಕ್ಷಣದಲ್ಲಿ, ಹೊದಿಕೆ ಹೊದಿಸಬೇಕೆನ್ನುವುದರಲ್ಲಿಯೇ ಹೃದಯಾಘಾತದಿಂದ ಇಲ್ಲವಾದರು. ಕ್ರಿ.ಶ.೧೯೮೨ ಜೂನ್ ೨೦ನೇ ದಿನಾಂಕದಂದು ಕೊನೆಯಾದರೆನ್ನುವರು.

## ೨೫. ರಾಂಪೂರ ಭೀಮಣ್ಣ (ಕ್ರಿ.ಶ.೧೯೪೨)

ವೃತ್ತಿಯಲ್ಲಿ ಸರಕಾರಿ ಶಿರಸ್ತೆದಾರರಾದರೂ ಪ್ರವೃತ್ತಿಯಲ್ಲಿ ಆಧ್ಯಾತ್ಮಿಯಾಗಿ, ಕ್ರಿ.ಶ.೫-೬-೧೯೪೨ರಲ್ಲಿ ರಾಂಪೂರದಲ್ಲಿ ಭೀಮಣ್ಣನವರು ಜನಿಸಿದರು. 'ಗುರುಮಹಾಂತೇಶ' ಮತ್ತು 'ಗಣೇಕಲ್ ಪುರದೀಶ' ಎಂಬ ಅಂಕಿತವನ್ನಿಟ್ಟುಕೊಂಡು ತತ್ವಪದಗಳನ್ನು ಬರೆದರೆಂದು ತಿಳಿದುಬರುತ್ತದೆ. 'ಭೂಮದ್ಯಾಯಿ' ಎಂಬ ಹೆಸರಿನೊಂದಿಗೆ ಎಲೆ ಮರೆಯ ಕಾಯಿಯಂತೆ ರಾಯಚೂರು ಜನರಿಗೆ ಅಪರಿಚಿತರಾಗಿದ್ದಾರೆ.

ಆದೋನಿ ತಾಲೂಕಿನ ಇಸ್ವಿ ಗ್ರಾಮದ ಬಸ್ಸಪ್ಪ ಮತ್ತು ಸಿದ್ದಮ್ಮ ಛಲವಾದಿ ಕುಲದ ದಂಪತಿಗಳಿಗೆ, ಭೀಮಣ್ಣನವರು ಮೊದಲ ಮಗನಾಗಿದ್ದರೆಂದು ತಿಳಿದುಬರುತ್ತದೆ. ಈ ಕುಟುಂಬವು ಬೇಸಾಯ, ಬೇಲ್ದಾರ್ (ಮನೆಕಟ್ಟುವ) ಕೆಲಸದಲ್ಲಿ ನಿರತರಾಗಿದ್ದರು. ಮುಂದೆ ಈ ದಂಪತಿಗಳಿಗೆ ಸಿದ್ದಯ್ಯ ಸ್ವಾಮಿಗಳ ಸಾಮಿಪ್ಯದಿಂದ ಮನೆಯಲ್ಲಿ ಆಧ್ಯಾತ್ಮಿಕ ಪರಿಸರ ಉಂಟಾಯಿತೆಂದು ಹೇಳಬಹುದು. ತಂದೆ ಬಸ್ಸಪ್ಪನವರು ಆಧ್ಯಾತ್ಮಿಕ ವಿಚಾರವಾದಿಯಾದ್ದರಿಂದ ಬಾಲಕನಾಗಿದ್ದ ಭೀಮಣ್ಣನವರಿಗೆ ಶರಣರ ವಚನಗಳನ್ನು ಸರ್ವಜ್ಞನ ತ್ರಿಪದಿ, ಸೋಮೇಶ್ವರನ ಶತಕಗಳನ್ನು ಬಾಯಿಮಾತಿನಿಂದ ಹೇಳುವ ಪರಿಪಾಠವಿತ್ತೆಂದು ಭೀಮಣ್ಣನವರು ಹೇಳುವರು.

ಚಿಕ್ಕಪ್ಪನಾದ ಯಮುನಾಳ ಗ್ರಾಮದ ಗಿರಿಮಲ್ಲಯ್ಯನು ಭಜನೆ ಹಾಡುಗಾರ ಮತ್ತು ಬಯಲಾಟವನ್ನು ಕಲಿಸುತ್ತಿದ್ದರು. ಮುಂದೆ ಚಿಕ್ಕಪ್ಪನೊಂದಿಗೆ ಭಜನೆ ಹಾಡುಗಳಿಗೆ ಧ್ವನಿಗೂಡಿಸಿ ನಿಜಗುಣ ಸರ್ಪಭೂಷಣರ ಹಾಡುಗಳು ಬಾಯಿಪಾಠವಾದವೆಂದು ಸ್ಪಷ್ಟಪಡಿಸುವರು. ಬಾಲ್ಯದ ಆಧ್ಯಾತ್ಮಿಕ ಪರಿಸರದೊಂದಿಗೆ ರಾಂಪೂರು ಗ್ರಾಮದ ಮೆಥೋಡಿಸ್ಟ್ ಶಾಲೆಯಲ್ಲಿ ೭ನೇ ತರಗತಿಯವರೆಗೆ ಇಂಗ್ಲೀಷ್ ಮಾಧ್ಯಮದಲ್ಲಿ ವಿದ್ಯಾಭ್ಯಾಸ ನಂತರ ಹೆಂದರ್ಗ್ ಶಾಲೆಯಲ್ಲಿ ಕ್ರಿ.ಶ.೧೯೫೫ರಲ್ಲಿ ಎಸ್.ಎಸ್.ಎಲ್.ಸಿ ಪಾಸಾದನೆಂದು ತಿಳಿಸುತ್ತಾರೆ.

ಕ್ರಿ.ಶ.೧೯೬೩ರಲ್ಲಿ ನಾಗಬಸ್ಸಮ್ಮನೊಂದಿಗೆ ವಿವಾಹವಾದರು. ನಂತರ ನ್ಯಾಯಂಗ ಇಲಾಖೆಯಲ್ಲಿ ದ್ವಿತೀಯ ದರ್ಜೆಯ ಸಹಾಯಕರಾಗಿ ಸೇವೆ ಮುಂದವರಿಸಿದರು. ಭಜನೆ ಹಾಡುಗಳನ್ನು ಹಾಡುವ ಹವ್ಯಾಸ ಹೇಗಿತ್ತೆಂದು ಅವರೇ ವಿವರಿಸುವರು. ನಾನು ಅನೇಕ ಗ್ರಾಮಗಳಿಗೆ ಭಜನೆ ಮಾಡಲು ಆಧ್ಯಾತ್ಮಿಕ ತರ್ಕಚಿಂತನೆ ಮಾಡಲು ರಾತ್ರಿ ಹೋಗಿ ಬೆಳಗಾಗುವುದರಲ್ಲಿ ರಾಂಪೂರು ಗ್ರಾಮ ಸೇರಿ ಸೇವೆಗೆ ಹಾಜರಾಗುತ್ತಿದ್ದೆ. ಇದರಿಂದ ನನಗೆ ಆಧ್ಯಾತ್ಮಿಕ ಜೀವನದಲ್ಲಿ ಗಟ್ಟಿಯಾದ ಆಸಕ್ತಿ ಬಂತೆಂದು ಪ್ರಸ್ತಾಪ ಮಾಡುವರು. ರಾಯಚೂರಿನ ಸಾರ್ವಜನಿಕ ಉದ್ಯಾನವನದಲ್ಲಿ 'ಗಣೇಕಲ್ ಮಹಾಂತೇಶರ ಶ್ವೇತಾಶ್ವೇತಾದ' ಉಪನಿಷತ್ತಿನ ಚರ್ಚೆನಡೆದಿತ್ತು. ಭೀಮಣ್ಣನವರ ಗೆಳೆಯ ಹನುಮಂತರಾಯ ಮತ್ತು ಭೀಮಣ್ಣನವರು ಭಾಗವಹಿಸಿದ್ದರು. ಮಹಾಂತೇಶರ ವಾಕ್‌ಚಾತುರ್ಯ ಅರಿತು ಅವರನ್ನು ಗುರುಗಳಾಗಿ ಸ್ವೀಕರಿಸಿದರು.

ಈ ಗುರು ಗಣೇಕಲ್ ಸಂಗವಿಭುವಿನ ಮೊಮ್ಮಗನೆಂದು ಸ್ಪಷ್ಟವಾಗಿದೆ. ಆದರೂ ಗುರುವಿನ ಹಿನ್ನೆಲೆಗೆ ಹೆಚ್ಚಿನ ಆಧಾರಗಳು ಬೇಕಾಗುವುವು. ಮಹಾಂತೇಶರಿಗೆ ೮೦೦ ಜನ ಶಿಷ್ಯರೆಂಬ ಮಾಹಿತಿಯಿದೆ. ಭೀಮಣ್ಣನ ಈ ಹಾಡಿನಲ್ಲಿ

> "ಗುರುವಿನ ನನೆ ಮನವೆ| ನಿತ್ಯದೊಳೊಮ್ಮೆ ಗುರುವಿನ ನೆನೆಯೆನವೆ|
> ಜರಿದು ತೋರುವ ಜಥ ಭಾವವು ತೊರೆದು|
> ಹರಿಯುವ| ಗಂಗಾ ಯಮುನೆಯ ತಡೆದು|"[೩೬]

ವೀರಶೈವ ಸಾಹಿತ್ಯದ ಬಗ್ಗೆ ಅಪಾರ ಜ್ಞಾನ, ಕುರಾನ್, ಬೈಬಲ್ ಗ್ರಂಥಗಳ ಬಗ್ಗೆ ತೌಲನಿಕ ತಿಳುವಳಿಕೆ, ಸನಾತನ ಧರ್ಮದ ಬಗ್ಗೆ ಆಳವಾದ ಅಧ್ಯಯನ, ಉಪನಿಷತ್ತಿನಲ್ಲಿಯ ಕಠಿಣವಾದ ವಿಚಾರಗಳನ್ನು ತಮ್ಮ ತತ್ವಗಳಿಂದ ವಿವರಿಸುವುದನ್ನು ನೋಡಬಹುದು. ಇವರ ಹಾಡುಗಳ ವಿವೇಚನೆ ಹೀಗಿದೆ. ಗುರುಸ್ತುತಿ, ಪಾರಮಾರ್ಥಿಕ ನೀತಿ, ಸಂಸಾರ ಹೇಯ ಸ್ಥಲ, ಜ್ಞಾನಯೋಗಗಳ ಸಮನ್ವಯತೆಗಳನ್ನು ಗುರುತಿಸಬಹುದು. ೪೦ ಹಾಡುಗಳಿವೆ. ಇವು ಅಪ್ರಕಟಿತ ಹಾಡುಗಳಾಗಿವೆ. ಕುಲಜ, ಕುಲಹೀನ ಎನ್ನುವ ಮಾತುಗಳನ್ನು ಭೀಮಣ್ಣನವರು ಉಗ್ರವಾಗಿ ಖಂಡಿಸುವುದನ್ನು ಸ್ಮರಿಸಬಹುದು. ಅಸ್ಪೃಶ್ಯ ಜಾತಿಯಲ್ಲಿ ಹುಟ್ಟಿ, ಅನುಭವಿಸಿದ ನೋವನ್ನು ಪುರೋಹಿತ ವರ್ಗದ ಕೀಳು ಕಲ್ಪನೆಯನ್ನು ತುಚ್ಛೀಕರಿಸಿದ್ದು ಗಮನಾರ್ಹ.

## ೨೬. ಹೊಸೂರು ತಿಪ್ಪಣ್ಣ(ಕ್ರಿ.ಶ.೧೯೪೩)

ಹೊಸೂರು ಗ್ರಾಮದ ದರಗಪ್ಪ ಮತ್ತು ಮಲ್ಲಮ್ಮ ಹರಿಜನರ ದಂಪತಿಗಳಿಗೆ ತಿಪ್ಪಣ್ಣನು ೩-೬-೧೯೪೩ರಲ್ಲಿ ಜನಿಸಿದರು. ಈ ಕುಟುಂಬದ ೫ ಜನ ಮಕ್ಕಳಲ್ಲಿ ಮೊದಲಿಗ ತಿಪ್ಪಣ್ಣರೆಂದು ತಿಳಿದುಬರುತ್ತದೆ. ಬಡತನದಿಂದ ವಿದ್ಯಾಭ್ಯಾಸ ಮುಂದುವರಿಸಲಾಗಲಿಲ್ಲ. ತಂದೆ ರೈಲ್ವೇಗೂಡ್ಸ್‌ನಲ್ಲಿ ಕೆಲಸ ಮಾಡುತ್ತಿದ್ದು ದರಗಪ್ಪನ ಸಂಪಾದನೆ ಮನೆಗೆ ಸಾಕಾಗುತ್ತಿರಲಿಲ್ಲ. ಮುಂದೆ ಇವರ ಸಂಸಾರವು ಬೊಂಬಾಯಿಗೆ ಹೋಗಿ ಅಲ್ಲಿಯೇ ೮, ೧೦ ವರ್ಷ ಜೀವನ ಸಾಗಿಸಿ ಮತ್ತೆ ಪುನಃ ಹೊಸೂರಿಗೆ ಬಂದು ನೆಲೆಸಿದ ಬಗ್ಗೆ ಸ್ವತಃ ತಿಪ್ಪಣ್ಣನವರೇ ಹೇಳುತ್ತಾರೆ.

ತಾಯಿಯ ಸಹಾಯದಿಂದ ಯಕ್ಲಾಸಪುರದಲ್ಲಿ ಶಿಕ್ಷಣ ಪ್ರಾರಂಭವಾಯಿತು. ಮುಂದೆ ರಾಯಚೂರಿನ ಹಾಷ್ಮಿಯಾ ಶಾಲೆಯಲ್ಲಿ ೫ನೇ ತರಗತಿ ಓದಿದರೆಂದು ತಿಳಿದುಬರುತ್ತದೆ. ಇವರ ಚಿಕ್ಕಪ್ಪನಾದ ಬೋಳ ಬಂಡೆಪ್ಪನ ಜೊತೆ ಆಗಾಗ್ಗೆ ಭಜನೆ, ಬಯಲಾಟ ಆಡಲು ಹೋಗುತ್ತಿದ್ದರು. ಚಿಕ್ಕಪ್ಪನ ಗೆಳೆಯನಾದ ಯಲ್ಲಪ್ಪ ಯಕ್ಲಾಸಪುರ ಇವರ ಸಾಮೀಪ್ಯದಿಂದ ಭಜನೆ ಪದಗಳನ್ನು ಹಾಡುವುದು, ನಾಟಕದಲ್ಲಿ ಪಾತ್ರ ಮಾಡುವುದನ್ನು ರೂಢಿಸಿಕೊಂಡರು. ಒಂದು ಸಲ ಯಕ್ಲಾಸಪುರಕ್ಕೆ ಜಹೀರಾಬಾದನ ತಿಪ್ಪಣ್ಣ ತಾತನ ಚಿಕ್ಕಪ್ಪನಾದ ಬೋಳ ಬಂಡೆಪ್ಪ ಅವರ ಗೆಳೆಯ ಯಲ್ಲಪ್ಪನಿಗೆ ದೀಕ್ಷೆ ಕೊಡುವ ಏರ್ಪಾಡಾಗಿತ್ತು. ಇವರಿಬ್ಬರ ಜೊತೆಗೆ ಹೊಸೂರು ತಿಪ್ಪಣ್ಣನವರೂ ದಿಕ್ಷೆ ತೆಗೆದುಕೊಂಡ ಪ್ರಸಂಗ ವಿವರಿಸುತ್ತಾರೆ.

> "ಒಲ್ಲದ ಮನಸ್ಸಿಗೆ ಪರಿ ಪರಿ | ಬೋಧಿಸಿದ |
> ಬಾಲ ಭೋಧೆಯ ನೀಡಿ | ಮೂಲಕ್ಷರವ ತಿಳಿಸಿದ |"

ಎನ್ನುವ ಮಾತು ಮೇಲಿನ ಘಟನೆಗೆ ಪುಷ್ಠಿಯನ್ನು ನೀಡುತ್ತದೆ. ದೀಕ್ಷೆಯ ನಂತರ ಜಹೀರಾಬಾದ ಆಶ್ರಮಕ್ಕೆ ಭೇಟಿ ನೀಡಿ ಆಧ್ಯಾತ್ಮಿಕತೆಯ ಬಗ್ಗೆ ಚರ್ಚಿಸುತ್ತಿದ್ದರೆಂದು ತಿಳಿದುಬರುತ್ತದೆ. ಇದೇ ಸಮಯದಲ್ಲಿ ಹಾಡುಗಳನ್ನು ಬರೆಯಲು ಪ್ರಾರಂಭಿಸಿರಬೇಕು.

ಒಂದು ಸಲ ರಾಜೂರು ಹನುಮೇಶಪ್ಪನು ಜಹೀರಾಬಾದ ತಿಪ್ಪಣ್ಣತಾತನ ಆಶ್ರಮಕ್ಕೆ ಬಂದಿದ್ದರು. ಹೊಸೂರು ತಿಪ್ಪಣ್ಣನವರನ್ನು ಉದ್ದೇಶಿಸಿ ನನ್ನ ಜೊತೆ ನಡೆ ಎಂದು ಅಪ್ಪಣೆ ಮಾಡಿದರು. ನಾನು ತಂದೆ ತಾಯಿಗಳ ಅಪ್ಪಣೆ ಪಡೆದು ಗುರುವಿನ ಜೊತೆ ಯಲಬುರ್ಗಾದಲ್ಲಿ ೫ ವರ್ಷಗಳಿದ್ದೆ ಎಂದು ವಿವರಿಸುವರು. ತಿಪ್ಪಣ್ಣನವರು ಹುಣಿಸ್ಯಾಳು ಹುಡಾದ ಮಾರೆಮ್ಮನ ಜೊತೆ ವಿವಾಹವಾದರು. ಕ್ರಿ.ಶ.೧೯೭೨ರಲ್ಲಿ ಎಚ್.ಎಸ್.ಎಲ್.ಸಿ ಪಾಸು ಮಾಡಿ ಶಿಕ್ಷಕ ವೃತ್ತಿಗೆ ಸೇರಿಕೊಂಡರು. ಮುಂದೆ ೪ ಮಕ್ಕಳು ಇವರಿಗಾದವು. ಆಶ್ರಮ ಪರಿಸರದಲ್ಲಿಯೇ ೫೦ ಹಾಡುಗಳನ್ನು ರಚಿಸಿದರು. ಈ ಪದ್ಯಗಳ ಅಂಕಿತ 'ನವಜಾತಪುರ'ವಾಗಿದ್ದು ಪ್ರತಿ ಹಾಡಿನ ಅಂತ್ಯದಲ್ಲಿ ಗುರುವಿನ ಗುರುವಾದ 'ಹನುಮೇಶ'ನನ್ನು ಸ್ತುತಿಸಿದ್ದು ಕಂಡುಬರುತ್ತದೆ. ಇವರ ಕೆಲ ಪದ್ಯಗಳು ಕೆಳಗೆ ವಿವರಿಸಿದ ಮಾದರಿಯಲ್ಲಿ ಪ್ರಕಟಗೊಂಡಿವೆ.

ಡಾ.ಜಯಶ್ರೀ ಸಬರದರ ಸಂಪಾದನೆಯ 'ಗುರುಶಿಷ್ಯರ' ತತ್ವಪದಗಳು ಇದರಲ್ಲಿ ಕೆಲ ಹಾಡುಗಳು ಪ್ರಕಟಗೊಂಡಿವೆ. ಡಾ. ಕಾಳೇಗೌಡ ನಾಗಾವಾರ, ಜಿ.ವಿ.ಆನಂದ ಮೂರ್ತಿಯವರ ಸಂಪಾದನೆಯಲ್ಲಿ 'ಹಲವು ತೋಟದ ಹೂಗಳು' ಈ ಪುಸ್ತಕದಲ್ಲಿ ಪ್ರಕಟಗೊಂಡದ್ದನ್ನು ಕಾಣಬಹುದು.

ತಿಪ್ಪಣ್ಣನವರ ಹಾಡುಗಳನ್ನು ಯಲಬುರ್ಗಾ ತಾಲೂಕಿನ ಬನ್ನಿಕೊಪ್ಪ, ಬಹದ್ದೂರು ಬಂಡಿ, ರಾಯಚೂರಿನ ಅಲ್ಲಂಪಾಡು ಕಾಲತಿಮ್ಮನ ದೊಡ್ಡಿಯ ಭಜನಾ ಮಂಡಳಿಯಲ್ಲಿ ಹಾಡುವುದನ್ನು ಗುರುತಿಸಬಹುದು. ಶಿಕ್ಷಕರಾಗಿಯೇ ಹಾಷ್ಮಿಯಾ ಶಾಲೆಯಲ್ಲಿ ನಿವೃತ್ತಿ ಹೊಂದಿದರೆಂಬ ವಿವರಗಳು ದೊರಕುವವು.

## ೨೭. ಮಾನಸಗಲ್ ವೆಂಕನಗೌಡರು (ಕ್ರಿ.ಶ.೧೯೪೪)

೧೯ನೇ ಶತಮಾನದ ಆಧುನಿಕ ತತ್ವಪದಕಾರರಲ್ಲಿ ಮಾನಸಗಲ್ ವೆಂಕನಗೌಡರು ಒಬ್ಬರೆಂದು ಗುರುತಿಸಬಹುದು. ವೃತ್ತಿಯಲ್ಲಿ ವ್ಯಾಪಾರಿಗಳಾದರೂ ಪ್ರವೃತ್ತಿಯಲ್ಲಿ ಆಧ್ಯಾತ್ಮಿಗಳಾಗಿದ್ದರು. ರಾಯಚೂರಿನಿಂದ ೮ ಕಿ.ಮೀ. ದೂರದ ಕಡಗಂ ದೊಡ್ಡಿ ಗ್ರಾಮದ ಈಳಿಗ ಜಾತಿಯ ಗಿರೀಂದ್ರಪ್ಪ ಗೌಡ ಮತ್ತು ತಾಯವ್ವನವರ ೨ನೇ ಮಗನಾಗಿ ೯-೯-೧೯೪೪ರಲ್ಲಿ ವೆಂಕಣ್ಣನವರು ಜನಿಸಿದರೆಂದು ತಿಳಿದುಬರುತ್ತದೆ. ಅಜ್ಜಿ ಭೀಮವ್ವ ಸಿದ್ದಾರೂಢ ಸಂಪ್ರದಾಯದವರಾಗಿದ್ದು, ಅಜ್ಜಿಯ ಮಾರ್ಗದರ್ಶನದಿಂದ ಆಧ್ಯಾತ್ಮಿಕ ಜೀವನದ ಸ್ಪಷ್ಟತೆಯನ್ನು ಕಾಣಬಹುದು.

ಈ ಕುಟುಂಬದವರು ರಾಯಚೂರಿನ ಕಾಜಿನ ಗೌಡರ ೫ನೇ ತಲೆಮಾರಿನವರೆಂದು ತಿಳಿದುಬರುವುದು. ಕಡಗಂ ದೊಡ್ಡಿ ಗ್ರಾಮದಿಂದಲೇ ವೆಂಕಣ್ಣನವರ ವಿದ್ಯಾಭ್ಯಾಸ ಶುರು ಮಾಡಿದ ವಿವರ ದೊರಕುವವು. ಮುಂದೆ ರಾಯಚೂರಿನ ಟ್ಯಾಗೋರ್ ಹೈಸ್ಕೂಲಿನಲ್ಲಿ ಆಂಗ್ಲ ಮಾಧ್ಯಮದೊಂದಿಗೆ ವಿದ್ಯಾಭ್ಯಾಸವನ್ನು ಮುಂದುವರಿಸಿದರು. ಮನೆಯಲ್ಲಿ ಮಾತೃಭಾಷೆ ತೆಲುಗಾದರೂ ಸೂಗೂರಯ್ಯ ಶಾಸ್ತ್ರಿಗಳಿಂದ ಕನ್ನಡ

ಭಾಷೆಯನ್ನು ಸಮಗ್ರವಾಗಿ ಕಲಿತ ಉದಾಹರಣೆಗಳುಂಟು. ಸೂಗೂರಯ್ಯ ಶಾಸ್ತ್ರಿಗಳಿಂದ ಆಧ್ಯಾತ್ಮಿಕ ಜೀವನ ಪ್ರೇರಣೆ ಪಡೆಯುತ್ತಾರೆ. ಆ ಸಂದರ್ಭದಲ್ಲಿ ವೀರಶೈವ ಸಿದ್ಧಾಂತ, ರಾಜಶೇಖರ ವಿಳಾಸಗಳನ್ನು ಶಾಸ್ತ್ರಿಗಳಿಂದ ಕಲಿಯುತ್ತಾರೆ.

ಆಂಧ್ರಪ್ರದೇಶದ ಸಿಕಂದ್ರಾಬಾದ್ ಅಚಲ ಪರಿಪೂರ್ಣ, ಪೊನ್ನಲ ರಾಜಯೋಗಿಗಳು ಗದ್ಯಾಲಗೆ ಬಂದಿದ್ದರು. ಅವರ ಅಧ್ಯಾತ್ಮಿಕ ಪ್ರವಚನ ಪ್ರೇರಣೆಯಿಂದ ಪ್ರೇರಿತರಾಗಿ, ಕ್ರಿ.ಶ.೧೯೭೦ರಲ್ಲಿ ಪೊನ್ನಾಲ ರಾಜಯೋಗಿಗಳನ್ನು ಗುರುಗಳಾಗಿ ಸ್ವೀಕರಿಸುತ್ತಾರೆ. ಕ್ರಿ.ಶ.೧೯೭೧ರಲ್ಲಿ ನಿರ್ಮಲಾದೇವಿಯ ಜೊತೆ ವಿವಾಹವಾದರು. ನಾಲ್ಕು ಜನ ಪುತ್ರರೂ ಜನಿಸಿದರು. ಇವರ ಜೀವನ ವಿವರಗಳನ್ನು ನೋಡಿದಾಗ ಬಾಲರಾಮಪ್ಪನ ಮಾರ್ಗದವರೆಂದು ಗುರುತಿಸಬಹುದು.

"ಯಾವ ವರವ ಬೇಡಲಿ ಸದ್ಗುರುವೆ |
ನಿನ್ನ ಯಾವ ವರವ ಬೇಡಲಿ |
ಆ ವರ ಈ ವರ ಯಾ ವರ |
ಬೇಡಿದರೂ ಆವರಣವ ಮರಳಿ |
ಆವರಿಸುವುದೆನ್ನ"[೩೭]

ವೆಂಕಟನಗೌಡರು ಹಾಡಿದ ಈ ಹಾಡು ಮೇಲಿನ ಮಾತಿಗೆ ಪುಷ್ಟಿ ಒದಗಿಸುತ್ತದೆ. ವೆಂಕಣ್ಣನವರು ೫೦ಕ್ಕೂ ಹೆಚ್ಚು ತತ್ವಪದಗಳನ್ನು ಬರೆದಿರುವರು. ೩೦ ಕನ್ನಡ ಹಾಡುಗಳಿವೆ. ೨೦ ತೆಲುಗು ಹಾಡುಗಳಿವೆ. ಗುರುಸ್ತುತಿಯ ಹಾಡುಗಳು ಹೆಚ್ಚಾಗಿವೆ. ಇವರ ಹಾಡುಗಳ ಅಂಕಿತ 'ದಯಾನಂದ ಪೊನ್ನಾಲ ರಾಜಯೋಗಿ' ಎಂದು ಬಳಸಿದ್ದನ್ನು ಗುರುತಿಸಬಹುದು. ಕೆಲ ಹಾಡುಗಳು ಪ್ರಕಟಗೊಂಡಿವೆ. 'ಅಚಲ' ಸಂಪ್ರದಾಯದ ಮೂಲ ಪುರುಷ 'ಶಿವರಾಂ ದೀಕ್ಷಿತ'ರೆಂದು ವಿವರಿಸುವರು. ಅಚಲ ಸಿದ್ಧಾಂತದ ಮಾಹಿತಿಯನ್ನು ಹೀಗೆ ಕೊಡುವರು.

"ಅಶರೀರಂ ಸರ್ವದಾ ಅಸ್ತಿ | ಶರೀರಂ ರಹಿತಂ ಸದಾ
ಅಯಿಮೇವ ಸದ್ಯೋಮುಕ್ತಿ | ಅನ್ಯಯಥಾ ಭ್ರಮಕಾರಣಂ
ವಿದ್ಯಾಂತಂ ಬ್ರಹ್ಮ | ವಿದ್ಯಾವಂತ ವಾರ್ಧಿಕಾಂತ
ಅಗೋಚರಂ| ಪರಿಪೂರ್ಣಬೋಧ | ಪ್ರವಕ್ಷಮಾಮಿ ಶೃಣು
ಶಿಷ್ಯಂ ಮಹೋತ್ತಮಮ್"

ಋಗ್ವೇದದಲ್ಲಿ ಪ್ರಜ್ಞಾಸಾರ, ಬ್ರಹ್ಮಸಾಕ್ಷಾತ್ಕಾರ ವಾಕ್ಯ, ಯಜುರ್ವೇದದಲ್ಲಿ ಅಹಂಬ್ರಹ್ಮಾಸ್ಮಿ, ಅನುಭವ ವಾಕ್ಯ, ಸಾಮವೇದದಲ್ಲಿ ತತ್ವಮಸಿ, ಉಪದೇಶ ವಾಕ್ಯ, ಅಥರ್ವಣವೇದದಲ್ಲಿ ಅಯಿಮಾತ್ಮ ಬ್ರಹ್ಮ ಸಮಾಪ್ತಿಯಾಗಿರುವುದೇ ಅಚಲ ಪರಿಪೂರ್ಣ ಸಿದ್ಧಾಂತ. ಈ ಸಿದ್ಧಾಂತದ ನಿಲುಮೆ ಅದು ಬೆಳಕೂ

ಅಲ್ಲ, ಕತ್ತಲೂ ಅಲ್ಲ, ಮರಿವೂ ಅಲ್ಲ, ಅರಿವೂ ಅಲ್ಲ. ಇದು ಅಚಲ ಸಿದ್ಧಾಂತವೆಂದು ವೆಂಕಣ್ಣನವರು ತರ್ಕಿಸಿದ್ದಾರೆ. ತೆಲುಗಿನಲ್ಲಿ 'ಎರಕ' ರಹಿತ ಸಿದ್ಧಾಂತವೆನ್ನುವರು.[೩೮]

ಕ್ರಿ.ಶ.೧೯೮೭ರಲ್ಲಿ ಗುರುಗಳು ಕೊನೆಯಾದರು. ಮುಂದೆ ರಾಯಚೂರಿ ಗದ್ವಾಲ ರಸ್ತೆಯಲ್ಲಿರುವ ರಾಜಯೋಗಿ ಆಶ್ರಮಕ್ಕೆ ಕ್ರಿ.ಶ.೧೯೯೧ರಲ್ಲಿ ವೆಂಕನಗೌಡರು ಗುರುವಾದರು. ತಮಗೆ ೧೦೦ ಜನ ಶಿಷ್ಯರಿದ್ದ ಮಾಹಿತಿ ಕೊಡುವರು. ಪ್ರತಿ ಅಮಾವಾಸ್ಯೆಗೆ, ಹುಣ್ಣಿಮೆಗೆ ಕೆಲ ವಿಶೇಷ ದಿನಗಳಂದು ಆಧ್ಯಾತ್ಮಿಕ ತರ್ಕ ತತ್ವಪದಗಳೊಂದಿಗೆ ಭಜನೆ ಮಾಡುವುದನ್ನು ಸ್ಮರಿಸಬಹುದು. ಮಾಘಶುದ್ಧ ಏದಶಿಮಿಯೆಂದು, ತಮ್ಮ ಗುರುಗಳ ಪಾದುಕೆಗಳನ್ನಿಟ್ಟು ಪೂಜಿಸುವುದನ್ನು ಕಾಣಬಹುದು. ಇವರ ಕೃತಿಗಳು ೧. ಸಾಂಪ್ರದಾಯಿಕ ಪರಿಪೂರ್ಣ ಪ್ರಭೋಧಿನಿ, ೨. ತತ್ವಪೂರಿತ ಹಾಡುಗಳು ಗುರುಗಳ ಮೇಲೆ ೩. ದೇವಸೂಗೂರು ಪುರಾಣವನ್ನು ತೆಲುಗು ಭಾಷೆಯಲ್ಲಿ ಅನುವಾದಿಸಿದ್ದಾರೆ. ಅದರ ಶೀರ್ಷಿಕೆ ಹೀಗಿದೆ. ಶ್ರೀ ವೀರಭದ್ರ ವಿಜಯಂಬುನು ದೇವಸೂಗುರೇಶ್ವರ ಚರಿತಾಮೃತಮಂ, ೪. ರಾಜಯೋಗಿ ನಿಜ ಪ್ರಬೋಧ ವಿಧಾನಮು

ಇವೆಲ್ಲಾ ಪ್ರಕಟಿತ ಗ್ರಂಥಗಳಾಗಿವೆ. ವೆಂಕಣ್ಣನವರ ಸಾಹಿತ್ಯವು ಸಮಕಾಲೀನ ಹಿರಿಯ ತತ್ವಪದಕಾರರ ನೀತಿ ಒಳಗೊಂಡಿದ್ದರೆ ಇವರ ಹೇಳಿಕೆಯಲ್ಲಿ ಸ್ವಂತಿಕೆಯ ಅನುಭೂತಿ ಕೃತಾರ್ಥತೆ ಅಡಗಿದ್ದನ್ನು ಗಮನಿಸಬಹುದು.

## ೨೮. ಹುಲ್ಲೂರು ಶಿವಣ್ಣ (ಕ್ರಿ.ಶ.೧೯೫೬)

ಜನಪರ ಕವಿಯಾಗಿ ತರ್ಕಬದ್ಧ ವಿಚಾರಗಳನ್ನು ತಮ್ಮ ಬರವಣಿಗೆಯಲ್ಲಿ ತೋರಿಸಿದ ಮುಖ್ಯ ತತ್ವಪದಕಾರ ಹುಲ್ಲೂರು ಶಿವಣ್ಣ. ಸಿಂಧನೂರು ತಾಲೂಕಿನ ಹುಲ್ಲೂರು ಗ್ರಾಮದ ಕುರುಬ ಜಾತಿಯ ಸಿದ್ದಣ್ಣ ಹಾಗೂ ಅಮರಮ್ಮ ದಂಪತಿಗಳಿಗೆ ಕ್ರಿ.ಶ. ೬-೧-೧೯೫೬ರಲ್ಲಿ ಶಿವಣ್ಣನವರು ಜನಿಸಿದರು. ಮುಂದೆ ಇವರ ವಿದ್ಯಾಭ್ಯಾಸವು ಗುಡದಿನ್ನಿ, ಬಳಗಾನೂರಿನಲ್ಲಿ ೧೦ನೇ ತರಗತಿಯವರೆಗೆ ಅಭ್ಯಾಸ ಮಾಡಿದೆ ಎಂದು ಹೇಳುವರು.

ತಾತ ಗುಂಡಪ್ಪನವರು ಆಧ್ಯಾತ್ಮಿಕ ಒಲವುಳ್ಳವರಾಗಿದ್ದರು. ತಾತನವರ ಪ್ರೇರಣೆಯಿಂದ ಶಿವಣ್ಣನವರು ತಮ್ಮ ಜೀವನದಲ್ಲಿ ಶ್ರದ್ಧೆ ಭಕ್ತಿ ಅಳವಡಿಸಿಕೊಂಡು ೧೫, ೧೬ನೇ ವಯಸ್ಸಿನಲ್ಲಿ ಕವನ, ನಾಟಕಗಳನ್ನು ಓದುವ ಬರೆಯುವ ಹವ್ಯಾಸ ಬೆಳೆಸಿಕೊಂಡರು. ಕ್ರಿ.ಶ.೧೯೮೫ರಲ್ಲಿ 'ಪುಂಡಗೌಡ ಪುಡಾರಿಗೆಳೆಯ' ನಾಟಕ ಬರೆದರು. ನಂತರ ಆಧ್ಯಾತ್ಮದ ಕಡೆಗೆ ಒಲವು ಹೆಚ್ಚಾಗಿ ಕುಷ್ಟಗಿ ತಾಲೂಕಿನ ಹಿರೇಮನ್ನಾಪುರ ಗ್ರಾಮದ 'ಮಲ್ಲಿನಾಥಶರಣ'ರಿಂದ ದೀಕ್ಷೆ ಪಡೆದು ಗುರುವಾಗಿ ಸ್ವೀಕರಿಸಿದರು.

ಮುಂದೆ ಅಂಬಮ್ಮನೊಂದಿಗೆ ವಿವಾಹವಾದರು. ಆಧ್ಯಾತ್ಮಿಕ ಜೀವನದೊಂದಿಗೆ ಸಂಸಾರ ನಿರ್ವಹಣೆ, ಕಿರಾಣಿ ವ್ಯಾಪಾರವನ್ನು ಕಾಯಕವಾಗಿ ಸ್ವೀಕರಿಸಿದರು. ವಚನ ಗಾಯನದೊಂದಿಗೆ ತತ್ವಪದಗಳನ್ನು ಬರೆಯುವ ಹವ್ಯಾಸ ಬೆಳೆಸಿಕೊಂಡು ಉತ್ತಮ ತತ್ವಪದ ಹಾಡುಗಾರರಾಗಿ ಹೊರ ಹೊಮ್ಮಿದರು. ''ಗೋಷ್ಟಿಗೆ ಬನ್ನಿರಿ| ನೇಷ್ಟಿಕರೆ| ಸದ್ಗುರುವಿನ ಪಾದ ಸನ್ನಿದಿಗೆ ಮಂಗಳ ಮೂರ್ತಿಯ ಮನವ ತಲುಪಿರಿ| ಅಂಗ ಚೇಷ್ಟೆಯ ಕಳೆದು|'' ಎಂಬ ಪದ್ಯವನ್ನು ನೋಡಬಹುದು. ಇವರ ತತ್ವಪದಗಳ ಸಂಖ್ಯೆಯ ೧೪೪. ''ಮಲ್ಲಿನಾಥ'' 'ಪುರದೇಶ', 'ಹುಲ್ಲೂರೇಶ' ಎಂಬ ಅಂಕಿತದೊಂದಿಗೆ ರಚಿಸಿದ್ದನ್ನು ಕಾಣಬಹುದು. ಇವೆಲ್ಲಾ ಅಪ್ರಕಟಿತ ಹಾಡುಗಳಾಗಿವೆ. ಈ ಪದ್ಯಗಳ ನೀತಿ, ಬೋಧೆಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸಿರುವುದನ್ನು ಕಾಣಬಹುದು. ಅವರು ರಚಿಸಿದ ಕೃತಿಗಳೆಂದರೆ,

೧. ಶರಣಾರ್ಥಿ ಶತಕ - (ಪ್ರಕಟಿತ), ೨. ಹುಲ್ಲೂರು ಶರಭಯ್ಯ ಸ್ವಾಮಿಯ ಭಕ್ತಿ ಗೀತೆಗಳು - (ಪ್ರಕಟಿತ), ೩. ಮಲ್ಲಿನಾಥ ಪುರದ ಮಹಾ ಬೆಳಗು ಚರಿತ್ರೆ (ಅಪ್ರಕಟಿತ), ೪. ಸೂಕ್ತಿ ಸುಧಾ (ಅಪ್ರಕಟಿತ) ೫. ಪುಂಡ ಗೌಡ ಪುಡಾರಿಗೆಳೆಯ (ಪ್ರಕಟಿತ), ೬. ಮೀಸೆ ಬಂದ ಹುಡುಗಿ - (ಅಪ್ರಕಟಿತ)

ಕೆಲ ಬಿಡಿ ಲೇಖನಗಳು ಬಸವ ಪಥ, ಪರಂಜ್ಯೋತಿ, ರಾಯಚೂರು ವಾಣಿ ಪತ್ರಿಕೆಯಲ್ಲಿ ಪ್ರಕಟಗೊಂಡದ್ದನ್ನು ನೋಡಬಹುದು. ಗುರುಪರಂಪರೆಗೆ ಸಂಬಂಧಿಸಿದಂತೆ ನೋಡುವುದಾದರೆ ಗುಡೂದೂರಿನ ದೊಡ್ಡ ಬಸವಾರ್ಯರು, ಬಾಲಪ್ಪಜ್ಯನವರು, ಮಲ್ಲಿನಾಥ ಶರಣರು, ಹುಲ್ಲೂರು ಶಿವಣ್ಣನವರು ಇವರಿಗೆ ಶಿಷ್ಯ ಪರಂಪರೆ ಇಲ್ಲ. ಹುಲ್ಲೂರು ಅಮರಗುಂಡಪ್ಪನವರು ಗೆಳೆಯರಾಗಿ ಇವರ ಮಾರ್ಗದರ್ಶನದಿಂದ ತತ್ವಪದಕಾರರೆಂದು ಗುರುತಿಸಿಕೊಂಡಿದ್ದಾರೆ.

## ೨೯. ಅಮರ ಗುಂಡಪ್ಪ ಹೂಗಾರ (ಕ್ರಿ.ಶ.೧೯೫೮)

ವೃತ್ತಿಯಲ್ಲಿ ಪುರೋಹಿತರಾಗಿ, ಅಧ್ಯಾತ್ಮಿಗಳಾದ ಅಮರ ಗುಂಡಪ್ಪನವರು ರಾಯಚೂರು ಜಿಲ್ಲೆಯ ಜನರಿಗೆ ಅಪರಿಚಿತರೆಂದು ಕಂಡುಬರುತ್ತದೆ. 'ಅದ್ವೈತಾನಂದ', 'ಹುಲ್ಲೂರೇಶ' ಅಂಕಿತಗಳಿಂದ ತತ್ವಪದಗಳನ್ನು ಬರೆಯಲು ಪ್ರಾರಂಭಿಸಿದರು.

ಸಿಂಧನೂರು ತಾಲೂಕಿನ ಹುಲ್ಲೂರು ಗ್ರಾಮದ ಹೂಗಾರ ಮನೆತನದ ದೇವೇಂದ್ರಪ್ಪ ನೀಲಮ್ಮ ದಂಪತಿಗಳಿಗೆ ಕ್ರಿ.ಶ. ೧-೬-೧೯೫೮ರಲ್ಲಿ ೩ನೆಯ ಮಗಮನಾಗಿ ಅಮರಗುಂಡಪ್ಪ ಜನಿಸಿದರು. ಇವರು ಊರಿನ ಮಾರುತಿ ದೇವರ ಪೌರೋಹಿತ್ಯ ಮಾಡುತ್ತಿದ್ದು, ದೇವಿಯ ಆರಾಧಕರಾಗಿದ್ದಾರೆ. ಇವರ ವಿದ್ಯಾಭ್ಯಾಸವು ೮ನೇ ತರಗತಿಯವರೆಗೆ ಹುಲ್ಲೂರು, ಬಳಗಾನೂರುಗಳಲ್ಲಿ ಆಗಿದೆ. ಕೃಷಿ ಕಾಯಕದೊಂದಿಗೆ ಸಂತೃಪ್ತ ಜೀವನ ನಡೆಸಿದ್ದಾರೆ. ಶಂಕ್ರಮಮ್ಮನೊಂದಿಗೆ ವಿವಾಹವಾಗಿ ೪ ಗಂಡು ೧ ಹೆಣ್ಣು ಮಗುವಿನೊಂದಿಗೆ ಹುಲ್ಲೂರು ಗ್ರಾಮದಲ್ಲಿ ಸಂಸಾರ ನಡೆಸುತ್ತಿದ್ದಾರೆ. ಯಾದಗಿರಿ ತಾಲೂಕಿನ ಶೆಟ್ಟಿಹಳ್ಳಿಯ

‘ಶ್ರೀ ಅದ್ವೇತಾನಂದ ಮಹಾ ಸ್ವಾಮಿಗಳಿಂದ’ ದೀಕ್ಷೆ ಪಡೆದು ತತ್ವಪದಗಳನ್ನು ಬರೆಯಲು ಪ್ರಾರಂಭಿಸಿದರು.

> “ಗುರು ಪುತ್ರರಾಗೋಣ ಬನ್ನಿರೋ |
> ಬೇಗನೆ ಪರಮ ಗುರುವಿನ ಕರುಣೆಯ ಪಡೆದು |
> ಪರಭವದ ದುಃಖವ ನೀಗಲು ನಾವು|

ಎಂಬ ಇವರದೇ ಹಾಡನ್ನು ನೋಡಬಹುದು. ಇನ್ನೊಂದು ಪದ್ಯದಲ್ಲಿ

> “ಕೂಲಿ ಮಾಡಿ ಕಳೆಯಣ್ಣಾ|
> ಈ ಕರ್ಮ ಭೂಮಿಯಲ್ಲಿ|”[೩೯]

ಎನ್ನುವ ಹಾಡು ಬಡವರ ಸಂಕಷ್ಟವನ್ನು ಹೇಳುತ್ತ ವರ್ತಮಾನದ ಬದುಕಿನ ಒತ್ತಾಸೆಯನ್ನು ಕಟ್ಟಿಕೊಡುತ್ತದೆ. ಶಿವಕಾಯಕವಿಲ್ಲದೆ ಕಾಯವೇಕಣ್ಣಾ. ಶಿವಕಾರ್ಯವ ಮಾಡಣ್ಣಾ ಎನ್ನುವಂಥಾ ಭಿನ್ನ ದಾಟಿಯ ಹಾಡುಗಳ ಮೂಲಕ ದೇವೀ ಸ್ವರೂಪದ ಮತ್ತು ವಚನಕಾರರ ಕಾಯಕದ ಮಹತ್ವವನ್ನು ಕುರಿತು ಆ ಮಾದರಿಯಲ್ಲಿ ಆಧುನಿಕದ ಸಂದರ್ಭಕ್ಕೆ ತಕ್ಕ ಹಾಗೆ ಹಾಡಿದ್ದಾರೆ.

ಸಿದ್ಧಾರೂಢ ಸಂಪ್ರದಾಯದವರೆಂದು ಹೇಳುವ ಇವರು ಬಳಗಾನೂರು, ಉಟಕನೂರು, ಹುಲ್ಲೂರು ಗ್ರಾಮದಲ್ಲಿ ಪ್ರತಿ ಅಮಾವಾಸ್ಯೆ ಹುಣ್ಣಿಮೆ ದಿನದಂದು ಆಧ್ಯಾತ್ಮಿಕ ಗೋಷ್ಠಿ ನಡೆಸುತ್ತಿರುವದುಂಟು. ಹುಲ್ಲೂರು ಶಿವಣ್ಣನವರ ಮಾರ್ಗದರ್ಶನದಿಂದ, ತತ್ವಪದಗಳನ್ನು ಬರೆಯುವ ಶ್ರದ್ಧೆ ಮತ್ತು ನಿಷ್ಠೆಯು ನನಗಾಯಿತೆಂದು ಹೇಳುತ್ತಾರೆ. ಇವರ ಒಟ್ಟು ತತ್ವಪದಗಳು ೪೦ (ಪ್ರಕಟಿತ) ವಚನಗಳು ೧೪೦ - (ಪ್ರಕಟಿತ), ನುಡಿಮುತ್ತುಗಳು ೩೦೦- (ಅಪ್ರಕಟಿತ), ‘ಚಿನ್ನೂರು’ ಪ್ರಕಾಶನ ಸಿಂಧನೂರು ಇವರಿಂದ ವಚನಗಳು ಪ್ರಕಟವಾಗಿವೆ. ಅಮರ ಗುಂಡಪ್ಪನವರ ಪದ್ಯಗಳಲ್ಲಿ ಕಂಡುಬರುವ ಸಾಂಸಾರಿಕ ತೊಳಲಾಟ, ಸಮಾಜದಲ್ಲಿಯ ಡಾಂಭಿಕತೆ, ನೀತಿ ಸಂಹಿತೆಗಳು ಇರುವುದನ್ನು ಕಾಣಬಹುದು.

### ೩೦. ಕೊರ್ವಿಹಾಳ ಕಬೀರ(ಕ್ರಿ.ಶ.೧೯೭೪)

ಮಂಜರ್ಲಾ ಖಾದರ್ ಸಾಬ್‌ನ ಪ್ರೇರಣೆಯಿಂದ ಕೊರ್ವಿಹಾಳ ಕಬೀರನು ತತ್ವಪದಗಳನ್ನು ಬರೆಯಲು ಆರಂಭಿಸಿದರು. ರಾಯಚೂರಿಗೆ ೧೫ ಕಿ.ಮೀ. ದೂರದ ಕೊರ್ವಿಹಾಳ ಗ್ರಾಮದ ಮುಸ್ಲಿಂ ಜನಾಂಗದ ಹುಸೇನಸಾಬ್ ಮತ್ತು ಹುಸೇನಬಿ ದಂಪತಿಗಳಿಗೆ ಕ್ರಿ.ಶ.೧೯೭೪ರಲ್ಲಿ ಹುಟ್ಟಿದ ೪ನೇ ಮಗನೇ ಕಬೀರ. ಕಬೀರನಿಗೆ ಬಾಬು, ಹಸನಾಬಿ, ಬಶೀರ್‌ರೆಂಬ ಸಹೋದರರು, ಸಹೋದರಿಯರು ಇದ್ದರು. ಮನೆ ವೃತ್ತಿ ಬಳೆ ವ್ಯಾಪಾರ ಮತ್ತು ಕಿರಾಣಿ ವ್ಯಾಪಾರವಾಗಿದೆ. ಕಬೀರನಿಗೆ ಕನ್ನಡ ಭಾಷೆಯ ತಿಳುವಳಿಕೆಯಿಲ್ಲದ ಸಮಯದಲ್ಲಿ ಕಬ್ಬೇರ ಬಸ್ಸಣ್ಣ ಅಕ್ಷರ ಕಲಿಸಿದ ಗುರು. ಇದರಿಂದಾಗಿ ಇವರು ಶಾಲೆಗೆ ಹೋಗದೆ ಕನ್ನಡದಲ್ಲಿ ಬರೆಯುವುದನ್ನು ಓದುವುದನ್ನು ರೂಢಿಸಿಕೊಂಡರೆಂಬುದು ಗಮನಾರ್ಹ.

ಮಂಜರ್ಲಾ ಖಾದರ್ ಸಾಬ್ ಸೋದರಮಾವನಾಗಿದ್ದು, ನನಗೆ ಮಾವನ ಪ್ರೇರಣೆಯ ವಿವರವನ್ನು ಹೀಗೆ ವ್ಯಕ್ತಪಡಿಸಿದರು.

"ಒಂದುಸಲ ಕನಸಿನಲ್ಲಿ ಖಾದರ್ ಸಾಬ್ ಬಂದು ನೀನು ತತ್ವಪದಗಳನ್ನು ಬರೆ, ನನ್ನ ಆಶೀರ್ವಾದ ನಿನಗೆ ಸದಾ ಇರುತ್ತದೆ ಎಂದು ಹೇಳಿ ನನ್ನ ತಲೆಯ ಮೇಲೆ ಹಸ್ತವಿಟ್ಟಂತಾಯಿತು." ಮುಂದೆ ಖಾದರ್ ಸಾಬ್‌ನ ಹೆಂಡತಿ ಮೆಹಬೂಬ್ ಬೀ ಇವರ ಆಶೀರ್ವಾದದಿಂದ ತತ್ವಪದಗಳನ್ನು ಬರೆಯಲು ಪ್ರಾರಂಭಿಸಿದರು. ಶ್ರೀರಾಮಚಂದ್ರನ ಮೇಲೆ ಭಕ್ತಿಪೂರ್ವಕವಾಗಿ "ಭಜಮಾನಸ ದೇವಂ ಭಜಿರೆ| ಭಜಮಾನಸ ದೇವಂ|" ಎಂಬ ಹಾಡನ್ನು ಪ್ರಪ್ರಥಮವಾಗಿ ಬರೆದೆ ಎಂದು ಹೆಮ್ಮೆ ಪಡುವರು.

ಗುರು ಪತ್ನಿಯ ಆಶೀರ್ವಾದದಿಂದ 'ಖಾದರ್ ಪ್ರಭು' ಅಂಕಿತ ಬಳಸಿಕೊಂಡು ತತ್ವಪದಗಳನ್ನು ಬರೆಯುತ್ತಾರೆ. ವಚನಗಾಯನ, ಭಜನೆ ಹಾಡುಗಳನ್ನು ತಾಳ, ಲಯ ಬದ್ದವಾಗಿ ನಿಷ್ಠೆಯಿಂದ ಹಾಡುವ, ಡೋಲಕ್ ಬಾರಿಸುವ ಪರಿಯನ್ನು ನೋಡಬಹುದು. ಪದ್ಯಗಳ ಅನುಭವದ ಅನ್ವೇಷಣೆ ಹೆಚ್ಚಿದಂತೆಲ್ಲ ಹಿಂದಿ ಮತ್ತು ತೆಲುಗು ಹಾಡುಗಳನ್ನು ಬರೆದಿರುವರು. ಇವರು ಬರೆದ ೧೦೦ ಹಾಡುಗಳಿವೆ. ಇವೆಲ್ಲಾ ಅಪ್ರಕಟಿತ ಹಾಡುಗಳಾಗಿವೆ.

'ಇದಿ ಮಂಚಿಜನ್ಮ ನರುಡಾ|' ಎಂಬ ತೆಲುಗು ತತ್ವಪದ, 'ಅಲ್ಲಾsss ತೂ ರೆಹಮ್ ಕರನಾ|' ಮುಂತಾದ ಹಿಂದಿ ಹಾಡುಗಳನ್ನು ಬರೆದಿದ್ದಾರೆ. ತೆಲುಗು ಭಾಷೆಯ ಹಾಡಿನಲ್ಲಿ 'ಖಾದರ್ ದಾಸ್' ಅಂಕಿತ, ಹಿಂದಿ ಪದ್ಯಗಳಲ್ಲಿ 'ಖಾದರ್ ವಲಿ'ಎಂಬ ಅಂಕಿತಗಳನ್ನು ಬಳಸಿದ್ದಾರೆ.

ಬಡತನದೊಂದಿಗೆ ಮಕ್ಕಳಿಗೆ ಮನೆಪಾಠ ಹೇಳುವ, ಆಧ್ಯಾತ್ಮಿಕ ಜೀವನ ರೂಢಿಸಿಕೊಂಡದ್ದನ್ನು ಸ್ಮರಿಸಬಹುದು. ಚಿತ್ರಕಲೆಯೊಂದಿಗೆ ರಾಗ ಸ್ವರವಿಲ್ಲದೇ ಬಾಯಿಯಿಂದಲೇ ಡೋಲಕ್ ನಂತೆ ಸಂಗೀತ ಹೊರಡಿಸಬಲ್ಲ ಕುಶಾಲಮತಿ. ಶಿವಾದ್ವೈತ ಎಂದು ಹೇಳುವ ಕಬೀರ ಮುಸ್ಲಿಂನಾದರೂ ವೀರಶೈವ ಧರ್ಮವನ್ನು ತಿರಸ್ಕರಿಸಿಲ್ಲ. ಯಾವುದೇ ಗುರು ಸಂಪ್ರದಾಯಕ್ಕೆ ಬದ್ದನಾಗದೇ ಕೊರ್ವಿಹಾಳ ಭಜನಿ ತಂಡದವರಿಂದ ಅನೇಕ ಊರುಗಳಿಗೆ ಸಂಚರಿಸುವ ಕಾಯಕ ರೂಢಿಸಿಕೊಂಡರು. ಗುರು ಸಂಪ್ರದಾಯದ ಪ್ರಚಾರಕರಾಗಿದ್ದಾರೆ. ಆದರೆ ಶಿಷ್ಯ ಪರಂಪರೆಗೆ ಬದ್ಧರಾದ ಹಾಗೆ ಕಾಣುವುದಿಲ್ಲ. ಜಾತಿ, ಮತ, ಪಂಥವೆನ್ನದೇ ಭಾವೈಕ್ಯತೆಯೊಂದಿಗೆ ಬದುಕಿದ್ದರು. ಇವರು ಅವಿವಾಹಿತರಾಗಿದ್ದರು.

ಮೇಲೆ ವಿರಿಸಿದ ೩೦ ತತ್ವಪದಕಾರರ ವೈವಿಧ್ಯಮಯ ಪ್ರದೇಶ, ಗುರುಪರಂಪರೆ, ಸ್ವಭಾವಗಳ ಹಿನ್ನೆಲೆಯನ್ನು ಪಡೆದಿದ್ದಾರೆ. ಇವರ ಭಕ್ತಿಯ ಅನುಭೂತಿಗಳು ಅಭಿವ್ಯಕ್ತಿಗಳಾಗಿ ತತ್ವಪದ ಸಾಹಿತ್ಯದಲ್ಲಿ ಪ್ರಧಾನವಾಗಿ ಗುರುತಿಸಿಕೊಂಡಿವೆ. ಈ ೩೦ ಜನ ತತ್ವಪದಕಾರರೂ ಮಾನವ ಕಲ್ಯಾಣಕ್ಕಾಗಿಯೇ

ದುಡಿದಿದ್ದಾರೆ. ಆದರೂ ನನ್ನ ಅಧ್ಯಯನದ ದೃಷ್ಟಿಯಿಂದಾಗಿ, ಒಟ್ಟು ತತ್ವಪದಕಾರರ ಕಾಲಮಾನ ಹಾಗೂ ಪರಂಪರೆ ದೃಷ್ಟಿಯಿಂದ ವಿಂಗಡಿಸಿ ನೋಡುವ ಪ್ರಯತ್ನ ಮಾಡಿದ್ದೇನೆ.

೧. ಕೂಡಲೂರು ಬಸವಲಿಂಗರು ಕ್ರಿ.ಶ.೧೭೭೦ - ೧೮೫೦

೨. ಗೂಗಲ್ಲು ಪರಪ್ಪಯ್ಯ ಕ್ರಿ.ಶ.೧೭೮೦ - ೧೮೫೦

೩. ಗೊಬ್ಬೂರು ಹಂಪಣ್ಣ ಕ್ರಿ.ಶ.೧೭೯೩ - ೧೮೭೮

೪. ನೀರಲಕೇರಿ ಬಸವಲಿಂಗಪ್ಪ ಕ್ರಿ.ಶ.೧೮೧೨ - ೧೮೭೨

೫. ಘನಮಠ ನಾಗಭೂಷಣ ಕ್ರಿ.ಶ.೧೮೦೮ - ೧೮೮೦

೬. ಅರವಲಿ ಬಿಜಲಿ ವಸ್ತಾದ ಕ್ರಿ.ಶ.೧೮೪೦ - ೧೯೦೦

೭. ಬಾಲರಾಮಪ್ಪ ಕ್ರಿ.ಶ.೧೮೪೨- ೧೮೯೭

೮. ವೆಂಕಟಾಪೂರ ಖೇಮಣ್ಣ ಕ್ರಿ.ಶ.೧೮೫೦ - ೧೯೨೫

ಕೂಡಲೂರು ಬಸವಲಿಂಗಪ್ಪನಿಂದ ವೆಂಕಟಾಪೂರ ಖೇಮಣ್ಣನ ಕಾಲದ ತತ್ವಪದಕಾರರು. ಶೈವತ್ವದಿಂದ ವೀರಶೈವಕ್ಕೆ ವಾಲಿ ಶಿವತತ್ವವನ್ನು ತಮ್ಮ ಹಾಡುಗಳಲ್ಲಿ ನಿರೂಪಿಸಿದರು. ತಮ್ಮದೇ ಆದಂಥ ವಿರಕ್ತ ಮಠಗಳಲ್ಲಿ ಮೋಕ್ಷದ ಬಗ್ಗೆ ಪಾರಮಾರ್ಥಿಕತೆಯ ಬಗ್ಗೆ ವಿವರಿಸುತ್ತಿದ್ದರು. ಭಕ್ತಿ, ಶ್ರದ್ಧೆ, ದೇವರ ಬಗ್ಗೆ ನಂಬುಗೆ, ನಿಷ್ಠೆಯಿಂದಿರಬೇಕೆಂಬ ನೀತಿಯೊಂದಿಗೆ ತಿಳಿಹೇಳುತ್ತಿದ್ದರು. ಅಂತರಂಗದ ಆತ್ಮವಿಕಾಸದ ಬಗ್ಗೆ ಬಹಿರಂಗ ಲೋಕದ ತತ್ವವನ್ನು ಜನರಿಗೆ ಅರಿವು ಮಾಡುತ್ತಿದ್ದರು. ಇವರಿಗೆ ಗುರು ಪ್ರಧಾನವಾಗಿ "ಹರ ಮನಿದರೆ ಗುರು ಕಾಯ್ವನು ಹರನಿಗೆ ಅತ್ಯಧಿಕ ಶಾಶ್ವತ ಗುರು" ಎನ್ನುವ ಮೌಲ್ಯವನ್ನು ಆ ಕಾಲದಲ್ಲಿ ಇವರು ಹುಟ್ಟು ಹಾಕಿದರು. ತಮ್ಮ ಯೋಗಿ ಬದುಕಿನಿಂದ ಶಕ್ತಿ ದೇವತೆಯ ಉಪಾಸನೆಯನ್ನು ತಮ್ಮ ಹಾಡುಗಳಲ್ಲಿ ಅಭಿವ್ಯಕ್ತಿಸಿದರು. ಸದಾ ಸಂಚಾರಿಗಳಾಗಿ ಲೋಕೋದ್ಧಾರಕ್ಕಾಗಿ ತಮ್ಮನ್ನು ಅರ್ಪಿಸಿಕೊಂಡವರು ಈ ಕಾಲದ ತತ್ವಪದಕಾರರು.

೯. ದೇವದುರ್ಗ ಚೆನ್ನಮಲ್ಲ - ಕ್ರಿ.ಶ.೧೮೫೦ ರಿಂದ ೧೯೨೦

೧೦. ಅಯ್ಯಪ್ಪ ಪಂಥೋಜಿ - ಕ್ರಿ.ಶ.೧೮೫೨ ರಿಂದ ೧೯೨೮

೧೧. ತಾಳಪಲ್ಲಿ ವೆಂಕಯ್ಯ - ಕ್ರಿ.ಶ.೧೮೫೮ ರಿಂದ ೧೯೨೫

೧೨. ದೇವದುರ್ಗದ ಆದಿ ಅಮತ್ಯಪ್ಪ ಕ್ರಿ.ಶ.೧೮೪೫ ರಿಂದ ೧೯೨೭

೧೩. ಬಳಗಾನೂರು ಮರಿಸ್ವಾಮಿ - ಕ್ರಿ.ಶ.೧೮೬೦ ರಿಂದ ೧೯೩೦

೧೪. ಗೊಬ್ಬೂರು ಮಾರ್ತಂಡಪ್ಪ - ಕ್ರಿ.ಶ.೧೮೮೦ ರಿಂದ ೧೯೬೦

೧೫. ವಡಿಕೆ ತಾತಪ್ಪಯ್ಯ - ಕ್ರಿ.ಶ.೧೮೯೦ ರಿಂದ ೧೯೬೧

೧೬. ಮಾಣಿಕಪ್ಪ - ಕ್ರಿ.ಶ.೧೯೦೨ - ೧೯೬೪

೧೭. ಹನುಮಂತವ್ವ - ಕ್ರಿ.ಶ.೧೯೦೪ - ೧೯೮೯

೧೮. ರಮಾನಂದ ಸರ್ತಿಗೇರಿ - ಕ್ರಿ.ಶ.೧೯೧೪ - ೧೯೮೪

೧೯. ರಾಂಪೂರು ಲಕ್ಷ್ಮಣದಾಸ - ಕ್ರಿ.ಶ.೧೯೧೫- ೨೯೭೦

೨೦. ಯರ್ರಮಾರಪ್ಪ - ಕ್ರಿ.ಶ.೧೯೨೫ ರಿಂದ ೨೦೦೦

ದೇವದುರ್ಗ ಚೆನ್ನಮಲ್ಲರಿಂದ ಯರ್ರಮಾರಪ್ಪನವರ ಕಾಲದ ತತ್ವಪದಕಾರರು, ತಮ್ಮ ಹಿಂದಿನ ಪರಂಪರೆಯವರಿಗಿಂತ ಭಿನ್ನವಾಗಿ ಧಾರ್ಮಿಕ, ಲೌಕಿಕ ಮತ್ತು ಸಾಮಾಜಿಕ ಆಶೋತ್ತರಗಳನ್ನು ಬಲಪಡಿಸಿದರು. ಗುರು ಮಠದಿಂದ ಶಾಖಾಮಠದವರೆಗೆ ತಮ್ಮ ಪಾರಮಾರ್ಥಿಕ ತತ್ವವನ್ನು ಬಿತ್ತರಿಸಿದರು. ಇವರಿಗೆ ಸ್ವಾತಂತ್ರ್ಯಸಂಗ್ರಾಮದ ಒತ್ತಡ ಒಂದು ಕಡೆಯಾದರೆ, ದೈಹಿಕ ಒತ್ತಡ, ಮಾನಸಿಕ ತಳಮಳದ, ಜನ ಸಮಾಜಕ್ಕೆ ಸ್ವಾಂತನ ಹೇಳುತ್ತಾ ನೀತಿಯಿಂದ ಜನಪರ ಕೆಲಸಗಳಲ್ಲಿ ಇವರು ತೊಡಗಿಸಿಕೊಂಡಿದ್ದು, ತಮ್ಮ ಸಂಸಾರದ ಜವಾಬ್ದಾರಿಯೊಂದಿಗೆ, ಲೋಕಕಲ್ಯಾಣದ ಅರಿವು ಇವರಿಗಿದ್ದಿತು. ಈ ವರ್ಗದ ತತ್ವಪದಕಾರರು ತಮ್ಮದೇ ಆದಂಥ ಗುರುಪರಂಪರೆಯನ್ನು ಬೆಳೆಸುತ್ತಾ ಮಠಗಳನ್ನು ಕಟ್ಟಿದರು. ಸಾಮಾನ್ಯ ಜನರಿಗೆ ಹತ್ತಿರವಾಗಿ, ಸಾಂತ್ವನ ಹೇಳುತ್ತಾ ಶ್ರಮಿಕ ಜನರ ಆಯಾಸ ಪರಿಹಾರ ಮಾಡುತ್ತಿದ್ದರು. ತಮ್ಮ ಲೋಕತತ್ವ ಮತ್ತು ಧಾರ್ಮಿಕ ತತ್ವ ಎರಡನ್ನೂ ಮೌಖಿಕವಾಗಿ ಪಸರಿಸಲು ಕಾರಣ ಕರ್ತರಾದರು. ಸಮೂಹದ ಜನರಿಗೆ ಹೇಳುವ ಮತ್ತು ಕೇಳುವ ವರ್ಗಗಳಿಗೆ ದೇಶದ ಸ್ವಾತಂತ್ರ್ಯದ ಅರಿವನ್ನು ನೀಡಿದರು. ತಮ್ಮ ಹಕ್ಕುಗಳಿಗಾಗಿ ಜೈಲಿಗೂ ಹೋಗಿಬಂದರು. ಭಾಷಾವಾರು ಪ್ರಾಂತ್ಯಗಳ ವಿಂಗಡಣೆಯಲ್ಲಿ ತೆಲುಗು ತತ್ವಪದಕಾರರು ಈ ನೆಲಕ್ಕೆ ಬಂದು ಕನ್ನಡ ಭಾಷೆಯಲ್ಲಿ ತತ್ವಪದಗಳನ್ನು ಬರೆಯಲು ಪ್ರಾರಂಭಿಸಿದರು. ತಮ್ಮ ಹಿಂದಿನವರ ಯೋಗಿಕ ಜೀವನದಂತೆ ಮುಂದುವರಿದರೂ ತಮ್ಮ ಮಾನಸಿಕ ಅಸ್ಪಸ್ಥತೆ ಕಾರಣವಾಗಿ ಇವರ ಆತ್ಮತತ್ವಗಳು ಕೊಂಚ ಮಸುಕಾದವು. ಪಾರಮಾರ್ಥಿಕ ಜೀವನದಲ್ಲಿ ಭಾವುಕರಾಗಿ, ಲೋಕವನ್ನು ಪ್ರೀತಿಯಿಂದ ಕಂಡರು. ಜನರ ಸಹಾಯಕ್ಕಾಗಿ ಸದಾ ಸಿದ್ಧರಾಗಿರುತ್ತಿದ್ದರು. ಆದರೂ ಈ ಘಟ್ಟದಲ್ಲಿ ಹನುಮಂತವ್ವಳಂಥಾ ಮಹಿಳಾ ತತ್ವಪದಕಾರ್ತಿ ಒಬ್ಬಳೇ ಇದದ್ದು ಕಂಡುಬರುತ್ತದೆ.

೨೧. ಮಲ್ದಕಲ್ ಭೀಮಲಿಂಗಪ್ಪ ಕ್ರಿ.ಶ.೧೯೨೬- ೧೯೯೯

೨೨. ಮಂಜರ್ಲಾ ಖಾದರ್ ಸಾಬ್ ಕ್ರಿ.ಶ. ೧೯೩೦-೧೯೭೫

೨೩. ಜಹೀರಾಬಾದ್ ತಿಪ್ಪಣ್ಣತಾತ ಕ್ರಿ.ಶ.೧೯೪೦

೨೪. ಕಲ್ಮಲಾ ತಾಯಣ್ಣ ಕ್ರಿ.ಶ.೧೯೪೨-೨೯೮೨

೨೫. ರಾಂಪೂರು ಭೀಮಣ್ಣ ಕ್ರಿ.ಶ.೧೯೪೨

೨೬. ಹೊಸೂರು ತಿಪ್ಪಣ್ಣ ಕ್ರಿ.ಶ.೧೯೪೩

೨೭. ಮಾನಸಗಲ ವೆಂಕಣ್ಣ ಕ್ರಿ.ಶ.೧೯೪೮

೨೮. ಹುಲ್ಲೂರು ಶಿವಣ್ಣ ಕ್ರಿ.ಶ.೧೯೫೬

೨೯. ಅಮರ ಗುಂಡಪ್ಪ ಕ್ರಿ.ಶ.೧೯೫೮

೩೦. ಕೊರ್ವಿನಹಾಳ ಕಬೀರ ಕ್ರಿ.ಶ.೧೯೭೪

ಮಲ್ದಕಲ್ ಭೀಮಲಿಂಗಪ್ಪನಿಂದ ಕೊರ್ವಿನಹಾಳ ಕಬೀರರವರೆಗಿನ ಕಾಲದ ತತ್ವಪದಕಾರರಿಗೆ ಭಕ್ತಿ, ಜ್ಞಾನ, ಪಾರಮಾರ್ಥಿಕತೆ ಎನ್ನುವುದು ತಮ್ಮ ಯಾಂತ್ರಿಕ ಬದುಕಿನೊಂದಿಗೆ ಹಾಸು ಹೊಕ್ಕಾಗಿತ್ತು. ತಮ್ಮ ತತ್ವವನ್ನು ತೋಡಿಕೊಳ್ಳಲು ಇವರಿಗೆ ನಿರ್ದಿಷ್ಟವಾದ ಮಠದ ವಾತಾವರಣ ಸೃಷ್ಟಿಯಾಗಲಿಲ್ಲ. ತತ್ವಪದಗಳನ್ನು ಹಾಡಲು ತಮ್ಮದೇ ಆದಂಥಾ ಗುಂಪುಗಳು ಇವರಿಗಿರಲಿಲ್ಲ. ಕೃಷಿಕ ಬದುಕು, ಸರಕಾರಿ ಕೆಲಸ, ಬಡತನದ ಬದುಕಿನಿಂದ ಅಂತರ್ಮುಖತ್ವ ಹೊಂದಿದ್ದರು. ತಮ್ಮ ಮನೆತನಕ್ಕೆ ಬಂದ ಹಾಡುಗಾರಿಕಾ ಸಂಪ್ರದಾಯವನ್ನು ಮುಂದುವರಿಸಿಕೊಂಡು ಹೋಗಬೇಕೆಂಬ ಹಂಬಲವು ಹೆಚ್ಚಾಗಿತ್ತು. ಕೆಲ ತತ್ವಪದಕಾರರು ವೀರಶೈವ ಧರ್ಮದೊಂದಿಗೆ ಮುಖಾಮುಖಿಯಾದರು. ತಮ್ಮ ಸಮುದಾಯದ (ಕೆಲ ತತ್ವಪದಕಾರರು) ಜನರ ಆಧ್ಯಾತ್ಮಿಕ ಚರ್ಚೆಗೋಸ್ಕರ ಮಠ ಕಟ್ಟಿದರು. ಇಂಥ ಕ್ರಾಂತಿಕಾರಕ ತತ್ವಪದಕಾರರೂ ಇಲ್ಲಿ ಕಂಡುಬರುವರು. ತಮ್ಮ ವೈಚಾರಿಕ ವಿಚಾರಗಳೊಂದಿಗೆ ಕಾಲದ ಪರಿಸರಕ್ಕೆ ತಕ್ಕಂತೆ ಪಾರಮಾರ್ಥಿಕ ಹಾಡುಗಳನ್ನು ಭಿನ್ನ ವಸ್ತು ರೂಪಕಗಳ ನೆಲೆಯಲ್ಲಿ ತತ್ವಗಳನ್ನು ಹೇಳಲು ಪ್ರಾರಂಭಿಸಿದರು. ತಮ್ಮ ಬಂಡಾಯದ ಪ್ರಖರತೆ ಹೆಚ್ಚಿಸಿದರು. ಇವರ ಹಾಡುಗಳ ನಾದ ಗೇಯ ಗುಣಗಳು ಅನುಭಾವದ ನೆಲೆಯ ಕವಿಮನಸ್ಸಿನ ಹಾಡುಗಳಾದವು.

**ಅಡಿಟಿಪ್ಪಣಿಗಳು**

೧. ರಾಂಪೂರ ಭೀಮಣ್ಣ ಹಾಡಿದ್ದು

೨. ಶಾಸ್ತ್ರಿಮಠ ಎಂ.ಜಿ., ೧೯೯೩, ಈಡಲೂರು ಬಸವಲಿಂಗ ಶರಣರು, ಪು.೨೫

೩. ಶಾಸ್ತ್ರೀಮಠ ಎಂ.ಜಿ, **ಪೂರ್ವೋಕ್ತ**, ಪು.೨೨೨

೪. ಬಸವಲಿಂಗ ಸೊಪ್ಪಿಮಠ, ೧೯೯೨, **ಬಿಬ್ಬಿ ಬಾಸರಸರು**, ಪು.೧

೫. ಶ್ರೀಶಾಂತರಸರು, ೧೯೭೩, **ಎಡೆದೊರೆ ನಾಡಿನ ಅನುಭಾವ ಕವಿಗಳು**, ಪು.೩೫

೬. ದೇವಸೂಗುರು ಭಜನಾ ಮಂಡಳಿಯ ಸಂಗ್ರಹ

೭. ಅದೇ, ಪು.೪೦

೮. ನಾಗರಾಜ್ ಹೀರಾ, **ರಾಯಚೂರು ಪರಿಸರದ ಶರಣ ಸಾಹಿತ್ಯ ಒಂದು ಅಧ್ಯಯನ**, ಅಪ್ರಕಟಿತ, ಪು.೯೨

೯. ಬಸವಲಿಂಗ ಸೊಪ್ಪಿಮಠ, ೧೯೯೭, ನಿರಲಕೇರಿ ಬಸವಲಿಂಗರ ಸ್ವರವಚನಗಳು, ಪ್ರಸ್ತಾವನೆ

೧೦. ಶ್ರೀಶಾಂತರಸರು, ೧೯೭೩, **ಪೂರ್ವೋಕ್ತ**, ಪು.೪೮

೧೧. ಬಸವಲಿಂಗ ಸೊಪ್ಪಿಮಠ, ೧೯೯೯, **ನೀರಲಕೇರಿ ಬಸವಲಿಂಗರ ಸ್ವರವಚನಗಳು**, ಪ್ರಸ್ತಾವನೆ

೧೨. ನಾಗರಾಜ ಹೀರಾ, **ಪೂರ್ವೋಕ್ತ**, ಪು.೯೪

೧೩. ಅದೇ,

೧೪. ಸಂಗಮೇಶ ಸವದತ್ತಿಮಠ, ೧೯೮೬, **ಘನಶ್ರೀ**, ಪು.೩

೧೫. ಅದೇ,

೧೬. ಅದೇ,

೧೭. ಬಸವರಾಜ ಸಬರದ, ೨೦೦೦, **ಹೈದರಾಬಾದ್ ಕರ್ನಾಟಕದ ತತ್ವಪದಕಾರರು**, ಪು.೧೩

೧೮. ಮಾನಸಗಲ್ ವೆಂಕನಗೌಡರು ಹಾಡಿದ್ದು

೧೯. ಬಂಡೆಪ್ಪನವರು, ಶಾಂತಮೂರ್ತಿ(ಸಂ), ೧೯೯೨, **ವಿದೇಹ್ಯ ಕೈವಲ್ಯ ಸಾರಾಮೃತ**, ಪ್ರಸ್ತಾವನೆ

೨೦. ಶ್ರೀಶಾಂತರಸರು, ೧೯೭೨, **ಪೂರ್ವೋಕ್ತ**, ಪು.೬೩

೨೧. ಅದೇ,

೨೨. ಶ್ರೀಶಾಂತರಸರು, **ಪೂರ್ವೋಕ್ತ**, ೧೯೭೨, ಪು.೮೨

೨೩. ನಾಗರಾಜ ಹೀರಾ, **ಪೂರ್ವೋಕ್ತ**, ಪು.೬೯

೨೪. ಶರಬಯ್ಯ ಎಂ.(ಸಂ), **ಬಳಗಾವೂರು ಮರಿದೇವರ ಜೀವನ ಜ್ಯೋತಿ**, ೧೯೬೪, ಪು.೧೧

೨೫. ಅದೇ,

೨೬. ಬಸವರಾಜ ಸಬರದ, **ಪೂರ್ವೋಕ್ತ**, ೧೯೯೬, ಪು.೩೯

೨೭. ವಡಿಕೆ ತಾತಪ್ಪಯ್ಯ, **ಅಮೃತ ಶಿಖಾಮಣಿ**, ೧೯೫೯, ಪು.೩೫

೨೮. ಚಿತ್ರಗಾರ ಎಚ್.ಎನ್., **ಆರ್ಯ ವೈಶ್ಯ ಸಂಘದವರ ಸುವರ್ಣ ಸಂಭ್ರಮ ಸಂಚಿಕೆ**, ೨೦೦೦

೨೯. ತಿಮ್ಮಾಪೂರಪೇಟೆ ಭಜನಾ ಮಂಡಳಿಯಲ್ಲಿ ಸಂಗ್ರಹ

೩೦. ರಾಂಪೂರ ಭಜನಾ ಮಂಡಳಿಯಲ್ಲಿ ಸಂಗ್ರಹ

೩೧. ಜಯಶ್ರೀ ಸಬರದ(ಸಂ), **ಗುರುಶಿಷ್ಯರ ತತ್ವಪದಗಳು**, ೧೯೯೭, ಪ್ರಸ್ತಾವನೆ

೩೨. ಅದೇ, ಪು.೨೫

೩೩. ಬಸವರಾಜ ಸಬರದ, **ಪೂರ್ವೋಕ್ತ**, ಪು.೧೭೫

೩೪. ಜಯಶ್ರೀ ಸಬರದ(ಸಂ),, **ಗುರುಶಿಷ್ಯರ ತತ್ವಪದಗಳು**, ಪು.೪೮

೩೫. ಅದೇ, ಪು.೪೯

೩೬. ಅಸ್ಕಿಹಾಳ ಭಜನಾ ಮಂಡಳಿಯಲ್ಲಿ ಸಂಗ್ರಹ

೩೭. ಶ್ರೀಗಿರಿಮಠದಲ್ಲಿ ಸಂಗ್ರಹ

೩೮. ಮಾನಸಗಲ್ ವೆಂಕನಗೌಡರ ಹೇಳಿಕೆ

೩೯. ಅವರಗುಂಡಪ್ಪ ಹೂಗಾರ, ಅಪ್ರಕಟಿತ

ಅಧ್ಯಾಯ ೪

# ಪಾರಮಾರ್ಥಿಕ ಆಯಾಮ ಮತ್ತು ಮನುಷ್ಯನ ಅಸ್ತಿತ್ವದ ಸ್ವರೂಪಗಳು

೪

# ಪಾರಮಾರ್ಥಿಕ ಆಯಾಮ ಮತ್ತು ಮನುಷ್ಯನ ಅಸ್ತಿತ್ವದ ಸ್ವರೂಪಗಳು

## ೪.೧. ಸಾಂಪ್ರದಾಯಿಕವಾದ ದಾರ್ಶನಿಕ ನೆಲೆಗಳ ಮೀರುವಿಕೆ ಹೊಸದರ ಕಟ್ಟುವಿಕೆ

ರಾಯಚೂರು ಜಿಲ್ಲಾ ತತ್ವಪದಕಾರರ ಪರಂಪರೆ ಎಂದರೆ ಯುದ್ಧಗಳ ನಾಡಿನಲ್ಲಿ ವಿರಕ್ತಿಯನ್ನು ಚಿಗುರಿಸಿದ, ವಿರಕ್ತಿಯೊಳಗೆ ಪ್ರಭುತ್ವವನ್ನು ಧಿಕ್ಕರಿಸುವ ಸಶಕ್ತಯುಳ್ಳಂಥದ್ದು. ರಾಯಚೂರು ಜಿಲ್ಲಾ ಸೂಫಿಗಳು, ಯೋಗಿಗಳು, ಅನುಭಾವಿಗಳು ಹಾಗೂ ತತ್ವಪದಕಾರರು ಜನಸಮುದಾಯಗಳಲ್ಲಿ ಮೂಡಿಸಿದ ಈ ವಿರಕ್ತಿಯು ವೈರಾಗ್ಯ, ಸನ್ಯಾಸ ಎಂಬ ಅರ್ಥದಲ್ಲಿ ಅಲ್ಲ. ಪ್ರಾಪಂಚಿಕ ಸುಖಗಳ ಮೇಲೆ ಅತಿ ಮೋಹವನ್ನು ಇಟ್ಟುಕೊಳ್ಳದೇ ಬದುಕುವುದು. ಇದೊಂದು ಧಾರಣ ಶಕ್ತಿ ಎಂದರೇ ಸರಿಯಾದೀತು. ಧಾರಣ ಶಕ್ತಿಯೇ ಲೌಕಿಕವನ್ನು ಮೀರುವ ಅನುಭಾವದ ಕಡೆ ನಡೆಯುವ ದಾರಿಯಾಗಬಹುದು. ಪ್ರಭುತ್ವವಾದಿಗಳ ದಾಹದ ಮುಂದೆ ವಿರಕ್ತಿಯ ದಾರಿ ಪ್ರತಿಕ್ರಿಯೆಯಾಗಿ ಪರಿಣಮಿಸಬಹುದು. ಆ ನಾಯಕತ್ವ, ಕ್ಷಾಮ, ಸಾಂಕ್ರಾಮಿಕ ರೋಗ, ಅರಾಜಕತೆಗಳಿಂದ ಬೇಸತ್ತ ಜನಸಾಮಾನ್ಯರನ್ನು ಈ ನಿಲುವಿಗೆ ಪರಿವರ್ತಿಸುವುದು ಸಂತರಿಂದ ಸಾಧ್ಯವಾಯಿತು. ಭೇದವೆಣಿಸದೆ ಬೆರೆತು ಬದುಕುವ ಸರಳ ಮಾರ್ಗವನ್ನು ತಿಳಿಸಿದರು. ಆತಂಕಗೊಂಡ ಮನಸಿಗೆ ನೆಮ್ಮದಿಯನ್ನು ನೀಡಲು ಶಕ್ತರಾದರು. ತತ್ವಗಳನ್ನು ಹಾಡುವುದರ ಮೂಲಕ ದುಗುಡಗೊಂಡ ಜನಸಮುದಾಯಗಳಲ್ಲಿ ಸಂತಸ ಮೂಡಿಸಿದರು. ಸಾಂಪ್ರದಾಯಿಕವಾದ ದಾರ್ಶನಿಕ ನೆಲೆಗಳನ್ನು ಮೀರುವ ಮೂಲಕ ಹೊಸ ರೀತಿಯ ಸಂಚಲನೆಗೆ ಕಾರಣರಾದರು. ಇವರು ಓದಿನಿಂದ ಕಲಿಯುವುದಕ್ಕಿಂತ ಅನುಭವದಿಂದ, ಸಾಧನೆಗಳಿಂದ ಕಲಿಯಲು ಯತ್ನಿಸಿದರು. ಇವರ ಗುರು, ಲಿಂಗ, ಜಂಗಮ ಎನ್ನುವ ದಾರ್ಶನಿಕ ಪರಿಕಲ್ಪನೆಗಳು ತುಂಬ ಭಿನ್ನವಾದಂಥವುಗಳಾಗಿವೆ.

### ೪.೧.೧. ಗುರು

"ತತ್ವ" ಜನ ಸಮುದಾಯದ ಅರಿವಿನ ಮೂಲಕ ಹುಟ್ಟುತ್ತದೆ. ತತ್ವಪದಕಾರನ ಅಂತಃಕರಣದ ಅನುಭಾವದಲ್ಲಿ ಅವನ ತತ್ವ ಅರಳುತ್ತದೆ. ಪ್ರತೀ ತತ್ವಪದಕಾರನಿಗೆ ಅರಿವಿನ ಕಲ್ಪನೆಯ ಗುರುವಿರುತ್ತಾನೆ. ತನ್ನ ಅಂತರ್ಮುಖಿ ಜೀವನಕ್ಕೆ ಅಸ್ಥಿರ ವ್ಯಕ್ತಿತ್ವದ ನಿರ್ದಿಷ್ಟತೆಗಾಗಿ ಮೊದಲು ಗುರುವಿನ ಹುಡುಕಾಟ

ಪ್ರಾರಂಭಿಸುವನು. ತತ್ವಪದಕಾರರ ಗುರುವಿನ ಪರಿಕಲ್ಪನೆ ಸಾಂಪ್ರದಾಯಿಕ ಗುರುವಿಗಿಂತ ತುಂಬಾ ಭಿನ್ನವಾದದ್ದು. ಗುರು ತನಗೆ ಚಾರಿತ್ರಿಕ ಜವಾಬ್ದಾರಿ ನೀಡುವ ಕಲ್ಪನೆಯ ಪ್ರತಿಮೆ ಎಂದು ತಿಳಿದು, ಮಾನಸಿಕವಾಗಿ ಗುರುವೇ ಆದಿ, ಅಂತ್ಯವೆಂದು ನಂಬುತ್ತಾನೆ. ಸಾಧನೆಯ ಮಾರ್ಗದ ಅರಿವಿಗೆ ಗುರು ಅಗತ್ಯ. ತತ್ವಪದಕಾರರಲ್ಲಿ ಗುರು ಪೋಷಕನಲ್ಲ ಸೂಚಕ. ಆತ ತನ್ನರಿವಿನ ಮೇದಿನಿಗಧಿಕನಾದವ; ಗುರುವಿನ ಗುಪ್ತ ಉಪದೇಶದಿಂದಲೇ ಮುಕ್ತಿಯ ಮಾರ್ಗವನ್ನು ಕಂಡುಕೊಳ್ಳುತ್ತಾನೆ. 'ಅರಸುವಿಕೆ' ಮತ್ತು 'ಹಠ' ಇಲ್ಲಿ ಬಹುಮುಖ್ಯ.

ಬಾಲಕನಾಗಿದ್ದ ಬಾಲರಾಮಪ್ಪನು ಗುರು ನಾಗಯ್ಯನನ್ನು ಕಾಣಲು ಮದ್ರಾಸಿನಿಂದ ಬಂದನು. ಬೇಗನೆ ಗುರು ಸಾಮಿಪ್ಯವಾಗಲಿಲ್ಲ. ಹಠದಿಂದ ಮೂರು ದಿನಗಳ ಪರ್ಯಾತ ನೀರು, ಆಹಾರವಿಲ್ಲದೆ ಗುರುವಿನ ಮನೆಯ ಮುಂದೆಯೇ ಕುಳಿತಿದ್ದನು. ನಾಗಯ್ಯನ ಹೆಂಡತಿ ಬಾಲರಾಮಪ್ಪನ ಹಠವನ್ನು ನೋಡಿ "ಮಗುವಿಗೆ ಏನು ಕೊಡುವುದಿದೆ ಕೊಟ್ಟು ಕಳುಹಿಸಿ ಮೂರು ದಿನದಿಂದ ಉಪವಾಸವಿದೆ" ಎಂದು ಪತಿಗೆ ಹೇಳಿದಳು. "ಅವನ ಔಷಧಿ ಬೇರೆಯೇ ಇದೆ" ಎಂದು ಪುನಃ ಮೂರ ದಿನ ಹುಡುಗನನ್ನು ಪರೀಕ್ಷಿಸಿದರು. ನಾಗಯ್ಯನ ಆಧ್ಯಾತ್ಮಿಕ ಪರೀಕ್ಷೆಯಲ್ಲಿ ಬಾಲರಾಪ್ಪನು ತೇರ್ಗಡೆಯಾದನು. ಮರುದಿನ ಯಕಲಾಸಪುರಕ್ಕೆ ಹೋಗುವ ದಾರಿಯ ಗುಡಿಯೊಳಗೆ ಬಾಲರಾಮಪ್ಪನಿಗೆ ಹಸ್ತಮಸ್ತಕ ಸಂಯೋಜನೆಯ ದೀಕ್ಷೆಯನ್ನು ಗುರು ನಾಗಯ್ಯನು ನೀಡಿದನು. ಈ ದೃಷ್ಟಿಯಿಂದ ತತ್ವಪದಕಾರರ ಶಿಷ್ಯ ಸಂಬಂಧಗಳು ತತ್ವಪದ ಸಾಹಿತ್ಯದ ಒಲವಿಗೆ ವಿಶೇಷ ಕಾರಣವಾಗಿರಬೇಕು.

ಅನುಭಾವಿಗಳ ಗುರು ಪರಂಪರೆ ಎನ್ನುವುದು ಅಂತರಂಗ ಅರಿವಿನ ವಿಕಾಸದ ಪ್ರತಿನಿಧಿಕರಣವಾಗಿದೆ. ಗುರುವಿನ ಭೌತಿಕ ಮತ್ತು ಆರಾಧಕ ಅಸ್ತಿತ್ವಕ್ಕಿಂತ ಆತ್ಮ ಸಂಗಾತದ ಅರಿವಿನ ನೆಲೆ ಮುಖ್ಯವಾಗುತ್ತದೆ. ಚೆನ್ನಬಸವಣ್ಣನು "ಗುರುವನ್ನು ನರನೆಂದು ಕರೆದರೆ ಹಿಂದಣನ ಭವಮಾಲೆ ಹಿಂಗದು. ಗುರುಶಬ್ದಕ್ಕೆ ದೋಷವ ಮಾಡಿದೆನಾದರೆ ಸ್ವಾನನ ಬಳಗವ ತಪ್ಪದು. ಗುರೂಪದೇಶವ ಮೀರಿದೆನಾದರೆ ಎನಗೆ ಏಳೇಳು ಜನ್ಮದ ಕರ್ಮಹಿಂಗದು ಈ ಕಾರಣ ಶ್ರೀ ಗುರು ಭರ್ಗೋದೇವ ಇದನ್ನು ನಂಬದಿದ್ದರೆ ಭವ ಹಿಂಗದೆಂದು" ವಿವರಿಸುವುದನ್ನು ನೋಡಿದರೆ ಗುರುವೆನ್ನುವ ವಿಚಾರ ಅಂದಿನ ಕಾಲದಿಂದ ಕಲಿತ ಹೊಸ ಪಾಠವಾದರೂ ಶಿಷ್ಯನ ಭಾವೋದ್ವೇಗಕ್ಕೆ ಕಾರಣವಾಗುವ ಮನುಷ್ಯ ಸಂಬಂಧವನ್ನು ಆತ್ಮೀಕರಿಸುವ ವಿನ್ಯಾಸಗಳಾಗಿ ತತ್ವಕ್ಕಿಂತ ಭಿನ್ನವಾಗಿ ಗುರು ನಿರ್ವಚನ ಗೊಂಡಿದ್ದಾನೆ. ಆದ್ದರಿಂತ ತತ್ವಪದಕಾರರ ಗುರು ಶಿಕ್ಷಕನೇ ಹೊರತು ಪಾರಂಪರಿಕ ಗುರುವಲ್ಲ. ಸಾಮಾನ್ಯ ವರ್ಗದ ತತ್ವಪದಕಾರ ತನ್ನ ಸಂಸಾರದ ನಿರ್ವಹಣೆಗಾಗಿ ಉದ್ಯೋಗವನ್ನು ಅವಲಂಬಿಸಬೇಕಾಗುತ್ತದೆ. ತನ್ನ ವ್ಯವಹಾರದಲ್ಲಿ ತೊಂದರೆಗಳು ಕಾಡಲಾರಂಭಿಸಿದಾಗ ದೇವರನ್ನು ಸ್ತುತಿಸುವುದಿಲ್ಲ. ಮೂರ್ತ ರೂಪದ ಗುರುವನ್ನು ಪ್ರಾರ್ಥಿಸುವುದು ಈ ತತ್ವಪದದಿಂದ ಗಮನಿಸಬಹುದು. ಹರಮುನಿದರೆ ಗುರು ಕಾಯುವನು ಎನ್ನುವ ಹಂಬಲ ಇಲ್ಲಿನದು.

"ಉದ್ಯೋಗ ಮಾಡಿದೆನೆ | ಲಾಭದ ಉದ್ಯೋಗ ಮಾಡಿದೆನೆ
ಉದ್ಯೋಗ ಮಾಡಿದೆ | ಸದ್ಗುರುವಿನ ಜೊತೆ
ಸಿದ್ಧ ಕರಣಾ ಮೂರುತಿ | ಶುದ್ಧ ಪ್ರಸಾದವ
ಒಂದಕ್ಕೆ ಮೂರಾಯ್ತು| ಮೂರಕ್ಕೆ ಮುಂದೆ
ಮೂವತ್ತಾರಾಯ್ತು | ಹೊಂದಿಸ ಇನ್ನೂರ
ಹದಿನಾರು ರೂಪಾಯಿ | ಹಿಂದಿನ ಬಾಕಿ
ಅರಿವು ಮಾಡಿದೆನೆ |"[೧]

ಇಲ್ಲಿ ಗುರು ಎಂದರೆ ಒಂದು ದೃಷ್ಟಿ. ಗುರಿಯಾಗಿದ್ದು ಜ್ಞಾನದ ಹಸಿವಿನ ಜೊತೆಗೆ ಉದ್ಯೋಗದಿಂದ ಪೂರ್ಣತೆ ಹೊಂದುವುದು. ಗುರು ಎಂಬ ಶಬ್ದದಲ್ಲಿ ಗುರಿ ಎಂಬ ಪದ್ಯವನ್ನು ಸಮೀಕರಿಸಿದಾಗ ಲೌಖಿಕ ಜೀವನದ ಸಾರ್ಥಕತೆ ಆಧ್ಯಾತ್ಮಿಕ ಹಂಬಲದ ಗುರಿಗಳು ಒಂದೇ ಆಗಿ ಉದ್ಯೋಗದಲ್ಲಿ ವಿಕಾಸತೆ ಹೊಂದುವುದು. ಗುಣಾತೀತ ಸ್ವರೂಪವನ್ನು ಶಿಷ್ಯನ ಅನುಭವಕ್ಕೆ ತರಬಲ್ಲವನೇ ತತ್ವಪದಕಾರರ ಗುರುವಾಗಿದ್ದಾನೆ. ತನ್ನ ವಯಕ್ತಿಕ ಹಂಬಲದ ಜೊತೆಗೆ ಉದ್ಯೋಗದ ಹಂಬಲವನ್ನು ಗುರುವಿನ ಮೂಲಕ ನಿವೇದಿಸುತ್ತಾನೆ. ಕ್ರಿಯೆ ಅರಿವಿನ ಸಾತತ್ಯವೇ ಗುರು.

ಗುರು-ಲಿಂಗ-ಜಂಗಮರೆಂಬ ಮೂವರು ವ್ಯಕ್ತಿಗಳು ನನ್ನ ಆಧ್ಯಾತ್ಮಿಕ ಉದ್ಯೋಗದ ಜೊತೆಗೆ ವ್ಯವಹರಿಸುತ್ತಿದ್ದಾರೆ. ಇವರು ಆತ್ಮತತ್ವ, ವಿದ್ಯಾತತ್ವ, ಶಿವತತ್ವದ ಪ್ರತೀಕವಾಗಿ ದಾರ್ಶನಿಕ ಸಂಗಮದ ಪರಿಕಲ್ಪನೆಯನ್ನು ತತ್ವಪದಕಾರ ತನ್ನ ಸದ್ಗುರುವಿನ ಮೂಲಕ ಪುನರ್ ವ್ಯಾಖ್ಯಾನಿಸುತ್ತಾರೆನ್ನುವುದು ಗಮನಾರ್ಹ. ತತ್ವಮಯವಾದ ಶಿಷ್ಯನ ಶರೀರದಲ್ಲಿ ಗುರುವು ಪ್ರಣವ ಸ್ವರೂಪಿಯಾಗಿರುವನು. ಮೂವತ್ತಾರು ತತ್ವಗಳನ್ನು ಅರಿತು ಗುರಿ ಮುಟ್ಟುವಲ್ಲಿ ಶಿಷ್ಯನು ಜ್ಞಾನಕಾಯನಾಗಿರುವನು. ಈ ಕಾಯದಲ್ಲಿ ಗುರು ಕಳಾಸ್ವರೂಪಿಯಾಗಿರುವನು. ಶಿಷ್ಯನು ದೇಹಿಕನಾಗಿ ಸದಾ ಗುರುವಿನಲ್ಲಿ ನೆಲೆಸಿರುವವನು.

ಆದ್ದರಿಂದ ತತ್ವಪದಕಾರರು ದೈವದ ನೆಲೆಗಿಂತ ಆತ್ಮತತ್ವದ ವಿಕಾಸಕ್ಕಾಗಿ ಗುರುವಿನ ಜೊತೆ ಇಂಥ ಸಂಭಾಷಣೆಯಲ್ಲಿ ತೊಡಗುತ್ತಾರೆ. ಶರಣರ ವೈಚಾರಿಕ ತತ್ವವು ವಸ್ತುನಿಷ್ಠ ಕಾಯಕದ ಪ್ರಾಮಾಣಿಕತೆಯನ್ನು ತೋರಿಸುತ್ತದೆ. ಮಾದಾರ ದೂಳಯ್ಯ ತನ್ನ ಚರ್ಮದ ಕಾಯಕದಲ್ಲಿ ನಿರತನಾಗಿದ್ದಾಗ ಆ ದೇವರೇ ಪ್ರತ್ಯಕ್ಷನಾದರೂ ಲಕ್ಷಿಸದಷ್ಟು ಕಾಯಕ ನಿಷ್ಠೆ ತೋರಿದನು. ಶಿವನಿಗೆ ನಿನ್ನ ಭಕ್ತರ ಠಾವಿನಲ್ಲಿ ಹೋಗಿ ಮುಕ್ತಿ ಪಡೆ ಎಂದು ನಿಷ್ಠುರವಾಗಿ ದೇವರಿಗೆ ಹೇಳುವನು.

ತತ್ವಪದಕಾರರ ಗುರು ಸಂಬಂಧವು ಆಧೀನತೆಗೆ ಮೀರಿದ ಸಮಕಾಲೀನ ಬದುಕಿಗೆ ಸ್ಪಂದಿಸುವ ಶಿಷ್ಯನ ಸುಖ ದುಃಖದ ಅಸ್ತಿತ್ವಕ್ಕೆ ಪರಿಹಾರ ಕೊಡುವ ಆದರ್ಶಯುತವಾದ ಮಾದರಿ ಈ ಪರಂಪರೆಯಲ್ಲಿ ಕಾಣಬಹುದು.

"ಗುರುವು ಎಂಬೀ ಕೋಣ | ಊರೊಳಗೆ ಸೇರ್‍ಯಾದ
ಪರಬ್ರಹ್ಮನ ಕೂನನರಿಯದೀ | ಕೇಳಿರಣ್ಣಾ
ಮರುಳ ಬುದ್ಧಿಯಿಂದ | ಪರರ ಇರಿಯುವುದು
ಇರಿಯುವುದು ನೋಡಿರಣ್ಣಾ | ಸಾಧು ಜನರ ಜೊತೆ
ವಾದ ಮಾಡುವುದು ನೋಡಿರಣ್ಣಾ |"[೨]

ಸಂಪ್ರದಾಯ ಬದ್ಧವಾದ ಜಡ ವ್ಯಕ್ತಿಗತ ಗುರುವಿನ ಪರಿಕಲ್ಪನೆಯನ್ನು ಇಂಥಲ್ಲಿ ಕಾಣುತ್ತೇವೆ. ಗುರುವೆಂಬುದು ಊರಲ್ಲಿ ಸೇರಿಕೊಂಡು ಜನರ ಹಾದಿ ತಪ್ಪಿಸುವ ಶೋಷಿಸುವ ಸಂಗತಿಯಾಗಿರುವ ಪ್ರಸ್ತಾಪ ಇಲ್ಲಿದೆ. ತತ್ವಪದಕಾರರು ಗ್ರಹಿಸುವ ಮತ್ತು ಕಾಣುವ ಗುರುವಿನ ಪರಿಕಲ್ಪನೆ ಅದು ಜಡ ನೆಲೆಗಳನ್ನು ಮೀರಿದ್ದು ಮತ್ತು ಮನುಷ್ಯ ರೂಪಿಯಾದ ಶೋಷಕ ವ್ಯಕ್ತಿತ್ವದಿಂದ ಭಿನ್ನವಾದದ್ದು. ಹೀಗಾಗಿ ಪರಂಪರೆಯಿಂದ ರೂಪುಗೊಂಡು ಬಂದ ಮನುಷ್ಯರೂಪಿ ಮತ್ತು ಬೋಧಪ್ರಧಾನ ಆಕೃತಿಗಿಂತ ಮಿಗಿಲಾದ ಅಂತಃಸ್ಸತ್ವ ಮತ್ತು ಅರಿವಿನ ಹಂಗಿರುವ ಗುರು ತತ್ವಪದಕಾರರಿಗೆ ಮುಖ್ಯವಾಗುತ್ತಾನೆ. ಇಲ್ಲಿ ಗುರು ಶೋಷಕನಲ್ಲ ಸೂಚಕ ಮತ್ತು ಎಲ್ಲಾ ಜಡ ಸಂಪ್ರದಾಯದ ಸಂಕೋಲೆಗಳಿಂದ ಮುಕ್ತವಾದವನು. ಜಾತಿ ಎಲ್ಲೆ ಮೀರಿದ ನೀತಿವಂತ, ಈ ದೇಹದ ಪಿಂಡಾಂಡದಲ್ಲಿ ಗುರು ಬ್ರಹ್ಮಾಂಡನಾಗಿದ್ದಾನೆ. ಗುರುವಿನ ಪರಿಕಲ್ಪನೆಯಲ್ಲಿ ಮೂರು ನೆಲೆಗಳನ್ನು ಕಾಣುತ್ತೇವೆ. ೧. ದೈವಾಂಗ ಗುರು ೨. ಸಿದ್ಧಾಂಗ ಗುರು ೩. ಮಾನವಾಂಗ ಗುರು. ಈ ಮೂವರಲ್ಲಿ ತತ್ವಪದಕಾರನ ಗುರು ಮಾನವಾಂಗ ಗುರುವಾಗಿದ್ದಾನೆ. ಜನತೆಯ ಮನವನ್ನು ತಕ್ಷಣ ಮುಟ್ಟಬಲ್ಲವನು ಮಾನವಾಂಗನೇಯಾಗಿದ್ದಾನೆ. ನೀರಲಕೇರಿ ಬಸವಲಿಂಗರು "ಗುರುವಿನ ಮಗ ನಾನೇ | ಸದ್ಗುರುವಿನ ಮಗ ನಾನು| ಅರಿವಿನಾತ್ಮನ ಕುರುವಿಡಿದರಿದೆನು ಮರಳನು ವ್ಯರ್ತಕೆ". ವಡಿಕೆ ತಾತಪ್ಪಯ್ಯ "ಗುರುವೇ ಗುರುತರಿಯದೆ ಯುಗ ಯುಗ ತಿರುಗಿದೆನು ತಂದೆ | ಗುರುವೆ ಅರಿಯದೆ ತಿರುಗಿದ ಪರಭವನೆ".

ಮೇಲಿನ ಅನುಭಾವಿಕ ಸಾಲುಗಳು ಗುರುವನ್ನು ತಂದೆ ಎನ್ನುವ ಕುರುವಿನಲ್ಲಿ ಮತ್ತು ಕುರುಹಿಲ್ಲದ ಠಾವಿನಲ್ಲಿ ಪರಿಭಾವಿಸುವುದನ್ನು ಕಾಣುತ್ತೇವೆ. ಗುರುವು ತಂದೆಯಾಗಿ ದೈವವಾಗಿ ದಾರಿಗಚ್ಚುವ ಗೆಳೆಯನ ತಂದೆ ಮಗನಿಗಿಂತ ಭಿನ್ನವಲ್ಲ. ಮಗ ತಂದೆಯ ಇನ್ನೊಂದು ರೂಪ. ರೂಪವಿದ್ದೂ ಇಲ್ಲದವ ಕುರುಹು ಇದ್ದು ಇಲ್ಲದವ ಉರಿಹಿಡಿದ ಕರ್ಪೂರದ ಗಿರಿಯಂತೆ ಅಸ್ತಿತ್ವ ರಹಿತವಾದ ಮತ್ತು ಜಾಗೃತ ಪ್ರಜ್ಞೆಗೆ ನಿಲುಕುವ ಗುರುವಿನ ಅನಾವರಣ ತತ್ವಪದಕಾರರಲ್ಲಿ ಕಾಣುತ್ತೇವೆ. ಭಕ್ತಿ ಪಂಥಗಳಲ್ಲಿ ದೇವರ ಕುರುಹು ಇದ್ದು ಇಲ್ಲವಾಗುವ ಸಂದರ್ಭವಿದ್ದರೆ ತತ್ವಪದಕಾರರಲ್ಲಿ ಆ ದೈವೀ ಸಂಬಂಧ ಗುರು ಸಂಬಂಧವಾಗುತ್ತದೆ. ಸಾಧಕ ಮತ್ತು ಗುರು ಇಬ್ಬರು ವಿದೇಹಿಗಳು. ಇದಕ್ಕೆ (ಕಡಕೋಳು ಮಡಿವಾಳಪ್ಪ, ಸಂತ ಶಿಶುನಾಳ ಶರೀಫ, ತಿಂಥಿಣಿ ಮೋನಪ್ಪಯ್ಯನಂಥವರ ಗುರು-ಶಿಷ್ಯ ಪರಂಪರೆಗಳು ಉತ್ತಮ ನಿದರ್ಶನ.) ಗುರುವಿಗಿಂತ

ಶಿಷ್ಯನಿಗೆ ಮೊದಲ ಆದ್ಯತೆ. ತಿಂಥಿಣಿ ಮೋನಪ್ಪಯ್ಯನಂಥವರ ಸಮಾಧಿಗಳ ಸ್ವರೂಪ ನೋಡಿದರೆ ಅಲ್ಲಿ ಮೊದಲು ಶಿಷ್ಯನಿಗೆ ಮಾನ್ಯತೆ ಗುರುವಿನ ತಲೆಯ ಮೇಲಿರುವ ಶಿಷ್ಯನ ಸಮಾಧಿ ದರ್ಶನ ನಂತರವೇ ಗುರುದರ್ಶನ. ಇಂಥ ನೆಲೆಗಳು ಗುರು ಶಿಷ್ಯರ ಅವಿನಾಭಾವದ ಪ್ರತೀಕಗಳೇ ಆಗಿವೆ.

ಕ್ರಿ.ಶ.೧೭, ೧೮ನೇ ಶತಮಾನದ ತತ್ವಪದಕಾರರ ಗುರುವಿನ ನೆಲೆಗಳು ಸಮಾಜಪರ ಜಂಗಮ ಸಂಬಂಧಗಳನ್ನೊಳಗೊಂಡ ಕಥಾನಕಗಳಾಗಿ ಮುಖಾಮುಖಿಯಾಗುತ್ತವೆ. ೧೯, ೨೦ನೇ ಶತಮಾನದ ತತ್ವಪದಕಾರರಲ್ಲಿ ಗುರು ಪರಿಕಲ್ಪನೆಯ ವ್ಯವಸ್ಥೆಯನ್ನು ಶ್ರದ್ಧೆಯಿಂದ ಭಾವನಾತ್ಮಕವಾಗಿ ಒಪ್ಪಿಕೊಂಡಿರುವುದನ್ನು ಕಾಣಬಹುದು. ಕಾರಣ "ಶರಣರಂಥಹ ದಾರ್ಶನಿಕ ವ್ಯಕ್ತಿತ್ವಗಳು ಕಾಲದ ಹರಿದಾಟದಲ್ಲಿ ಒಂದೇ ಕಡೆ ನಿಲ್ಲುವಂಥವಲ್ಲ. ಕಾಲಾತೀತವಾದ ಸಂಚಲನೆ ಆ ವ್ಯಕ್ತಿತ್ವಗಳಿಗಿರುತ್ತದೆ. ಇದಕ್ಕೆ ತತ್ವಪದಕಾರರು ಒಳ್ಳೆಯ ಉದಾಹರಣೆ."[೩]

ಗೊಬ್ಬೂರು ಹಂಪಣ್ಣನ ಮನೆಯಲ್ಲಿ ಅಹಿತಕರ ಘಟನೆಗಳು ಕಾರಣವಾಗಿ ಹಂಪಣ್ಣನು ಅರಿಕೇರಿ ಗ್ರಾಮ ತೊರೆದು ಗೊಬ್ಬೂರಿಗೆ ಬಂದನು. ಮರಿಸ್ವಾಮಿಯು ಬಳಗಾನೂರು ತೊರೆದು ಸಿರುಗುಪ್ಪದ ಹೊಸಕೋಟೆಗೆ ಬಂದನು. ಇಂಥ ಕಾರಣಗಳೆಲ್ಲಾ ತತ್ವಪದಕಾರರಲ್ಲಿ ಗುರುವಿನ ಹುಡುಕಾಟಕ್ಕೆ ಕಾರಣವಾಗಿವೆ. ಸಾಧನೆಗೆ ತೊಡಗುವ ಆರಂಭಿಕ ನೆಲೆಯೇ ಗುರುವನ್ನು ದಕ್ಕಿಸಿಕೊಳ್ಳುವುದು. ಗುರುವಿಗಾಗಿ ನಡೆಸುವ ಹುಡುಕಾಟವೆಂದರೆ ಅದು ತನ್ನ ತನದ ಹುಡುಕಾಟವೇ ಸರಿ. ಅಂತರಂಗ-ಬಹಿರಂಗಗಳಲ್ಲಿ ಒಂದೇ ಸ್ಥಿತಿಯನ್ನು ಹೊಂದುವುದು. ಈ ಸ್ಥಿತಿಗೆ ತಲುಪುವ ಮುನ್ನ ಅನೇಕ ಬಗೆಯ ವೇದನೆ, ಸಂಕಟ, ಅವಮಾನ ಅನುಮಾನಗಳಿಗೆ ಗುರಿಯಾಗುತ್ತಾನೆ. ವೇದಶಾಸ್ತ್ರ ಪುರಾಣಗಳ ಅನುಸರಣೆಗಿಂತ ಸ್ವಾನುಭವ ದತ್ತ ಗಮನ ಕೇಂದ್ರೀಕರಿಸುತ್ತಾನೆ. ಇಂಥ ಅನ್ಯ ಹಾಗೂ ಬೌದ್ಧಿಕ ಚಿಂತನೆಗಿಂತ ಅಂತರಂಗದ ನಿಜದನಿಗೆ ಮಿಡಿದವರು. ಮನುಷ್ಯನಿಗೆ ಬರುವ ಕಷ್ಟಗಳು ಸಮಾಜದ ಧಾರ್ಮಿಕ, ಆರ್ಥಿಕ ವ್ಯವಸ್ಥೆಯಿಂದ ಬಂದವು ಎಂದು ತತ್ವಪದಕಾರ ಚಿಂತಿಸುವುದಿಲ್ಲ. ಅವರ ಪರಿಭಾಷೆಯಲ್ಲಿ ಹೇಳುವುದಾದರೆ ಇಂಥ ಕಷ್ಟಗಳನ್ನು ಗೆಲ್ಲುವುದೆಂದರೆ ಗುರುಮಾರ್ಗದಲ್ಲಿ ನಡೆಯಬೇಕು ಎಂದು ಹೇಳುತ್ತಾರೆ.

ಗೊಬ್ಬೂರು ಹಂಪಣ್ಣನ ಹಾಡಿನ ಮೂಲಕ ಪರಿಕಲ್ಪನೆಯನ್ನು ಇನ್ನಷ್ಟು ವಿಸ್ತರಿಸಿಕೊಳ್ಳ ಬಹುದೆನಿಸುತ್ತದೆ.

"ಯಾತಕ್ಕೆ ಚಿಂತೆ ಮನವೆ| ಗುರುನಾಥ ನಿರಲ್ಯಾತಕ್ಕೆ ಚಿಂತೆ ಮನವೆ
ಯಾತಕ್ಕೆ ಚಿಂತಿ ಗುರುನಾಥ ಕರುಣದಿ | ಪಾತಕ ಹಿಂಗಿ
ಪರಮಾತ್ಮನಾದ ಬಳಿಕ್ಯಾತಕ್ಕೆ | ಹರದಿರಂಬೆಗಳಿಗೆ ದೊರಕದ
ನರ ಬ್ರಹ್ಮದಿರವು ತೋರಿದೆ | ಸದ್ಗುರುನಾಥ ನಿರಲ್ಯಾತಕ್ಕೆ

ಮಿಥ್ಯಕಾಯವು ಎಂದು | ತತ್ವಮಸಿ ವಾಕ್ಯವನರುಹಿ
ನಿತ್ಯನ ಮಾಡಿದ ಕರ್ತೃ | ಗುರುಲಿಂಗನ್ಯಾತಕ್ಕೆ''[೪]

ಅಂತರಂಗದ ಅಂತಃಸ್ಸತ್ವದಲ್ಲಿ ಜ್ಞಾನವು ಸೇರಿದಾಗ ಯೋಗವಾಗುತ್ತದೆ, ಆತ್ಮತತ್ವದ ನಿರೂಪಣೆಯಾಗುತ್ತದೆ. ದೇವರಿರುವ ಕಾಶಿ, ಕೈಲಾಸ, ಎಂಬ ನಂಬಿಕೆಗಳನ್ನು ದೂರಮಾಡಿ ಗುರುವಿನ ಅಂಗಳವನ್ನೇ ಕಾಶಿಯೆಂದು ಗುರುವಿನ ಮನೆಯನ್ನು ಕೈಲಾಸವೆಂದು ಗುರು ನಂಬಿಕೆ ನಿಜ ಮುಕ್ತಿಗೆ ಸ್ಥಿರವೆಂದು ತತ್ವಪದಕಾರರು ನಂಬಿದ್ದರು. ''ಬಹಿರಂಗದಲ್ಲಿ ತತ್ವಪದಕಾರರು ವೇದ, ಪುರಾಣ, ಶಾಸ್ತ್ರಗಳನ್ನು ಓದಿ ಅನುಸರಿಸಿದವರಲ್ಲ. ಅದನ್ನೇ ಬಂಡವಾಳ ಮಾಡಿಕೊಂಡವರಲ್ಲ. ವಚನಕಾರರು ಅವುಗಳನ್ನು ಓದಿ ತಿರಸ್ಕರಿಸಿದವರು. ಆದರೆ ತತ್ವಪದಕಾರರು ಹೆಚ್ಚಿನ ಓದಿನಿಂದ ಜ್ಞಾನವನ್ನು ಪಡೆದವರಲ್ಲ. ಅನುಭವ ಸಾಧನೆಗಳಿಂದಲೇ ಕಲಿಯಲು ಯತ್ನಿಸಿದರು.''[೫] ಅಂಥ ಅನುಭಾವರ ದರ್ಶನಗಳನ್ನು ಗೊಬ್ಬೂರು ಹಂಪಣ್ಣ ಪಡೆದು ಕೊಳ್ಳುವುದನ್ನು ಇಲ್ಲಿ ಕಾಣಬಹುದು. 'ತ್ವಂ' ಎಂದರೆ ಬ್ರಹ್ಮ 'ಅಸಿ' ಎಂದರೆ ಇದ್ದೇನೆ. ಅದ್ವೈತ ಸಿದ್ಧಾಂತದ ಒಲವಿರುವ ತತ್ವಪದಕಾರರು ಬ್ರಹ್ಮಜ್ಞಾನದ ಏಕಾಗ್ರತೆಗಾಗಿ ಪರಿತಪಿಸುವ ಹಂತ ಇಲ್ಲಿ ಪ್ರಕಟವಾಗುತ್ತದೆ. ಹಂಪಣ್ಣನು ಅತೀ ಚಿಕ್ಕವಯಸ್ಸಿನಲ್ಲೇ ಪತ್ನಿಯನ್ನು ಕಳೆದುಕೊಂಡಿದ್ದರಿಂದ ಮನಸ್ಸಿನ ಏಕಾಗ್ರತೆಗಾಗಿ ಸಾಲಿ ದೊಡ್ಡಬಸ್ಸಪ್ಪನವರಿಂದ ಗುರೂಪದೇಶ ಪಡೆಯುತ್ತಾನೆ. ಪಾರಮಾರ್ಥಿಕ ಅಧ್ಯಯನಕ್ಕೆ ಮನಸ್ಸನ್ನು ಸ್ಥಿರಗೊಳಿಸಿಕೊಳ್ಳಲು ಮಹಾನಂದೀಶ್ವರ ಬೆಟ್ಟದಲ್ಲಿ ಯೋಗವನ್ನು ಮಾಡುತ್ತಾ ಬ್ರಹ್ಮಜ್ಞಾನದಿಂದ ಕಾಯವನು ಬಲಿಷ್ಟಗೊಳಿಸುವ ಸನ್ನಿವೇಶ ಇಲ್ಲಿದೆ.

ತತ್ವಪದಕಾರರು ತಮ್ಮ ಅನುಭವಗಳನ್ನು ತತ್ವಗಳನ್ನಾಗಿಸಿ ರೂಪಿಸುವುದು ಮತ್ತು ವ್ಯಕ್ತಿಗಳನ್ನು ತತ್ವಗಳಾಗಿ ಪರಿವರ್ತಿಸುವುದು, ಇವರ ಲಯ ಜೀವನದಲ್ಲಿ ಕಾಣುತ್ತೇವೆ. ಗುರು-ಶಿಷ್ಯರ ಇಂತಹ ವ್ಯಕ್ತಿತ್ವದ ತತ್ವಗಳು ಪರಸ್ಪರ ಮುಖಾಮುಖಿಯಾಗುತ್ತವೆ. ಈ ನಿರೂಪಣೆಗಳು ವಿಶಿಷ್ಟ ಪಾರಮಾರ್ಥಿಕ ಲಕ್ಷಣಗಳಾಗಿ ಕಂಡುಬರುತ್ತವೆ. ಗುರುಬ್ರಹ್ಮನಿಗೆ ಅತೀತವಾದ ಈ ಮನಸ್ಸು ಈ ಪ್ರಾಣದಲ್ಲಿ ಕ್ರಿಯಾತ್ಮಕವಾಗಿದ್ದು, ಮನದ ತನ್ಮಯತೆಗಾಗಿ ಕಾತರಿಸುತ್ತಿರುತ್ತದೆ. ಗುರು ಬೋಧಿಸಿದ ಸತ್ ಚಿತ್ ರೂಪಗಳು ಈ ಜೀವದಲ್ಲಿದ್ದು ಶರೀರದಲ್ಲಿರುವವನೇ ಬ್ರಹ್ಮನು. ತತ್ ಪದವೇ ಪರಮಾತ್ಮ, 'ತ್ವಂ' ಪದವೇ ಜೀವಾತ್ಮ. ಈ ಆಧ್ಯಾತ್ಮಿಕ ಘಟನೆಗಳನ್ನು ನಿವೇದಿಸಿಕೊಂಡ ತತ್ವಪದಕಾರ ಶಿವಜೀವರ ಸಂಬಂಧವನ್ನು ಭಾವನಾತ್ಮಕವಾಗಿ ಕಲ್ಪಿಸುತ್ತಾನೆ.

ಗುರು ಶಿಷ್ಯರಿಗೆ ಸಂಬಂಧಪಟ್ಟ ಅನುಭಾವಿ ತತ್ವಪದಗಳು ವಯಕ್ತಿಕ ಸಾಧನೆಗಳಾಗಿ ಪೂರ್ಣವಾಗುತ್ತವೆ. ಆದರೆ ಭಿಕ್ಷುಕ ವೃತ್ತಿಯ ದಾಸರಲ್ಲಿ ಮರುಕ ಆತಂಕಗಳು ಪ್ರಧಾನವಾಗಿ ನಿರ್ಮಾಣವಾಗುತ್ತವೆ. ವಡಿಕೆ ತಾತಪ್ಪಯ್ಯನಲ್ಲಿ ನಮ್ರ ದಿಕ್ಕಾರ ಈ ರೀತಿ ಪ್ರಕಟವಾಗಿದೆ.

"ಟಿಂಗ ಟಿಂಗ ದಾಸಯ್ಯ | ಯಾರು ನೀನು ಮುಂದಕೆ ಹೋಗಯ್ಯ
ಹಿಂದಕೆ ತಿರುಗಿ ಬಾರಯ್ಯ | ದಾಸಯ್ಯ ಡಂಬಯ್ಯ ಕೈಯಾತಕಯ್ಯ
ತಿರುಕಿಯ ಮನೆಯದು ದಾಸಯ್ಯ | ಸುಳ್ಳೆ ಕಿರಿ ಕಿರಿ ಮಾಡಬ್ಯಾಡೊ
ದಾಸಯ್ಯ | ಖರೆ ಖರೆ ಸಂಸಾರ ಅರಿಕೆಯ ತೀರಿಸಿ
ಗುರುವರ ಗಿರಿಯ ಕಾಣಯ್ಯ | ಅಂದಿಲ್ಲ ಚಂದಿಲ್ಲ ದಾಸಯ್ಯ
ಬಂದೇನೆಂದರೆ ಬಾರಯ್ಯ | ನಿನ್ನ ಗೋಪಾಳ ಝುಳ ಝುಳ ವುದ್ದಯ್ಯ"[೬]

ಎನ್ನುವ ಹಾಡು ಅರ್ಥಪೂರ್ಣವಾದದ್ದು. ನಾನೇ ಭಿಕ್ಷುಕ ನಿನಗೇನು ಭಿಕ್ಷೆ ನೀಡಲಿ ಎಂಬ ಸಂವಾದ ಒಂದೆಡೆಯಾದರೆ, ಸಂಸಾರ ಋಣವನ್ನು ತೀರಿಸದೆ ಪಲಾಯನವಾದಿಯಾಗಿ ಬಂದೆಯಾ? ಎಂಬ ಅಂತರಂಗದ ಶುದ್ಧತೆಯನ್ನು ಗುರುವಿನ ಮೂಲಕ ಪ್ರಶ್ನಿಸುವನು. ದಾಸರಲ್ಲಿ ಜಾಗಟೆ ದಾಸರು, ದೀವಿಟಿಗೆಯ ದಾಸರು, ಭಿಕ್ಷೆಗಾಗಿ ಬರುವರು. "ವೆಂಕಟರಮಣ ಗೋವಿಂದಾ ಗೋವಿಂದಾ" ಎಂದು ಹೇಳುವ ಜವಾಬ್ದಾರಿಯುತ ದಾಸರು ಈ ಭಾಗದಲ್ಲುಂಟು.

ಗೊಲ್ಲದಾಸರು ಈ ಹಾಡನ್ನು ಹಾಡುತ್ತಾ ಊರೂರು ಅಲೆದು ಕಾಳುಕಡಿ ಸಂಗ್ರಹ ಮಾಡುತ್ತಾರೆ. ಇವರಲ್ಲಿ ಕೆಲವರು ಬಯಲಾಟವನ್ನು ಕಲಿಸುವವರಿದ್ದಾರೆ. ಹೊಲೆದಾಸರು, ಗೋಪಾಳಬುಟ್ಟಿಯ ದಾಸರು ಅಥವಾ ಊರ ದಾಸರೆಂದು ಗುರುತಿಸಿ ಕೊಂಡಿದ್ದಾರೆ. ಗೋಪಾಳ ಬುಟ್ಟಿಯಲ್ಲಿ ಭಿಕ್ಷೆ ಎತ್ತುವುದರಿಂದ ಈ ಹೆಸರು ಬಂದಿದೆ. ಸಾಂಪ್ರದಾಯಿಕತೆಯಿಂದ ಬಂದ ಈ ದಾಸರು ತಮ್ಮ ಉದರ ಪೋಷಣೆಯನ್ನು ಭಿಕ್ಷೆಗಾಗಿ 'ತೊಡಗಿಸಿಕೊಂಡ ಹೊಯ್ದಾಟಗಳನ್ನು ಸೂಕ್ಷ್ಮವಾಗಿ ಸಾಂಕೇತಿಕವಾಗಿ ಅಭಿವ್ಯಕ್ತಿಸುತ್ತದೆ. ಸಮಾಜದಲ್ಲಿದ್ದ ವರ್ಗಭೇದ, ಬಡತನದ ಕ್ರೂರತೆಗಳು ಕಾರಣವಾಗಿ ತನಗೆ ಉಂಟಾದ ಶೋಷಣೆಯಿಂದ ಜನರನ್ನು ಉದ್ದೇಶಿಸಿ ಹೇಳುವುದು ಕಂಡುಬರುತ್ತದೆ. ಭಿಕ್ಷೆ ಎಂಬ ಆದರ್ಶ, ಬದುಕೆಂಬ ಸಂಘರ್ಷಗಳು ಗೋಪಾಳ ದಾಸರಲ್ಲಿ ಪ್ರತಿಭಟನಾತ್ಮಕವಾಗಿ ನಿರೂಪಿತವಾಗಿದೆ. ಇಂತಹ ಗುರು ಸಂಬಂಧಗಳನ್ನು ಗುರುತಿಸುವಾಗ ತತ್ವಪದಕಾರರ ಅಂದಿನ ಬದಲಾದ ಸಾಮಾಜಿಕ ಪ್ರಕ್ರಿಯೆಗಳು ಕಾರಣವಾಗಿರುತ್ತದೆ.

ವಚನಕಾರರು ಅಂತರಂಗದ ಮೂಲಕ ದಾಸೋಹ ತತ್ವವನ್ನು ಬಹಿರಂಗದ ವ್ಯಾಪ್ತಿಯವರೆಗೆ ಸಾಮಾನ್ಯ ಜನರ ಹತ್ತಿರ ತಂದರು, ಆದರೆ ಲಕ್ಷ್ಮಣ ದಾಸನು ಗುರುವಿನ ಮುಂದೆ ದಾಸನಾದ ಸ್ವೀಕೃತಿ ಭಾವ ಇವನಲ್ಲಿ ಪ್ರಕಟವಾಗುತ್ತದೆ. ಇಂತಹ ಪ್ರೇರಣೆ ಭೂತಕಾಲದ ಅನುಭವದಿಂದ ವರ್ತಮಾನಕಾಲದವರೆಗೆ ಚಾಚುತ್ತದೆ. ಈ ಅನುಭವ ಪ್ರಾಥಮಿಕ ಹಂತದಲ್ಲಿರುತ್ತದೆ. ಕೆಳವರ್ಗದ ತತ್ವಪದಕಾರರ ವಿಚಾರ ಲಹರಿಯನ್ನು ಮೇಲ್ವರ್ಗದ ಶಕ್ತಿಗಳು ಕಸಿದುಕೊಳ್ಳುತ್ತವೆ. ಪ್ರತಿಯೊಂದು ಶಿಷ್ಟ ಧರ್ಮದಲ್ಲಿ ಮೂಲದವ, ಪ್ರಚಾರಕ, ಸೇವಕ, ಕನಿಷ್ಠ ಎಂಬ ಮೂರು ಹಂತಗಳಿರುತ್ತವೆ. ಕೊನೆಯ ವರ್ಗ ಮೊದಲನೇಯ ವರ್ಗದ ಮೌಲ್ಯವನ್ನು ಎರಡನೇ ವರ್ಗದ ಮೂಲಕ ಬೀದಿಗೆ ತರುವ ಪ್ರಯತ್ನ ಮಾಡುತ್ತದೆ. ಧಾರ್ಮಿಕವಾಗಿ ಈ ಕೆಲಸ ರಾಮನಿಗೆ ಅಳಿಲು ಸೇವೆ ಸಲ್ಲಿಸಿದಂತೆ."

''ಕಾಯಬೇಕು ನೀನೆ ಗುರು ತಂದೆ | ಎನ್ನಯ ಮುಂದೆ
ಕಾಯಬೇಕು ನೀನೆ ಗುರು ತಂದೆ | ಮಾಯಾ ರಹಿತ
ಮೂಡಿ ಬಂದೆ | ಕಾಯರೊಳಗೆ ನ್ಯಾಯನಿಂದೆ
ದಯವಿರಲಿ ದಾಸನೆಂದೆ''[೭]

ಇಂತಹ ಅಸ್ಥಿರ ಮನಕ್ಕೆ ದೃಢತ್ವ ಬರಬೇಕಾದರೆ ಗುರುವಿನ ಆಶ್ರಯ ಬೇಕು. ಲಕ್ಷ್ಮಣದಾಸನ ಗುರು ಭೀಮಾವಧೂತರು ತುಂಬಳ ಗ್ರಾಮದಿಂದ ರಾಂಪೂರು ಗ್ರಾಮಕ್ಕೆ ತಮ್ಮ ಶಿಷ್ಯರನ್ನು ಕಾಣಲು ಬರುತ್ತಿದ್ದರು. ಈ ಸಂದರ್ಭದಲ್ಲಿ ಭೀಮಾವಧೂತರ ಪರಿಚಯವಾಗುತ್ತದೆ. ಮುಂದೆ ಗುರುವಿನಿಂದ ಅಕ್ಷರ ವಿದ್ಯೆ ಪಾರಮಾರ್ಥಿಕ ವಿದ್ಯೆಯನ್ನು ಮೂವತ್ತಾರನೇ ವಯಸ್ಸಿನಲ್ಲಿ ಕಲಿಯುತ್ತಾನೆ. ಮಂದಕಲ್ ಭೀಮಲಿಂಗಪ್ಪನಿಗೆ ಗುರು ಕರುಣೆ ಪಡೆಯಬೇಕಾದರೆ ಗುರು ದೀಕ್ಷೆ ಬೋಧನೆಯ ಚಡಪಡಿಕೆ ಅಗತ್ಯ.

''ಗುರು ಬಂದ ಭಾಗ್ಯವ ತಂದ | ಸಚ್ಚಿದಾನಂದ ಇವ
ಹೊತ್ತು ತಂದ | ಈತನ ಕರುಣೆಯಿಂದ ಶರಣಾಗತಾರ
ಬಂದಾ | ಕೈ ಕಟ್ಟಿ ನಿಲ್ಲುತಾರ ಮುಂದ | ಪಾರು ಮಾಡೊ
ಈ ಭವ ಬಂಧನದಿಂದ | ಗುರುವೆ ನಿಮ್ಮಯ
ಕೀರ್ತಿ ಧರೆಯೊಳು ಕೇಳಿ | ಬಂದೀವಿ ಒಳಗೆ
ಗತಿ ತೋರೋ ಎನಗೆ |''[೮]

ಪ್ರತಿಯೊಬ್ಬ ತತ್ವಪದಕಾರರ ಬದುಕಿನ ಹಿನ್ನೆಲೆಯ ಗ್ರಹಿಕೆಗಳು ಭಿನ್ನವಾದಂಥವುಗಳು. ಅದರಲ್ಲೂ ವಡಿಕೆ ತಾತಪ್ಪಯ್ಯನಿಂದ ಮುಂದಿನ ತತ್ವಪದಕಾರರಲ್ಲಿ ತಮ್ಮ ಸಂಕೀರ್ಣಮಯವಾದ ಬದುಕನ್ನು ವೈಯಕ್ತಿಕವಾಗಿ ಸಮಾಜಪರವಾಗಿ ಶೋಧಿಸಲು ಹಾತೊರೆದವರು. ನೀರಲಕೇರಿ ಬಸವಲಿಂಗಪ್ಪನಲ್ಲಿ ಗುರುವೆಂಬ ತಾತ್ವಿಕ ಬದುಕನ್ನು ಶಿಷ್ಯನ ಅಂತರಂಗದ ವಿನ್ಯಾಸದ ಮೂಲಕ ಪ್ರಕಟಿಸಿದರೆ, ಕೂಡಲೂರು ಬಸವಲಿಂಗಪ್ಪನಲ್ಲಿ ಪಾರಮಾರ್ಥಿಕತೆಯು ಅನುಭವ ಪ್ರಧಾನವಾಗಿ ಪ್ರಕಟಗೊಳ್ಳುತ್ತದೆ. ತತ್ವಪದಕಾರರಲ್ಲಿ ಗುರು ಬೇರೆಯಲ್ಲ, ಆತ್ಮದ ಪರಿಕಲ್ಪನೆ ಬೇರೆಯಲ್ಲ. ಆದರೆ ಆಧುನಿಕ ತತ್ವಪದಕಾರರಲ್ಲಿ ಗುರುವಿನ ಸ್ವೀಕೃತಿಭಾವವು ಪ್ರಭುತ್ವದ ದಾಸ್ಯ ಪ್ರಜ್ಞೆಯು ಕಾರಣವಾಗಿ ಗುರುವಿಗೆ ದಾಸನಾಗುವ ಶೋಧವೇ ಕುತೂಹಲವಾಗಿದೆ.

ಕ್ರಿ.ಶ.೧೯೪೭ರ ಸಂದರ್ಭದಲ್ಲಿ ಅಂದರೆ ಕವಿ ಬದುಕಿನ ಕಾಲದಲ್ಲಿ ದೇಶವು ಸ್ವಾತಂತ್ರ್ಯಾಂದೋಲನದ ಕಾತರದಲ್ಲಿತ್ತು. ಹೈದ್ರಾಬಾದ್ ಕರ್ನಾಟಕದ ಭಾಗದಲ್ಲಿ ನಿಜಾಂಶಾಹಿ ಆಡಳಿತದಿಂದ ಸಮೂಹ ತಲ್ಲಣಿಸುತ್ತಿತ್ತು. ಕಲ್ಲೂರಿನ ಅಡಿವೇಂದ್ರರ ಮಠದಲ್ಲಿ ಸ್ವಾತಂತ್ರ್ಯ ಹೋರಾಟಗಾರರು ತಮ್ಮ ಗುಂಪುಗಳೊಂದಿಗೆ ಆಶ್ರಯ ಪಡೆಯುತ್ತಿದ್ದರು. ಅಡಿವೇಂದ್ರರ ಮಗನಾದ ಬಸವಲಿಂಗಯ್ಯರು ಸ್ವಾತಂತ್ರ್ಯ

ಹೋರಾಟಗಾರರು. ಇವರಿಂದ ದೀಕ್ಷೆ ಪಡೆಯಬೇಕಾದರೆ ಕೈಕಟ್ಟಿ ನಿಂತು ಕಾಯಬೇಕು ಆದ್ದರಿಂದ ತತ್ವಪದಕಾರ ಇಂತಹ ಅಸಹನೀಯ ಸ್ಥಿತಿಗೆ ಒಳಗಾಗುತ್ತಾನೆ. ಸ್ವತಂತ್ರ್ಯ ಹಾಗೂ ಸ್ವಾಭಿಮಾನಿ ಗುಣದವರಾದ ತತ್ವಪದಕಾರರು ಅಂತಹ ಹಂಗಿನ ಗುರುಕರುಣೆಯನ್ನು ವಿರೋಧಿಸುತ್ತಾರೆ. ಏಕಾಂಗಿ ಹೋರಾಟಗಾರರಾಗಿ ಗುರುವಿನ ಸ್ನೇಹ ವಿಶ್ವಾಸಗಳಿಸಿ ಮೋಕ್ಷ ಪಡೆಯುತ್ತಾನೆ.

“ಬಂಡಾಯ ಮನೋಧರ್ಮದ ತತ್ವಪದಕಾರರು ವಸಾಹತುಶಾಹಿ ಕ್ರೌರ್ಯಗಳನ್ನು ತಮ್ಮ ನೇರ ನುಡಿಗಳಿಂದ ಖಂಡಿಸಿದರು. ತಮ್ಮಲ್ಲಿದ್ದುದನ್ನು ತಮ್ಮಂತೆ ದಾಸನಾಗಿ ದೇಸೀ ಸಂಸ್ಕೃತಿಯನ್ನು ಅಧೀನದಲ್ಲಿಟ್ಟುಕೊಳ್ಳಲು ಹೆಣಗಿತು. ಹೀಗಾಗಿ ಗ್ರಾಮ ಪ್ರದೇಶದಲ್ಲಿ ಶ್ಯಾನುಭೋಗ, ಅಮಲ್ದಾರ, ಪಾಟೀಲ, ಕುಲಕರ್ಣಿ, ಹುಟ್ಟಿಕೊಂಡರು.”[೯]

“ಮಾಡು ಮಾಡು | ಗುರುದ್ಯಾನವ ಮಾಡು
ಪ್ರಭು ನುಡಿಯುವ | ನುಡಿಯೊಳಾಡಿ
ನುಡಿ ನಡೆಯದಂತೆ | ನಡೆದು ನೋಡು
ಕಾಲಕಾಲಕ್ಕೆ ಯಾವ ಕಾಲಕ್ಕೆ | ಬಂದು
ಇಲ್ಲಿಯೆ ಇಲ್ಲಿಯೆ | ಇರ್ವನು
ಒಬ್ಬರಾದರೂ ಮರಳಿ ನೋಡಿ | ಮಾಯಾ
ಮನೆಯೊಳು ತಿಳಿಯಿರೊ|”[೧೦]

ತತ್ವಪದಕಾರರು ತಮ್ಮ ಇರುವಿಕೆಯಿಂದಲೇ ಜಾಗೃತ ಮನೋಭಾವ ವ್ಯಕ್ತಪಡಿಸುತ್ತಾರೆ. ಇಂಥ ತಾತ್ವಿಕ ವಲಯದ ಅನುಭವಗಳು ಆಧ್ಯಾತ್ಮಿಕ ವಲಯದ ಪರಧಿಯನ್ನು ಹಿಗ್ಗಿಸುತ್ತವೆ. ಆದ್ದರಿಂದ ತತ್ವಪದಕಾರ ತನ್ನ ‘ಗುರಿ’ ಎಂಬ ತಾತ್ವಿಕ ಸಂಕೇತದ ಗುರುವನ್ನು ರಾಜಕೀಯ ಶಕ್ತಿಗಳಿಂದ ರಕ್ಷಿಸಿಕೊಳ್ಳುವುದರ ಮೂಲಕ ಸಮಕಾಲೀನ ವಿಮರ್ಶಕರಿಗೆ ಹೆಚ್ಚು ಹತ್ತಿರವಾಗುವುದು ಇಲ್ಲಿ ಕಂಡುಬರುತ್ತದೆ. ತಮಗೆ ಪ್ರಿಯವಾದ ಆಧ್ಯಾತ್ಮಿಕತೆಯನ್ನು ಬಿಡದೆ ಅದನ್ನು ಪ್ರಸ್ತುತ ಕಾಲಕ್ಕೆ ಸಮೀಕರಿಸಿ ಹೇಳುವುದರಿಂದ ಸಹಜವಾಗಿಯೇ ಇಂದಿನ ಬಂಡಾಯದ ರಾಜಕೀಯ ಅರಿವು ಪ್ರಧಾನವಾಗುವುದು ಬಹು ಗಮನಾರ್ಹವಾಗಿದೆ.

ಅನಾಧಿ ಕಾಲದಿಂದ ಬಂದ ಈ ವರ್ಗಶೋಷಣೆಗೆ ಕೊನೆಯೆಂದು ಎಂದು ಪ್ರಶ್ನಿಸುತ್ತಾನೆ. ಅಸ್ಪೃಶ್ಯವೆಂಬ ಈ ಮಾಯಾ ಮನೆಯಲ್ಲಿ ಪ್ರಭುವಿನ ನುಡಿ ಆಚರಣೆಗಳಿಂದ ನಾವು ಶುದ್ಧಾತ್ಮರಾದರೂ ನಮ್ಮನ್ನು ಯಾರೂ ತಿರುಗಿ ನೋಡಲಿಲ್ಲ. ತತ್ವಪದಕಾರ ಹೇಳುವಂತೆ - ಪ್ರಭುವಿನ ನುಡಿಗಳು, ಕಾಲಕಾಲಕ್ಕೆ, ಮಾಯಾ ಮನೆಯೊಳು ಇವೆಲ್ಲಾ ತತ್ವಪದಕಾರನಲ್ಲಿ ಸಮಾಜದ ಸಮಾನ ಮೌಲ್ಯಗಳಾಗಿರಬೇಕೆಂಬ ಮನೋಧರ್ಮದಲ್ಲಿ ಖಂಡಿಸುತ್ತಾನೆ. ಹಾಗೇ ಶ್ರೇಣೀಕೃತ ವರ್ಗಕ್ಕೆ ಎಚ್ಚರಿಕೆ ಕೊಡುತ್ತಾನೆ. ಮುಂದೊಂದು ದಿವಸ ನಮಗೂ ಕಾಲಬರುತ್ತದೆ ಎನ್ನುವುದು ಮೂರ್ಖತನದ ಮಾತು.

ಯಾವ ಕಾಲಕ್ಕಾದರೂ ನಮ್ಮ ಹಕ್ಕುಗಳಿಗಾಗಿ ಹೋರಾಡುತ್ತೇವೆ ಎನ್ನುವ ಮೂಲಕ ಶೋಷಿತ ಹಾಗೂ ಶ್ರೇಣೀಕೃತ ವರ್ಗಕ್ಕೆ ಉತ್ತರಿಸುವರು. ಮಾಯಾ ಮನೆಯೊಳು ತಿಳಿಯಿರೋ ಎಂಬುವುದನ್ನು ವಚನಕಾರರು ಮನಸ್ಸನ್ನು ಕಬಳಿಸುವ ದುಷ್ಟ ಶಕ್ತಿಗೆ ಮಾಯೆಯೆಂದರು. ತತ್ವಪದಕಾರ ಅಸ್ಪೃಶ್ಯ ಮನಸ್ಸಿನಿಂದ ನೋಡುವ ಜನರಿಗೆ ನೋವಿನಿಂದ ಮಾಯೆ ಎಂದರು.

"ಗುರುವಿನ ನೆನೆ ಮನವೆ | ನಿತ್ಯದೊಳೊಮ್ಮೆ ಗುರುವಿನ
ನೆನೆಮನವೆ| ಜರಿದು ಹೋಗುವ ಜಡ ಭಾವವ
ತೊರೆದು | ಹರಿಯುವ ಗಂಗಾ ಯಮುನೆಯ
ತಡೆದು | ದೀನರ ರಕ್ಷಕ ಸದ್ಗುರು ದೇವಾ |
ಮನನಿಯರ ಮನ | ಸೂರೆಗೊಂಬುವವನ
ಜಾಣ ಶರಣರ ಹೃದಯ ವಾಸನೆ | ಸೇರಿದಿ ಮೂರು
ಮನೆಯ ಲೀಲಿದಿ ನಿತ್ಯ | ಮೀರಿದ ಮೇಲ್ಮನೆಯ
ಏರುವ ಸುಷುಮ್ನ | ದಾರಿಯ ಹಿಡಿದು
ಸಾರುವ ಕೃತಿ ಶ್ರೇಣಿ | ಓಂ ನಮಃ ಶಿವಾಯ ಎಂದು"[೧೧]

ರಾಂಪೂರು ಭೀಮಣ್ಣನಂಥಹ ಆಧುನಿಕ ತತ್ವಪದಕಾರರು ತಮ್ಮ ಹಿಂದಿನ ಗುರು ಪರಂಪರೆಯವರ ಸೃಜನಶೀಲತೆಯ ತತ್ವೀಯ ಅಂಶಗಳನ್ನು ಕಂಡಿದ್ದರು.

ಇಡೀ ತತ್ವಪದಕಾರರಲ್ಲಿ ಗುರುವನ್ನು ಭಿನ್ನ ಭಿನ್ನ ಧ್ವನಿಯಲ್ಲಿ ನಿರ್ವಚಿಸಿಕೊಂಡಿದ್ದರೂ ಅದರ ಅಂತಸತ್ವ ಒಂದೇಯಾಗಿದೆ. ತತ್ವಪದಕಾರನ ಅನುಭವಗಳು ಭಿನ್ನತೆಯ ಮೂಲಕ ಗುರುತಿಸಿಕೊಳ್ಳುತ್ತವೆ. ರಾಂಪೂರು ಭೀಮಣ್ಣನವರು ಸರಕಾರಿ ಕೆಲಸದ ಮಧ್ಯದಲ್ಲಿಯೇ ಬಿಡುವು ಮಾಡಿಕೊಂಡು ಮಹಾಂತ ಗುರುವನ್ನು ಕಾಣಲು ಗಣೇಕಲ್‌ಗೆ ಹೋಗುತ್ತಾರೆ. ತಮ್ಮ ಹಿಂದಿನ ಗುರು ಪರಂಪರೆಯವರ ಪವಾಡಗಳನ್ನು ತಾರ್ಕಿಕ ಶಕ್ತಿಗಳನ್ನು ತರ್ಕಾತ್ಮಕವಾಗಿ ಅಪರಿಚಿತ ಜಗತ್ತಿಗೆ ಪರಿಚಯಿಸುತ್ತಾರೆ. ಇಂಥಹ ನಿರಂತರ ಬದಲಾವಣೆಗಳು ಅಲಕ್ಷಿತ ಸಮುದಾಯದಲ್ಲಿ ಗುರುವಿನ ಕಥಾನಕ ಅಂಶಗಳು ಗಾಢವಾದ ಪ್ರಭಾವ ಬೀರಿವೆ. ಮುಕ್ತಿ ಪಡೆಯಲು ಸಾಧ್ಯವೆಂದು ಅಂತರಂಗದ ದಿಟ್ಟ ಪ್ರಶ್ನೆಗೆ ಉತ್ತರ ಕೊಡುವರು. ಈ ಯಾಂತ್ರಿಕ ಬದುಕಿನಲ್ಲಿ ಗುರುವನ್ನು ಮರೆತು ಬಿಡುವೆನೆ? ಎಂಬ ನೋವು ತತ್ವಪದಕಾರನದು. ಗುರುವಿನ ಮೂಲಕ ಈ ಪದ್ಯವನ್ನು ಹೀಗೆ ವ್ಯಕ್ತಪಡಿಸುತ್ತಾರೆ.

ಇಡಾ ಪಿಂಗಳ, ಸುಷುಮ್ನ ನಾಡಿಗಳೆಂದು ಗುರುತಿಸಿಕೊಳ್ಳುವ ಈ ನಾಡಿಗಳು ಸೂರ್ಯ, ಚಂದ್ರ, ಅಗ್ನಿ ದೇವತೆಗಳಾಗಿದ್ದಾರೆ. ಈ ದೇಹವೆಂಬ ಲೋಕದಲ್ಲಿ ಮೂರು ಲೋಕಗಳಿಗೆ ಮಿಗಿಲಾದ ಪ್ರಜ್ವಲತೆಯನ್ನು ಇವರು ಕೊಟ್ಟಿದ್ದಾರೆ. ಅ.ಉ.ಮ.ಕಾರಗಳು 'ಓಂ' ಶಿವ ಬೀಜಾಕ್ಷರಗಳು, ದೇಹವೆಂಬ

ಲೋಕದ ಮನಸ್ಸಿಗೆ ಆದೇಶವನ್ನು ನೀಡುವ ಆಜ್ಞಾಚಕ್ರನು, ಭ್ರೂಮಧ್ಯದ ಸಾಮ್ರಾಜ್ಯ ಪತಿಯಾಗಿದ್ದು "ಓಂ ನಮಃ ಶಿವಾಯ"ವೆಂಬ ಷಡಕ್ಷರಿ ಮಂತ್ರದಿಂದ ಶಿವತತ್ವದ ಏಕಾಗ್ರತೆಯನ್ನು ಸಾರುವುದು ಇವನ ಕೆಲಸವಾಗಿದೆ. ಈ ಮಂತ್ರಕ್ಕೆ ಆಧ್ಯಾತ್ಮಿಕ ಅಧ್ಯಯನದಲ್ಲಿ 'ಶುಕ್ಲಶೋಣಿತ ಸರ್ವೇಂಧ್ರಿಯಗಳ ಉತ್ಪತ್ತಿ" ಎಂದು ಹೇಳುವುದು ಕಂಡುಬರುತ್ತದೆ. ತತ್ವಪದಕಾರನ ಅನಿಸಿಕೆಯಂತೆ ಇದು ಆಂತರಿಕ ಶಿವಪಥವೆಂದು ತೀರ್ಮಾನಿಸಿ ಈ ಜಾಗೃತ ಅವಸ್ಥೆಗಳಿಗೆ ಶರಣಾಗುವೆ. ಆದರೆ ಸಂಸಾರದಿಂದ ಪಲಾಯನವಾದಿಯಾಗಲಾರೆ ಗುರುವೆಂಬ ಬೆಳಕಿನ ಮೂಲಕ ಮನದಲ್ಲಿಯೆ ಗಂಗಾ, ಯಮುನೆ, ಸರಸ್ವತಿಯನ್ನು ಕಾಣುತ್ತೇನೆ.

ಪ್ರತಿ ತತ್ವಪದಕಾರನಿಗೆ ಗುರು ಆತ್ಮೀಯ ಉಪಾಧ್ಯಾಯನಾಗುತ್ತಾನೆ. ಶಿಷ್ಯನ ಸಂಸಾರದ ತಾಪತ್ರಯಗಳನ್ನು ವಿಚಾರಿಸಿಕೊಳ್ಳುತ್ತಾ ಸಾಂತ್ವನಗೈಯ್ಯುತ್ತಾನೆ. ಹೀಗೆ ತಿಳಿ, ಹೀಗೆ ಹೋಗು ಎಂದು ಆದೇಶ ನೀಡುವ ಗುರುವು ಗುರು-ಶಿಷ್ಯನಿಗೆ ಸೂಚಕವಾಗಿ ದೇವರ ಬೋಧನೆ ಹೇಳುವ ಮಧ್ಯವರ್ತಿಯಾಗಿದ್ದು ಕಂಡುಬರುತ್ತದೆ.

ನೀರಲಕೇರಿ ಬಸವಲಿಂಗರು ಸುಮ್ಮನೆ ದೊರೆಯುವುದೆ ಸುಲಭ ಮುಕ್ತಿ | ಹಮ್ಮಿನಿಂದ ವ್ಯರ್ಥ ಸಾಯದಿರಣ್ಣಾ| ಈ ಮಾತು ಅಂತರಂಗ ತತ್ವದ ಪ್ರತೀಕವಾಗಿದೆ.

> "ಭಜನೆ ಮಾಡಲೊ ಮನುಜಾ | ಶ್ರೀ ಗುರು ಭಜನೆ
> ಭಜನೆ ಮಾಡು | ಕುಜನರ ಸಂಗವಳಿದು"[೧೨]

ಭಜನೆಗೆ ಏಕತಾರಿ ಬಹು ಅವಶ್ಯವಾದದ್ದು. ಏಕತಾರಿ ವಾದ್ಯವು ಸಾಧನೆಗೆ ಇಂಬುಕೊಡುವ ಶಕ್ತಿಯನ್ನು ಪಡೆದಿದೆ. ಏಕತಾರಿ ನಾದವು ಸಾಧಕನಿಗೆ ಪರವಶವಾಗುವಂತೆ ಮಾಡುತ್ತದೆ. "ಲೌಕಿಕ ವಿಚಾರವನ್ನು ಮರೆಯಿಸಿ ಅನುಭಾವದ ನೆಲೆಗೆ ಮನಸ್ಸನ್ನು ಹದಗೊಳಿಸಲು ಅನುವು ಮಾಡಿಕೊಡುತ್ತದೆ. ಏಕತಾರಿ ಹಿಡಿಯುವುದೆಂದರೆ ಗುರುವನ್ನು ನಂಬುವುದು ಎಂದರ್ಥ. "ಗುರು ಮುಟ್ಟಿ ಗುರುವಾಗಬೇಕೆಂಬ" ಮಾತಿನಲ್ಲಿ ಛಲವಿದೆ. ಈ ಅನುಭಾವಿ ಪಂಥದವರು ದೇವರ ಅಸ್ತಿತ್ವವನ್ನು ಕುರಿತು ಚಿಂತಿಸಲು ಹೋಗಿಲ್ಲ. ಸಾಧನೆಯ ಮೂಲಕ ಅನುಭಾವದ ನೆಲೆಗೆ ತಲುಪಿ ಅಂತರಂಗದ ಧ್ವನಿಗೆ ಮಹತ್ವ ನೀಡುವ ನಿಲುವಿಗೆ ಬದ್ಧರಾಗಿದ್ದಾರೆ."[೧೩]

ಗೊಬ್ಬೂರು ಮಾರ್ತಾಂಡಪ್ಪ ಗುರು ಖೇಮಣ್ಣನನ್ನು ಕಾಣಲು ೩, ೪ ಮೈಲು ದೂರವಿರುವ ಹಾಳು ವೆಂಕಟಾಪುರಕ್ಕೆ ಹೋಗಿ ಬೆಳಕು ಹರಿಯುವ ಮೊದಲೇ ವಾಪಸ್ಸಾಗುತ್ತಿದ್ದನಂತೆ. ಇದೇ ತೆರನಾಗಿ ೧೨ ವರ್ಷಗಳವರೆಗೆ ತಿರುಗಾಡಿದನೆಂಬ ವಿವರಗಳು ಲಭ್ಯವಾಗುತ್ತದೆ. ಜಹೀರಾಬಾದ್ ತಿಪ್ಪಣ್ಣನು "ಇದ್ದಾಗ ಮುಕ್ತಿ ಪಡೆಯಬೇಕ್ರಿ ಸತ್ತ ಮೇಲೆ ಅನ್ನುವುದು ಸುಳ್ಳೇ ನೋಡ್ರಿ ಹದಿನಾಲ್ಕು ಲೋಕಂಗಳ ಸುಳಿ ಬೇಕ್ರಿ ಸತ್ಯ ಲೋಕದ ಸಾರ ಸವಿ ಬೇಕ್ರಿ"[೧೪]

ಎನ್ನುವ ತತ್ವಪದಕಾರರಲ್ಲಿ 'ಗುರು' ಎನ್ನುವುದು ಒಂದು ಗುರಿಯಾಗಿ ಅಂತರಂಗದ ಬೆಳಕಾಗಿ ಶಕ್ತಿಯಾಗಿ ಪ್ರವಹಿಸಿದ್ದನ್ನು ಕಾಣುತ್ತೇವೆ. ಸಾಂಪ್ರದಾಯಿಕ ಗುರುವಿನ ಭೌತಿಕ ಹಾಗೂ ಜಡ ಪರಿಕಲ್ಪನೆಗಳ ಮೀರುವ ಕ್ರಿಯಾಶೀಲ ಸಂವೇದನೆಯಾಗಿ ಗುರುವನ್ನು ತತ್ವಪದಕಾರರು ಪರಿಭಾವಿಸಿರುವುದು ಒಂದು ಹೊಸ ಆಯಾಮವಾಗಿದೆ.

### ೪.೧.೨. ಲಿಂಗ

ನಮ್ಮ ವಾಸ್ತವ ಬದುಕಿನ ಸಮಾಜದಲ್ಲಿ ಲಿಂಗ ಧರಿಸಿದವನು ನಿರ್ದಿಷ್ಟ ಜಾತಿ ಪ್ರಣೀತ ಸಂಪ್ರದಾಯನಿಷ್ಠ ವ್ಯಕ್ತಿಯಾಗಿ ಕಂಡುಬರುವನು. ಇಂಥ ಭಾವನಾತ್ಮಕ ಶ್ರದ್ಧೆಗಳನ್ನು ನಾವು ಒಪ್ಪಿಕೊಂಡಿದ್ದೇವೆ. ಆದರೆ ತತ್ವಪದಕಾರರು ಜನಜನಿತವಾದ ತಾತ್ವಿಕ ರೂಪಕಗಳಿಗಿಂತ ಭಿನ್ನವಾಗಿ ಲಿಂಗದ ಬಗ್ಗೆ ಮಾತನಾಡುವರು. ಅಂದು ವೀರಶೈವರಲ್ಲಿ ನಡೆದ ಕರಸ್ಥಲ ಲಿಂಗ ವಿರೋಧ ಧ್ವನಿ ಕಾರಣವಾಗಿ ತತ್ವಪದಕಾರರ ಜೀವನದ ಮೇಲೆ ಒಂದು ದೃಢ ನಿಶ್ಚಿತ ರೂಪದಲ್ಲಿ ಪ್ರಕಟವಾಗುತ್ತದೆ. ಸಮಾಜದಲ್ಲಿ ಲಿಂಗಧರಿಸಿದವನು ಸಾಂಸ್ಥಿಕ ದರ್ಮದ ಸವಲತ್ತನ್ನು ಪಡೆದುಕೊಂಡ ವ್ಯಕ್ತಿ ಎಂಬ ಅಂಶ ದಟ್ಟವಾಗಿತ್ತು. ಆದರೆ ಧರ್ಮದಿಂದ ವಂಚಿತರಾದ ಶ್ರಮಿಕ ಶೋಷಕ ವರ್ಗವು ಲಿಂಗವೆಂದರೆ, ಅದು ಅನುಭವಕ್ಕೆ ಅರಿವಾಗುವ ಶಬ್ದದ ಆಚೆಗಿರುವ ಆತ್ಮವೇ ಲಿಂಗವೆಂದರು. "ಪ್ರಕೃತಿಯ ಬಯಲೇ ಲಿಂಗವೆಂದರು". ಡಾ.ವೀರೇಶ ಬಡಿಗೇರರು ಹೇಳುವಂತೆ "ವಚನಕಾರರು ಸ್ಥಾವರ ವಿರೋಧಿಗಳೆಂದು ಒಪ್ಪುವ ಹಾಗೆ ದೇಹವನ್ನು ಸ್ಥಾವರಗೊಳಿಸುವ ಆಲಯವನ್ನಾಗಿಸುವ ಮತ್ತು ಪವಿತ್ರೀಕರಿಸುವ ಆಲೋಚನೆಗಳನ್ನು ಒಪ್ಪುವ ಬಗೆ ಯಾವುದು? ಭಾಷೆಗೆ ಊನವಿಲ್ಲದ ಸದ್ಭಕ್ತರ ಆಶ್ರಯಕೆ ನಿಜವಾಸವ ಮಾಡುವ ಗುಣದ ಮತ್ತು ನೇಮದ ಬಾಚಿಕಾಯಕದ ಬಸವಯ್ಯ ಮತ್ತು ಕಾಮಾಟ ಭೀಮಣ್ಣನಂಥವರು ತಮ್ಮ ಕಾಯಕದಲ್ಲಿಯೇ ಲಿಂಗ ಪರಿಕಲ್ಪನೆಯನ್ನು ಕಂಡುಕೊಂಡವರು."[೧೫] ವಚನಕಾರರ ಅನುಭವಗಳನ್ನು ಕ್ರಿಯಾತ್ಮಕವಾಗಿ ಒಪ್ಪಿಕೊಂಡ ನಂತರವೇ ತತ್ವಪದಕಾರರಲ್ಲಿ ಲಿಂಗತ್ವಕ್ಕೆ ಸ್ಥಿರತೆ ಬಂದಿತು.

ಸಾಮಾನ್ಯ ಜನರ ಅಳಲನ್ನು ತಣಿಸುವ ತತ್ವಪದಕಾರರ ಲಿಂಗಪರಿಕಲ್ಪನೆಯ ಮೌಲ್ಯಗಳು ಭಾವಲಿಂಗ ಮತ್ತು ಪ್ರಾಣಲಿಂಗಗಳಾಗಿ ತತ್ವಪದಕಾರರ ಆಧ್ಯಾತ್ಮಿಕ ಲೋಕದಲ್ಲಿ ಸೂಕ್ಷ್ಮ ಶರೀರದ ಅಂಗಗಳೆಂದು ಸರಳವಾಗಿ ಒಪ್ಪಿಕೊಳ್ಳುವ ತಾತ್ವಿಕ ಜಿಜ್ಞಾಸೆಗಳು ಹೀಗೆ ಪ್ರಾರಂಭವಾದವೆಂಬುದನ್ನು ಗಮನಿಸಬೇಕು. ಖೇಮಣ್ಣನು ಹೇಳುವಂತೆ - ಜೀವವೇ ಶಿವಲಿಂಗದಿಹ ಜ್ಞಾನದ ಕೇಳಿ ನೋಡಿ | ಭಾವದೊಳಗೆ ಭಜಿಸುತಲಿ ಭಾವ ಬ್ರಹ್ಮನಾಗುವಿ - ಇಲ್ಲಿ ತತ್ವಪದಕಾರನ ಬದಲಾದ ಆಶಯ ಆತನ ದಿಟ್ಟ ಉತ್ತರ ವಿಶಿಷ್ಟವಾಗಿ ಗಮನ ಸೆಳೆಯುತ್ತದೆ.

ಬ್ರಹ್ಮನಿಂದ ಸೃಷ್ಟಿಯಾದ ಈ ದೇಹವು ಮತ್ತೆ ಪ್ರಕೃತಿಯಲ್ಲಿ ಲೀನವಾಗುವುದು, ಅದನ್ನು ಲಿಂಗವೆನ್ನುವ ಪರಿಕಲ್ಪನೆ ಕೊಡುತ್ತಾರೆ. ಆದರೆ ತತ್ವಪದಕಾರರು ಎಲ್ಲಿಯೂ ಲಿಂಗದೀಕ್ಷೆ, ಲಿಂಗವೇ ಜಂಗಮನೆಂದು ಹೇಳಿಕೊಂಡಿಲ್ಲ. ಇವರು ಗುರುತಿಸಿದಂತೆ ಲಿಂಗಧಾರಣೆ ಎಂದರೆ ತಮ್ಮ ಮಾನಸಿಕ ವ್ಯಕ್ತಿತ್ವ ಸಂವೇದನೆಯನ್ನು ಕುಗ್ಗಿಸುವುದುದಾಗಿದೆ ಎಂದು ಅಭಿವ್ಯಕ್ತಿಸುವರು. ತತ್ವಪದಕಾರರು ಅಧ್ಯಾತ್ಮಿಕ ಕ್ಷೇತ್ರದಲ್ಲಿ ಹೊಸ ಆಶಯಗಳೊಂದಿಗೆ ಹೊಸ ತೆರನಾದ ಮೌಲ್ಯಗಳನ್ನು ಸೃಷ್ಟಿ ಮಾಡಿದರು. ಇವರ ಲಿಂಗ ಪರಿಕಲ್ಪನೆಯಂಥ ಸುಪ್ತಮನಸ್ಸಿನ ವಿಚಾರಗಳು ಆಧುನಿಕ ಪರಂಪರೆಯ ಪಾರಮಾರ್ಥಿಕ ಕ್ಷೇತ್ರದಲ್ಲಿ ಅನುಸಂಧಾನವಾಗುತ್ತಲೇ ಇರುತ್ತವೆ. ಸುಪ್ತವೆಂಬ ಅಂಶವೇ ಕಣ್ಣಿಗೆ ಕಾಣದ ಅಮೂರ್ತ ಕಲ್ಪನೆಯ ಮಾನಸಿಕ ಗುರಿಯೆ ಲಿಂಗದ ವಿಚಾರವಾಗಿದ್ದು ಇದು ವರ್ತಮಾನ ಕಾಲದಲ್ಲಿ ಧ್ವನಿಸುತ್ತಲೇ ಇರುತ್ತದೆ. ಅಕ್ಕಸಾಲಿಗ ವೃತ್ತಿಯ ಖೇಮಣ್ಣ ಆದಿ ಅಮಾತ್ಯಪ್ಪ, ವೈಶ್ಯ ಕುಲದ ತಾಳಪಲ್ಲಿ ವೆಂಕಯ್ಯ, ದಲಿತನಾದ ಯರ್ರಮಾರೆಪ್ಪನಂಥ ತತ್ವಪದಕಾರರು ದೇವರ ಅಸ್ತಿತ್ವವನ್ನು ನಿರಾಕರಿಸಿ ಮಾನಸಿಕ ಸ್ಥಿತ್ಯಂತರದ ಲಿಂಗ ಪರಿಕಲ್ಪನೆಗೆ ವಿವಿಧ ರೂಪ, ಆಕಾರ, ಬಣ್ಣಗಳನ್ನು ಕೊಟ್ಟರೆಂಬುದು ಅಷ್ಟೇ ಸತ್ಯವಾಗಿದೆ.

> "ಸದ್ಭಕ್ತಿಗಳಿಗೆ ಮುಕ್ತಿ ಪದವಿದು | ಓಂ ಶಿವ ಶಿವಾ
> ನಾಲ್ಕು ದಳದ ಕಮಲದಲ್ಲಿ | ನಾದ ನುಡಿವ ಲಿಂಗವು
> ಮೋದವಿಡದ ಲಿಂಗವು | ನೋಡುವ ಇಷ್ಟಲಿಂಗವು
> ಆರುದಳದ ಕಮಲದಲ್ಲಿ | ಹಾರಿ ಬೀಳ್ವ ಲಿಂಗವು
> ನೋಡು ಪ್ರಾಣಲಿಂಗವು | ಹತ್ತುದಳದ ಕಮಲದಲ್ಲಿ
> ಹತ್ತಿ ಇರುವ ಲಿಂಗವು ಸುತ್ತಿಕೊಂಡ ಲಿಂಗವು"[೧೬]

ತತ್ವಪದಕಾರರು ಈ ದೇಹವನ್ನೇ ಕೇಂದ್ರೀಕೃತವಾಗಿಸಿ ಇದರಲ್ಲಿಯೇ ಅಖಂಡ ಲೋಕವನ್ನು ಕಾಣಬಲ್ಲರು. ಲಿಂಗ ಸ್ವರೂಪಿಯಾದ ಪಿಂಡಾಡದಲ್ಲಿ ಅಷ್ಟದಳ ಕಮಲವಿದೆ. ತತ್ವಪದಕಾರ ತನ್ನ ಸೃಜನ ಶೀಲತೆಯ ಅಂಶವನ್ನು ಈ ರೀತಿ ಗುರುತಿಸುತ್ತಾನೆ. ಯೋಗದಲ್ಲಿ ಬರುವ ಆರು ಚಕ್ರಗಳು ಮೂರು ಮಂಟಪ ಎನಿಸಿಕೊಳ್ಳುವ ಒಂಭತ್ತು ಸ್ಥಾನಗಳಿವೆ. ಆಧಾರ ಚಕ್ರ-ನಾಲ್ಕುದಳದ ಕಮಲವಾಗಿದ್ದು ಇದು ಗುದ ಸ್ಥಾನದಲ್ಲಿದೆ. ನಾದದಿಂದ ಕೂಡಿದ ಇಷ್ಟಲಿಂಗವೆಂದು ಗುರುತಿಸಿಕೊಂಡಿದೆ. ಇದರ ಬಣ್ಣ ಹಳದಿ. ಸ್ವಾದಿಷ್ಟ ಚಕ್ರವು - ಗುಹ್ಯ ಸ್ಥಾನದಲ್ಲಿರುವುದು. ಆರು ದಳಗಳಿಂದ ಕೂಡಿದ ಶ್ವೇತವರ್ಣವಾಗಿದೆ, ಗುರು-ಲಿಂಗರ ಸ್ಥಾನವಿದಾಗಿದೆ. ಮಣಿಪುರ ಚಕ್ರವು-ನಾಭಿಸ್ಥಾನದಲ್ಲಿರುವುದು ಹತ್ತುದಳಗಳಿಂದ ಕೂಡಿದ್ದು ನೀಲವರ್ಣದ್ದಾಗಿದೆ. ಇದು ಶಿವಲಿಂಗವೆಂದು ಗುರುತಿಸಿಕೊಂಡಿದೆ. ಅನಾಹುತ ಚಕ್ರವು-ಹೃದಯ ಸ್ಥಾನದಲ್ಲಿದ್ದು, ಹದಿನಾರು ದಳಗಳಿಂದ ಕೂಡಿದೆ. ಕೆಂಪುವರ್ಣದಿಂದ ಗುರುತಿಸಿಕೊಂಡು ಇಲ್ಲಿ ಜಂಗಮ

ಲಿಂಗವೆಂದು ಹೇಳುವುದು ಕಂಡುಬರುತ್ತದೆ. ವಿಶುದ್ಧ ಚಕ್ರವು-ಕಂಠಸ್ಥಾನದಲ್ಲಿದ್ದು ಹದಿನಾರು ದಳಗಳಿಂದ ಗಮನ ಸೆಳೆದಿದೆ. ಇದು ಪ್ರಸಾದ ಲಿಂಗದ ಸ್ಥಾನವೆಂದು ತೀರ್ಮಾನಿಸಲಾಗಿದೆ. ಅಗ್ನಿ ಚಕ್ರವು ಎರಡು ದಳಗಳಿಂದ ಕೂಡಿದ್ದು ಎರಡು ಹುಬ್ಬುಗಳ ಮದ್ಯದಲ್ಲಿದ್ದು, ಅನಂತ ಮಿಂಚಿನ ವರ್ಣಗಳು ಮಹಾಲಿಂಗ ಸ್ಥಾನವೆಂದು ಗುರುತಿಸಿಕೊಂಡಿದೆ. ಹಣೆಯಲ್ಲಿ ಶಿಖಾ ಚಕ್ರವಿದ್ದು ಇದಕ್ಕೆ ಸಹಸ್ರದಳಗಳಿದ್ದು ಇದು ಇಷ್ಟಲಿಂಗವಾಗಿದೆ.

ಬ್ರಹ್ಮಚಕ್ರವು - ಶಿರೋಮಧ್ಯದಲ್ಲಿರುವುದು. ಐದು ದಳಗಳಿಂದ ಕೂಡಿದ್ದು ಇದನ್ನು ಪ್ರಾಣಲಿಂಗ ಸ್ಥಾನವೆಂದು ಗುರುತಿಸಲಾಗಿದೆ. ಪಶ್ಚಿಮ ಚಕ್ರವು-ತಲೆಯ ಹಿಂಭಾಗದಲ್ಲಿದ್ದು ಎಂಟುದಳಗಳಿಂದ ಕೂಡಿದ ಭಾವಲಿಂಗವಿದಾಗಿದೆ.

ತತ್ವಪದಕಾರರಲ್ಲಿ ಕಾಣುವ ಇಷ್ಟಲಿಂಗದ ಪರಿಕಲ್ಪನೆಯನ್ನು ಧಿಕ್ಕರಿಸಿ ಅದನ್ನು ಆತ್ಮದ ಅವಯವಗಳಿಗೆ ಸಂಬಂಧಿಸಿ ಹೇಳುವ ಸ್ಪಷ್ಟತೆ ಇಲ್ಲಿ ಕಂಡುಬರುತ್ತದೆ. ಅಂದು ಅಲ್ಲಮಪ್ರಭುವಿನಿಂದ ರೂಪಿತವಾದ ನಿರಾಕಾರ ತತ್ವವು ಮತ್ತೆ ತತ್ವಪದಕಾರರಲ್ಲಿ ಪುನರ್‌ಸೃಷ್ಟಿ ಹೇಳಿಕೆಗಳಾಗಿ ಕಂಡುಬರುತ್ತವೆ. ಹೀಗಾಗಿ ಇವರ ಲಿಂಗ ಪೂಜಾಗ್ರಹಿಕೆಯನ್ನು ಏಕಾಗ್ರತೆಯ ಮೂಲಕ ಲಿಂಗದ ಪರಿಭಾಷೆಯಲ್ಲಿ ಪರಿಭಾವಿಸಿದರು. ಲಿಂಗ ದೀಕ್ಷೆಗಿಂತ ಗುರು ದೀಕ್ಷೆಗೆ ಹೆಚ್ಚು ಒತ್ತು ಕೊಟ್ಟು ಅದ್ವೈತ ಭಕ್ತಿಯನ್ನು ಹೆಚ್ಚು ವಿಶಾಲವಾಗಿಸಿದರು. ''ಓಂ ನಮಃ ಶಿವಾಯ'' ಮಂತ್ರಕ್ಕೆ ಪ್ರತಿಯಾಗಿ, ''ಓಂ ಗುರು ಲಿಂಗಾಯ ನಮಃ'' ತತ್ವದ ರಚನಾಕ್ರಮವನ್ನು ಅಳವಡಿಸಿಕೊಂಡರು. ಆಂತರಿಕ ಶಕ್ತಿಗೆ ಬದ್ಧವಾಗಿ ಕರಸ್ಥಲದ ಲಿಂಗವನ್ನು ಏಕದೇವೋಪಾಸನಾ ತತ್ವವನ್ನು ನಿರಾಕರಿಸಿ ಬಹುದೇವತೋಪಾಸನದಿಂದ ಸಾಮಾನ್ಯ ಜನರಿಗೆ ಹತ್ತಿರವಾದರೆಂದು ಹೇಳಬಹುದು. ಜಹೀರಾಬಾದ್ ತಿಪ್ಪಣ್ಣತಾತನು ಹೇಳುವಂತೆ ''ಇಷ್ಟ ಭಾವಲಿಂಗಯ್ಯ ಪ್ರಾಣಲಿಂಗದೊಳು ಬೆರೆಯಯ್ಯ | ಸ್ಥೂಲ ಸೂಕ್ಷ್ಮ ಕಾರಣ ಕಳೆಯಯ್ಯಾ.'' ಇದು ತತ್ವಪದಕಾರರು ಲಿಂಗದ ಬಗ್ಗೆ ತೋರುವ ವಿಶೇಷ ಪ್ರೀತಿಯಾಗಿದೆ. ತಮ್ಮ ಧರ್ಮದ ಅರಿವಿನ ಎಲ್ಲೆಯನ್ನ ವಿಸ್ತರಿಸಿ ಕೊಳ್ಳುವ ಮಹತ್ವಾಕಾಂಕ್ಷಿಗಳಾಗಿ ಕಂಡುಬರುತ್ತಾರೆ.

''ಅರಿವಾದವನು ನಾನೇ ನಿಜ | ಮರೆವೆಯಾದವನು ನಾನೆ ನಿಜ
ಅರಿವು ಮರಿವು ಎರಡೂ ಮೀರಿದ | ತೂರ್ಯಾತೀತನು ನಾನೆ ನಿಜ
ಅಂಗವಾದವನು ನಾನೆ | ನಿಜ ಲಿಂಗವಾಗಿದ್ದವನು ನಾನೆ ನಿಜ
ದೃಕ್ಕು ದೃಶ್ಯಗಳೆರಡರ ವಾದ್ಯದಿ | ದುಷ್ಟವಾಗಿದ್ದವ ನಾನೆ ನಿಜ
ಗುರುವಾಗಿದ್ದ ನಾನೆ ನಿಜ | ವರಶಿಷ್ಯನಾಗಿದ್ದವ ನಾನೆ ನಿಜ
ಗುರು ಶಿಷ್ಯರ ಇಬ್ಬರ ನಡುವೆ | ಗುಟ್ಟಾಗಿದ್ದವ ನಾನೆ ನಿಜ''[೧೭]

ತತ್ವಪದಕಾರ ಅರಿವು ಮರಿವುಗೆ ಜವಾಬ್ದಾರಿಯುತವಾಗಿ ಅಭಿವ್ಯಕ್ತಿಸುತ್ತಾನೆ. ಆದರೆ ಕುರುಹನ್ನು ಬಳಸಲಿಲ್ಲ. ಅಂಗದಲ್ಲಿ ಲಿಂಗವಾಗಿದ್ದೇನೆಂದು ಬಳಸುತ್ತಾನೆ. ಈ ದೇಹದಲ್ಲಿ ಬಿಂದುವಾಗಿದ್ದೆ ಎನ್ನಲಿಲ್ಲ. ಮನದ ಲಿಂಗಕ್ಕೆ ದೃಶ್ಯದ ಕಲ್ಪನೆ ಕೊಡುತ್ತಾನೆ. ಆದ್ದರಿಂದ ತತ್ವಪದಕಾರರು ಇಂಥಾ ವಿಚಾರಗಳನ್ನು ಆಕರ್ಷಕವಾಗಿ ಹೇಳುವುದರಲ್ಲಿ ಯಶಸ್ವಿಯಾದರು. ಕೂಡಲೂರು ಬಸವಲಿಂಗಪ್ಪ, ಗೊಬ್ಬೂರು ಹಂಪಣ್ಣ, ನೀರಲಕೇರಿ ಬಸವಲಿಂಗರು, ಘನಮಠ ನಾಗಭೂಷಣರಂಥಾ ವೀರಶೈವ ತತ್ವಪದಕಾರರು ಇಂಥಾ ವಿಚಾರಗಳನ್ನು ನಿರ್ಭಯವಾಗಿ ಮಾತನಾಡದೆ ಭಾವುಕ ಅಂಶವನ್ನು ಕಳೆದುಕೊಳ್ಳದೆ ತಮ್ಮ ಪರಂಪರೆಗೆ ಆತ್ಮಲಿಂಗದಲ್ಲಿ ಭರವಸೆ ನೀಡುವ ಭಕ್ತಿಕೇಂದ್ರಿತ ತತ್ವಪದಕಾರರಾಗಿದ್ದಾರೆ.

ಧರೆಗೆ ದೊಡ್ಡವರ ಕತೆಯಲ್ಲಿ ಮಂಟೇಸ್ವಾಮಿಯ ಅನುಯಾಯಿಗಳು ವೀರಶೈವಧರ್ಮದ ವಿರುದ್ಧ ಧಂಗೆ ಏಳುತ್ತಾರೆ. ಕಾವಿ ಕಲ್ಯಾಣವೆಂಬ ಪ್ರತಿಮೆಯೊಂದಿಗೆ ಲಿಂಗಧಾರಣಾ ಸಂಬಂಧವನ್ನು ಏಳೆಂಬತ್ತು ಕೋಟಿ ಜೀವರಾಶಿಗೆ ಕಾವಿಕಲ್ಯಾಣದವರು ಲಿಂಗಧಾರಣೆ ಮಾಡುತ್ತಾರೇನು? ಎಂದು ಪ್ರಶ್ನಿಸುವ ಪ್ರಸಂಗ ಈ ಕಾವ್ಯದಲ್ಲಿ ಬರುತ್ತದೆ.

> ''ನೀವು ಕಟ್ಟಿದ ಲಿಂಗ ತೋರಿಸಿದ್ರಾ
> ಕಲ್ಯಾಣಕ್ಕೆ ಬಿಡ್ತೀವಪ್ಪಾ
> ಕಂದಲ್ಲಾಡಿದ ಮಾತಾ ಗುರುದೇವನ
> ಕೇಳ್ಕೊಂಡು ಶಾಭಾಸ ನನ ಕಂದ
> ಕಟ್ಟಿದ ಲಿಂಗ ಬೇಡ ಆತ್ಮಲಿಂಗ
> ತೋರಸ್ತೀನಿ ನೋಡಪ್ಪ ಅಂದರಂತೆ''[೧೮]

ಇಲ್ಲಿ ಪ್ರಸ್ತಾಪಿತವಾದ ಲಿಂಗದೀಕ್ಷಾ ಪರಿಕಲ್ಪನೆಯು ಮೂರ್ತಲಿಂಗದ ಹಂಗನ್ನು ಪ್ರಶ್ನಿಸುವ ನೆಲೆಯದ್ದಾಗಿದೆ. ಭೌತಿಕ ಹಾಗೂ ಆಡಂಬರದ ಲಿಂಗ ಪರಿಕಲ್ಪನೆಯ ಸಾಂಪ್ರದಾಯಿಕ ನೆಲೆಯನ್ನು ಪಲ್ಲಟ ಗೊಳಿಸುತ್ತಾರೆ. ಅವರು ಎತ್ತುವ ಆತ್ಮಲಿಂಗದ ಪರಿಕಲ್ಪನೆ ಹೊಸ ವೈಚಾರಿಕ ಆವರಣದ ಸೃಷ್ಟಿಯಾಗಿದೆ. ಮಂಟೇಸ್ವಾಮಿ ಮತ್ತು ತತ್ವಪದಕಾರರ ವಿಚಾರಗಳಿಂದ ಲಿಂಗ ಸಂಸ್ಕೃತಿಯ ಬಗ್ಗೆ ಆದ ನೋವು ಆತ್ಮದ ಎಚ್ಚರವು ಸಮಕಾಲೀನ ಸ್ಥಿತ್ಯಂತರದ ಬದುಕಿನಲ್ಲಿ ಗುರುತಿಸಿಕೊಳ್ಳುತ್ತಾ ಹೋಗುತ್ತದೆ. ರಾಂಪೂರ ಭೀಮಣ್ಣ, ಲಕ್ಷ್ಮಣ ದಾಸರಂಥ ತತ್ವಪದಕಾರರಿಗೆ ಜಾತಿ ಸೂಚಕವಾದ ಲಿಂಗವಿಲ್ಲವೆನ್ನುವ ಕೊರಗಿದ್ದರೂ ಲಿಂಗಜಪ ಮಾಡುವ ಸ್ವಾತಂತ್ರ್ಯವು ನಮಗಿದೆ ಎನ್ನುತ್ತಾರೆ.

ಬಹಳಷ್ಟು ತತ್ವಪದಕಾರರು ಆಧ್ಯಾತ್ಮಿಕ ಅನುಭಾವದ ಕೊನೆಯ ಹಂತವನ್ನು ಪ್ರಕೃತಿ, ಪುರುಷ, ದೇಹ, ಆತ್ಮ, ಲಿಂಗಾಂಗ ಸಾಮರಸ್ಯವೆಂದು ಎಚ್ಚರಿಸುತ್ತಾರೆ. ಲಿಂಗವನ್ನೇ ಪ್ರಿಯತಮವಾಗಿಸಿ ನೋಡುವ ಗುಣಗಳು ಇವರಲ್ಲಿ ದಟ್ಟವಾಗಿ ಅಭಿವ್ಯಕ್ತಗೊಂಡಿದೆ.

"ಇನ್ಯಾಕ ಎನ್ನ ಮದಿವಿ ಚಿಂತೆ | ನಿಮಗೆ ಎನ್ನ ಗುರು
ತಂದೆ ಲಿಂಗವನು ಕೊಟ್ಟ ಬಳಿಕ | ಹೆಣ್ಣೆ ಬಾ
ನೀನೆಂದು. | ಅರಷಿಣವ ಹಚ್ಚಿ | ತನ್ನ ನಿರಾಕಾರದ
ನೀರನೆರೆದು ಬಣ್ಣ ಬಿಳಿದುಡಿಸಿ | ಬಾಸಿಂಗವನೆ ತಂದು
ಕಣ್ಣಿಗೆ ಗೋಚರವಾಗಿ ಕಟ್ಟಿದ ಬಳಿಕ | ಪಂಚತತ್ವ
ಗಳ ಪಂಚಕಲಶಗಳ ಹೂಡಿ |"[೧೯]

ಶರಣ ಸತಿ, ಲಿಂಗ ಪತಿ ತತ್ವವು ಸಾಮಾನ್ಯಾರ್ಥದಲ್ಲಿ ಯಜಮಾನ ಒಡೆಯರೆಂಬ ವಿವರಗಳು ದೊರಕುತ್ತವೆ. ತತ್ವಪದಕಾರನ ಇಂಥ ಸಾಹಿತ್ಯಿಕ ಸೂಕ್ಷ್ಮ ಅಂಶಗಳು ಇಸ್ಲಾಂ ಸಂಸ್ಕೃತಿಯ ಪ್ರಭಾವ ಮತ್ತು ಅಂದಿನ ಸಮೂಹದ ಸಾಮಾಜಿಕ ಕಟ್ಟಳೆಗಳೆಂದು ಸ್ಪಷ್ಟವಾಗುತ್ತದೆ. ಸ್ತ್ರೀಯನ್ನು ಭೋಗದ ವಸ್ತುವನ್ನಾಗಿ ನೋಡುವ ಪ್ರವೃತ್ತಿ ತತ್ವಪದಕಾರರ ಬದುಕಿನ ಸಂದರ್ಭದಲ್ಲಿತ್ತೆಂದು ಗುರುತಿಸಬಹುದು. ವಚನಕಾರರು ಹೇಳುವ ಸತಿಪತಿ ಭಾವ ಸಂವೇದನೆಗೂ ತತ್ವಪದಕಾರರು ಹಾಡುವ "ಎನ್ನ ತಂದೆ ಗುರು ಲಿಂಗವನು ಕೊಟ್ಟ ಬಳಿಕ | ಹೆಣ್ಣೆ ಬಾ ನೀನೆಂದು" ಹೆಣ್ಣನ್ನು ಭೋಗದ ಪ್ರತೀಕಗಳಾಗಿಸಿ ವರ್ಣಿಸಿ ಹಾಡಿದ್ದು ಮುಸ್ಲಿಂರ ಘಜಲ್ ಹಾಡುಗಳ ಪ್ರೇರಣೆ ಇರಬೇಕೆಂದೆನಿಸುತ್ತದೆ. ಅಂದಿನ ಸಮಾಜದಲ್ಲಿ ಬಹು ಪತ್ನಿತ್ವದ ಒಲವೂ ಸಹಿತ ಭೋಗ ಪ್ರಧಾನವಾದ ಆಚರಣೆಯಾಗಿದೆ. "ಪತಿಗುರುವು ಸತಿ ಶಿಷ್ಯ | ಅತಿ ಯೋಗದಲಿ ಕುಳಿತು ಸುತನ ಪಡೆದರು ಒಂದು ಮಥನದಿಂದ". ಇನ್ನೊಂದು ಪದ್ಯದಲ್ಲಿ "ಹಸ್ತಿನಿ ಜಾತಿಯವಳೆಂದು ಅವನನ್ನು ಕೂಡಿ ಮಲಗಿದ್ದೆ ತಂಗಿ"[೨೦] ಇಲ್ಲಿ ಸ್ತ್ರೀಯನ್ನು ಹಿಂದೆ ತಳ್ಳಲ್ಪಟ್ಟ ತತ್ವಪದಕಾರ ಅವಳಿಗೆ ಪ್ರಿಯತಮೆಯ ಪಾತ್ರವನ್ನು ನೀಡುವುದರ ಹಿಂದಿನ ಉದ್ದೇಶ ಏನಾಗಿರಬಹುದು? ಇದು ಕೂಡಲೂರು ಬಸವಲಿಂಗಪ್ಪನ ಅನಿಸಿಕೆಯಾಗಿದೆ.

ಆಧ್ಯಾತ್ಮದಲ್ಲಿ ತತ್ವಪದಕಾರನ ಒಟ್ಟು ಗ್ರಹಿಕೆ ಕರಸ್ಥಲದ ಲಿಂಗಕ್ಕಿಂತ ಮನಸ್ಥಲದ ಲಿಂಗವನ್ನು ಮುಖ್ಯವಾಗಿಸುವುದಾಗಿದೆ. ಮನದ ಭಾವವು ನವ ಮದುಮಗಳಾಗಿ, ಅಂದರೆ ನಿರಾಕಾರ ಲಿಂಗಕ್ಕೆ ಮದುವೆಯಾದನು, ಲಿಂಗತತ್ವದ ವಿರೋಧಗಳನ್ನು ತತ್ವಪದಕಾರ ವ್ಯಕ್ತನೆಲೆಯಿಂದ ನೋಡದೆ ಅನುಭಾವ ನೆಲೆಯಿಂದ ಗ್ರಹಿಸುವನು.

ವಚನಕಾರನಾದಂಥ ಅಂಬಿಗರ ಚೌಡಯ್ಯ, ಹೆಂಡದ ಮಾರಯ್ಯನಂಥವರು ಕರಸ್ಥಲದ ಲಿಂಗವನ್ನು ದಿಕ್ಕರಿಸಿದ್ದು ಕಾಣುತ್ತೇವೆ. ಚೌಡಯ್ಯನಂತೂ ಲಿಂಗವನ್ನು ಉಂಗುಷ್ಟಕ್ಕೆ ಹೋಲಿಸುತ್ತಾನೆ. ಅಂಬಿಗರ ಚೌಡಯ್ಯನಂತೂ ಲಿಂಗಪರಿಕಲ್ಪನೆಯನ್ನು ವಿರೋಧಿಸುವ ಆಧುನಿಕ ಬಂಡಾಯದ ಕವಿಯಾಗುತ್ತಾನೆ. "ಅಂಗಗುಣ ಅಳಿದ ಮೇಲೆ ಆ ಅಂಗವೇ ಲಿಂಗವೆಂದು ಒಪ್ಪಿ ಲಿಂಗದ ಕುರುಹಿನ ಪರಿಮಿತಿಯ ಕಡೆಗೆ" ಬೆಟ್ಟು ಮಾಡಿ ತೋರಿಸುವನು. ಈ ನಿಟ್ಟಿನಿಂದ ಕೆಳವರ್ಗದ ವಚನಕಾರರ ಧೋರಣೆಗಳು ತತ್ವಪದಕಾರರ

ಲಿಂಗದ ಸಾಂಕೇತಿಕ ಸಾಮ್ಯಗಳು ಒಂದೇ ರೀತಿಯಲ್ಲಿ ಕಾಣುತ್ತವೆ. "ಪ್ರಾಣಲಿಂಗ ಪೂಜೆಯು ಪ್ರಾಣದೊಳಗೆ ಮಾಡಿ ನಾವು" ಎಂದು ಅಂತರಂಗದ ಸೂಕ್ಷ್ಮತೆಗೆ ಎಚ್ಚರಿಕೆ ಕೊಟ್ಟು ಇಷ್ಟಲಿಂಗ ಪರಿಕಲ್ಪನೆಯನ್ನು ಪ್ರಶ್ನಿಸುತ್ತಾರೆ. ಪ್ರಾಣಲಿಂಗವನ್ನು ಪ್ರಮಾಣವಾಗಿಸುತ್ತಾರೆ. ಪ್ರಾಣದಲ್ಲಿಯೇ ಲಿಂಗವಿದೆ ಕೊರಳಿಗೇಕೆ ಲಿಂಗವೆಂದು ಲಿಂಗತತ್ವಕ್ಕೆ ಗೌರವಿಸಿದರು.

"ಪ್ರಾಣಲಿಂಗದ ಪೂಜೆಯು | ಪ್ರಾಣದೊಳಗೆ ಮಾಡಿ ನಾವು
ಬೊಗಳೊಂಬತ್ತರೊಳ್ | ಇನಿಯದಾದ ನಾದ ಕೇಳಲು
ಇಷ್ಟಲಿಂಗದ ಪೂಜೆಯನ್ನು | ನಿಷ್ಠೆಯಿಂದ ಮಾಡಿ ನಾವು
ಕರ್ಮಕಷ್ಟಗಳೆಲ್ಲಾ ಸುಟ್ಟು | ಶ್ರೇಷ್ಠ ಗುರುವಿನ
ಭಜನೆ ಮಾಡಲು | ಭಾವಲಿಂಗದ ಪೂಜೆಯನು
ಸಾವಧಾನದಿಂದ ಮಾಡಿ |"[೨೧]

ತತ್ವಪದಕಾರನ ಲಿಂಗಸಂಬಂಧವು ಅಂಗಪ್ರಜ್ಞೆಯ ಮೂಲಕ ಕೂಡಿದ್ದಾಗಿದೆ. ಇಷ್ಟಲಿಂಗದ ಪೂಜೆಯನ್ನು ಭಾವದ ತನು ಸಂಬಂಧದಲ್ಲಿ ಕಾಣುವುದನ್ನು ಗುರುತಿಸಬಹುದು. ತನುಭಾವ ಅಂಗಭಾವವು ಪಾದದ ಉಂಗುಷ್ಟಕ್ಕೆ ತಲುಪಿದ ಸಂಬಂಧಗಳು ದೊರಕುತ್ತವೆ. ತತ್ವಪದಕಾರನ ಗುರುವಿನ ಕಲ್ಪನೆ ಲಿಂಗದೀಕ್ಷಾ ಗುರುವಾಗದೆ. ಮಾನವ ಸಂಬಂಧಗಳಿಗೆ ನೆಲೆಯಾಗಿಸುವ ನೀತಿಯುತ ಗುರುವಾಗಿದ್ದ, ಆದರೆ ತತ್ವಪದಕಾರ ಭಕ್ತಿಯ ಜಡಭಾವವನ್ನು ಕಿತ್ತೊಗೆದು ತನ್ನ ಶಿಷ್ಯ ಸಮುದಾಯಕ್ಕೆ ಹತ್ತಿರವಾದನು. ವೈಜ್ಞಾನಿಕವಾಗಿ ನೋಡಿದರೆ ಉಂಗುಷ್ಠಕ್ಕೂ ಮಸ್ತಕಕ್ಕೂ ಅವಿನಾಭಾವ ಸಂಬಂಧ ಉಂಟು. ನಿಷ್ಠಾವಂತ ಭಕ್ತನು ಸಂಕಲ್ಪಿತನಾಗಿ ಗುರುವಿನ ಪಾದಗಳಿಗೆರಗಿದಾಗ ಅವನ ಉಂಗುಷ್ಠದ ಶಕ್ತಿಯು ಭಕ್ತನ ಮಸ್ತಕಕ್ಕೆ ಬರುತ್ತದೆ. ನಿಷ್ಠಾವಂತ ಭಕ್ತನು ತನ್ನ ಮನೋಕಾಮನೆ ಫಲಿತವಾಗಲೆಂದು ಆಶಿಸಿದ ಭಾವ ಭಾವಲಿಂಗವಾಗಿ ಪ್ರಜ್ವಲಿಸುತ್ತಿರುತ್ತದೆ. ಪ್ರತಿ ವ್ಯಕ್ತಿಯ ಹಣೆಯ ಮೇಲೆ ಶಿಖಾಚಕ್ರವಿದ್ದು ಇದು ಸಹಸ್ರದಳ ಕಮಲದಿಂದ ಪ್ರಜ್ವಲಿಸುತ್ತಾ ತನ್ನ ಕಾರ್ಯ ನಿರ್ವಹಿಸುತ್ತಿರುತ್ತದೆ. ಈ ಭಾಗದಲ್ಲಿ 'ಅ' ಕಾರವು ಮೂಲ ಪ್ರಣವನಾಗಿರುತ್ತಾನೆ. ಇದೇ ಇಷ್ಟಲಿಂಗವೆಂದು ಗುರುತಿಸಿಕೊಂಡಿದೆ. ಸಂಚಾರಿ ಭಾವದ ಶಿಷ್ಯನ ಭಾವಲಿಂಗವು, ಗುರುವಿನ ಇಷ್ಟಲಿಂಗದ ಸ್ಪರ್ಶದಿಂದ ಭಕ್ತನಿಗೆ ಪ್ರಣವ ದೈವೀಪ್ರಜ್ಞೆ ಉಂಟಾಗುತ್ತದೆ. ಇದನ್ನೇ ಗುರು-ಲಿಂಗ-ಜಂಗಮದ ಪರಸ್ಪರ ಸಾವಯವ ಸಂಬಂಧಗಳೆಂದು ಕರೆಯಬಹುದು. ಆದ್ದರಿಂದ ತತ್ವಪದಕಾರರು ಕರಪೂಜೆಯ ಇಷ್ಟಲಿಂಗ ಪೂಜೆಯನ್ನು ನಿರಾಕರಣೆ ಮಾಡಿ, ದೇಹದ ಅಂಗದ ಅವಯವಗಳಿಗೆ ಹೆಚ್ಚು ಒತ್ತುಕೊಟ್ಟುದ್ದನ್ನು ಕಾಣಬಹುದು.

ಗೂಗಲ್ಲು ಪರಪ್ಪಯ್ಯನು ಶ್ರೀಗುರು ಚರಣವೇ ಸಾಕ್ಷಾತ್ ಲಿಂಗಂ, ಮೋಕ್ಷದ ಲಿಂಗಂ, ಸೂಕ್ಷ್ಮದ ಲಿಂಗಂ ಎಂದು ವಿವರಣೆ ಕೊಡುವುದನ್ನು ನೋಡಿದರೆ ಲಿಂಗದ ಕುರಿತಾಗಿ ಭಿನ್ನ ವಿಚಾರಗಳು ತತ್ವಪದ ಪರಂಪರೆಯಲ್ಲಿ ವ್ಯಕ್ತವಾಗುತ್ತದೆ.

"ಗುಂಡದೊಳಗಿನ ನೀರು ಕಂಡವರು ಕಾಲೆದ್ದಿ
ಕುಂಡಿ ಮಂಡಿಗಳೆಲ್ಲಾ ಕೊಳೆ ತೊಳೆದಂತೆ
ನೀರ ಲಿಂಗಕ್ಕೆ ಮಜ್ಜನವೆರೆದರೆ
ಲೇಸಾಯಿತೇನು ನಿಮ್ಮ ಆಚಾರ ಕುಲವು"[೨೨]

ಸ್ಥಾವರ ಲಿಂಗದ ಡಾಂಭಿಕತೆಯನ್ನು ತತ್ವಪದಕಾರ ಈ ಮೂಲಕ ವಿಡಂಬಿಸುವನು. ವಿಶ್ವಕರ್ಮ ಕುಲದ ಪರಪ್ಪಯ್ಯನು ಲಿಂಗದ ನಿರರ್ಥಕ ಪೂಜೆಯ ಬಗೆಗೆ ಮೊನಚಾದ ವಿಚಾರವನ್ನು ಹರಿಬಿಡುತ್ತಾನೆ. "ಅಂಗಡಿಯೊಳು ಬೆಲೆ ಮಾಡಿ ಲಿಂಗವಾರು ತಂದುಕೊಂಡು ಸಿಂಗಾರವಾಗಿ ಕೊರಳೊಳು ಧರಿಸಿಕೊಂಬರು" ಎಂದು ಲಕ್ಷ್ಮಣದಾಸ ಹೇಳುವನು. ಲಿಂಗಕ್ಕೆ ಬೆಲೆ ಕಟ್ಟಿ ಅಂಗಡಿಯಿಂದ ಕೊಂಡು ತರುವ ಜನರಿಗೆ ವಿವೇಚನೆ ಹೇಳುವರು. "ಬರೀ ಕೊರಳು ಸಿಂಗಾರವಾದರೆ ಸಾಕೆ? ಆತ್ಮ ಲಿಂಗದ ಅರಿವು ನಿಮಗಿದೆಯೆ? ಎನ್ನೊಳಗೆ ನೀನು ಲಿಂಗಯ್ಯ ನಿನ್ನೊಳಗೆ ನಾನೊ ಲಿಂಗಕ್ಕೆ ಪನ್ನಗಭೂಷಣ ಅವನಾರೋ" | ಹೀಗೆ ಕುರುಹು ಮೀರಿದ ತಾನೇ ತಾನಾದ ಐಕ್ಯತಾ ಭಾವವನ್ನು ತತ್ವಪದಕಾರರು ಪ್ರಕಟಿಸುತ್ತಾರೆ. ಕ್ರಾಂತಿಕಾರಕ ಮಾತುಗಳಿಂದ ಆತ್ಮಲಿಂಗ ಪರಿಕಲ್ಪನೆಯಂಥ ಸ್ಥಾವರ ಲಿಂಗ ಪರಿಕಲ್ಪನೆಯ ವಿರುದ್ಧ ಸಮರ ಸಾರಿದ್ದಂತೂ ನಿಜ.

### ೪.೧.೩. ಜಂಗಮ

ತತ್ವಪದಕಾರರಲ್ಲಿ ಜಂಗಮ ಶಬ್ದಕ್ಕೆ ಜವಾಬ್ದಾರಿಯುತವಾದ ಸ್ಥಾನವಿದೆ. ಜಂಗಮದ ಬಗ್ಗೆ ಕೆಲವೇ ತತ್ವಪದಕಾರರು ಹೇಳಿದ್ದಾರೆ. ಹಳ್ಳಿಗಳಲ್ಲಿ ಜಂಗಮ ಶಬ್ದಕ್ಕೆ ಬದಲಾಗಿ ಐನೋರೆ, ಅಪ್ನೋರೆ, ಶರಣ, ತಾತ ಎಂಬ ಪದಗಳು ಬಳಕೆಯಲ್ಲಿವೆ. ಈ ಶಬ್ದಗಳ ಬಳಕೆಯಲ್ಲಿ ವ್ಯಕ್ತಿ ಗೌರವದ ನೆಲೆಯಿದೆ. ಕುಲಗುರುವಿಗೆ ಪಾದೋದಕ ಪೂಜೆ ಮೂಲಕ ಜಂಗಮ ಸ್ಥಾನವನ್ನು ಕೊಡುತ್ತಾರೆ. ಆದರೆ ಇಂದು ಜಂಗಮವು ಒಂದು ಜಾತಿಯಾಗಿದೆ.

ತತ್ವಪದಕಾರರ ಕಾಲದಲ್ಲಿದ್ದ ಜಂಗಮ ತತ್ವವು ವ್ಯಕ್ತಿ ನಿರಾಕರಣೆಯ ಆಶಯವಾಗಿ ಬೆಳೆದಿದೆ. ತತ್ವಪದಕಾರರಲ್ಲಿಯೇ ನೀರಲಕೇರಿ ಬಸವಲಿಂಗ, ಘನಮಠ ನಾಗಭೂಷಣರಂಥ ಮಠಾಧೀಶ ಜಂಗಮರು ವೀರಶೈವ ಧರ್ಮದ ಅಷ್ಟಾವರಣ ಆಚರಣೆಗಳನ್ನು ನಿರಾಕರಿಸುತ್ತಾ, ಸಮಾಜದಲ್ಲಿ ಜಂಗಮವೆಂಬ ಅಧಿಕಾರಸ್ಥಾನ ವೈಚಾರಿಕತೆಯ ಮೂಲಕ ಕಳಚಿ ಹೋಗಬೇಕೆಂದು ಪ್ರಯತ್ನಿಸಿದರು.

ಮುಖ್ಯವಾಗಿ ತತ್ವಪದಕಾರರು ಜಂಗಮ ಪರಿಕಲ್ಪನೆಯನ್ನು ಪಾರಂಪರಿಕ ಜಂಗಮ ಪರಿಕಲ್ಪನೆಗಿಂತ ಭಿನ್ನವಾದುದಾಗಿತ್ತು. 'ಇಷ್ಟಲಿಂಗ' 'ಜಂಗಮವೆಂಬ' ಪಾರಂಪರಿಕ ಜಂಗಮ ಕಲ್ಪನೆಯನ್ನು ನಿರಾಕರಿಸಿದರು.

ಶರಣ ಎಂಬ ಶಬ್ದದಲ್ಲಿ ಜಂಗಮವೆಂಬ ಅರ್ಥಕ್ಕಿಂತ ಹೆಚ್ಚಾಗಿ ಶಿವಭಕ್ತನೆಂಬ ಅರ್ಥವಿದೆ. ತತ್ವಪದಕಾರರಲ್ಲಿ ಇದು ಭಿನ್ನಾರ್ಥಪಡೆದುಕೊಂಡಿದೆ. ಕೂಡಲೂರು ಬಸವಲಿಂಗ, ನೀರಲಕೇರಿ ಬಸವಲಿಂಗರು ಘನ ಮಠಾದ್ಯರಂಥವರು ಇಂದು ದೇವರೆಂದು ಪೂಜಿಸಿಕೊಳ್ಳುತ್ತಾರೆ. ತತ್ವಸಂಸ್ಕೃತಿಯಲ್ಲಿ ಹಿರಿದಾದ ಸ್ಥಾನ ಹೊಂದಿದ ಇವರನ್ನು ಶರಣರೆಂದೇ ಕರೆಯುವರು. ಆದರೆ ತತ್ವಪದಕಾರರೆಂದು ಕರೆಯುವುದಿಲ್ಲ. ಇತ್ತೀಚಿನ ದಿನಗಳಲ್ಲಿ ಅಧ್ಯಯನಕಾರರು ಇವರನ್ನು ತತ್ವಪದಕಾರರೆಂದು ಕರೆಯುವುದನ್ನು ಗಮನಿಸಬಹುದು. ಶ್ರೀ ಶಾಂತರಸರು ಎಡೆದೊರೆ ನಾಡಿನ ಅನುಭಾವಿ ಕವಿಗಳೆಂದರೆ, ಡಾ. ಬಸವಲಿಮಗ ಸೊಪ್ಪಿಮಟರು ಸ್ವರವಚನಕಾರರೆಂದರು. ಡಾ. ಬಸವರಾಜ ಸಬರದರು ರಾಯಚೂರು ಜಿಲ್ಲೆಯ ಅನುಭಾವ ಕವಿಗಳೆಂದು ಕರೆದಿರುವುದು ಅಷ್ಟೇ ಗಮನಾರ್ಹವಾಗಿದೆ.

ಕೌಟಂಬಿಕ ಸಂಬಂಧದಲ್ಲಿ ತಂದೆಯ ತಂದೆ ತಾತನಾದರೆ, ಜಂಗಮನನ್ನು ತಾತ ಎನ್ನಲಾಗುತ್ತದೆ. ಈ ವಿಚಾರ ಸಂಬಂಧವು ತತ್ವಕ್ಕಿಂತ ಕುಲತತ್ವಕ್ಕಿಂತ ಸಮುದಾಯ ತತ್ವವು ಬಹು ಮೌಲಿಕವಾಗಿದೆ. ಇಲ್ಲಿ ತಾತ ಎನ್ನುವುದು ಜಂಗಮ ಮತ್ತು ಶಿಷ್ಯವರ್ಗದ ಕರುಳ ಬಳ್ಳಿಯ ಸಂಬಂಧವನ್ನು ಮುಂದು ಮಾಡುತ್ತದೆ. ಉದಾ : ತತ್ವಪದಕಾರರಾದಂಥ ಹೇರೂರು ವಿರುಪನಗೌಡರಿಗೆ, ವಿರುಪಣ್ಣ ತಾತಾ, ವಡಿಕೆ ಲಕ್ಷ್ಮಮಪ್ಪನಿಗೆ ವಡಿಕೆ ತಾತಪ್ಪಯ್ಯ, ಗೊಬ್ಬೂರು ಹಂಪಣ್ಣನಿಗೆ ಹಂಪಣ್ಣ ತಾತ, ಬಳಗಾನೂರು ಮರಿ ಸ್ವಾಮಿಗೆ ಮರಿಸ್ವಾಮಿ ತಾತಾ ಇತ್ಯಾದಿ.

"ಸೋಮವಾರ ಮಾಡ್ಯಾಳ ಸುದರಾಸಿ
ವಾರದಯ್ಯನ ಮೇಲೆ ಗುರಕಾಸಿ
ಮಠದಯ್ಯ ಬರಲಿಲ್ಲ ನೆರೆಮನೆ
ಮುಗಿಸಿ, ಅವಳೆಜಮಾನರು ಕುಂತರ
ನೀರಡಸಿ, ಸಣ್ಣಯ್ಯ ಬಂದರೆ ಜಟಾಪಟಿ
ಚಪಾತಿ ಮಾಡ್ಯಾಳ ಲಟಾಪಟಿ
ಉಂಡಯ್ಯ ಬಂದರೆ ಬಲು ಖುಷಿ
ಹಸಿದಯ್ಯ ಬಂದರೆ ಬಲು ಖಿಸಿವಿಸಿ
ಆಳಗೆ ನೀಡ್ಯಾಳ ಹಳಸಿದ ಕಡುಬು
ಅಯ್ಯಗ ನೀಡ್ಯಾಳ ಜೋಳದ ಕಡುಬು
ತಾ ಮುಚ್ಚಿ ಹೊಡೆದಾಳ ಹೂರಣ ಗಡುಬು"[೨೩]

ಇಂಥ ಪದಗಳಿಂದ ಡಾಂಬಿಕ ಜಂಗಮತ್ವದ ವಿಡಂಬಣೆಯನ್ನು ಇಲ್ಲಿ ಕಾಣುತ್ತೇವೆ. ಕಾರಣ ತಮ್ಮ ಲೋಕ ಸಂಚಾರದಲ್ಲಿ ಇಂಥ ಅನೇಕ ರೀತಿಯ ಕಹಿ ಅನುಭವಗಳನ್ನು ಕಂಡವರಾಗಿದ್ದರು. ಘನಮಠ

ನಾಗಭೂಷಣರು ಲೋಕ ಸಂಚಾರದಲ್ಲಿಯೇ ಹೆಚ್ಚಾಗಿ ತಮ್ಮನ್ನು ತೊಡಗಿಸಿಕೊಂಡಿದ್ದರು. ನೀರಲಕೇರಿ ಬಸವಲಿಂಗರು ತಮ್ಮ ಮಠದಲ್ಲಿಯೇ ಭಕ್ತರು ಕೊಡುವ ತೊಂದರೆಯನ್ನು ಸಹಿಸಿದ್ದರು. ತಮ್ಮ ಸುತ್ತಲಿನ ಸಮೂಹ ಎಚ್ಚೆತ್ತು ಕೊಳ್ಳಬೇಕೆಂಬ ಅಂಶ ದೃಢವಾಗಿದ್ದರಿಂದ ತತ್ವಪದಕಾರ ಆಶಿಸುವ ಜಂಗಮ ವ್ಯಕ್ತಿಯಾಗದೆ ಒಂದು ತತ್ವವಾಗಿತ್ತು.

ರಾಯಚೂರು ಭಾಗದಲ್ಲಿ ಭಿಕ್ಷೆಗಾಗಿ ಬರುವ ಜಂಗಮರನ್ನು ಜಾತಿ-ಒಳಜಾತಿ ಹಿನ್ನೆಲೆಯಲ್ಲಿ ಈ ತೆರವಾಗಿ ವಿಂಗಡಿಸಬಹುದು.

೧. **ಹಿಟ್ಟಿಗಾಗಿ ಬರುವ ಜಂಗಮ :** ಕೋರಾನ್ನ ಭಿಕ್ಷೆ ಎಂದು ಹೇಳುತ್ತಾರೆ. ಬೆಳಗಿನ ಸಮಯದಲ್ಲಿ ಮಾತ್ರ ಈ ಜಂಗಮರು ಬರುತ್ತಿದ್ದು ಒಂದು ಕೋಲಿಗೆ ಗಂಟೆಯನ್ನು ಕಟ್ಟಿಕೊಂಡು ಗಂಟೆ ಸಪ್ಪಳ ಮಾಡುತ್ತಾ ಭಿಕ್ಷಾದೇಂಹಿ ಎನ್ನುತ್ತಿದ್ದರು. ಇವರು ಬರೀ ಹಿಟ್ಟನ್ನು ಮಾತ್ರ ಸ್ವೀಕರಿಸುತ್ತಿದ್ದು ಹಿರೇಮಠ ಪರಂಪರೆಗೆ ಸೇರಿದವರಾಗಿದ್ದಾರೆ.

೨. **ಕಂತೆ ಭಿಕ್ಷೆ ಜಂಗಮರು :** ವಿರಕ್ತ ಮಠದ ಸ್ವಾಮಿಗಳ ಶಿಷ್ಯರಾಗಿದ್ದು ಇವರು ಆಹಾರವನ್ನು ಸ್ವೀಕರಿಸುತ್ತಿದ್ದರು. ಮನೆ ಮಂದಿಯ ಕುಶಲ ಸಮಾಚಾರವನ್ನು ಕೇಳಿ ಆ ಮನೆಯ ಮಕ್ಕಳಿಗೆ ತಮ್ಮ ಕಂತೆ ಭಿಕ್ಷೆಯ ಹೊಸ ತಿನಿಸನ್ನು ಕೊಡುತ್ತಿದ್ದರು.

೩. **ವ್ರತ ಮಾಡುವ ಜಂಗಮ ಮಹಿಳೆಯರು :** ಈ ಮಹಿಳೆಯರು ತೀರ್ಥಯಾತ್ರೆಗೆ ಹೋಗುವುದಕ್ಕೆ ಅಂದರೆ ಶ್ರೀಶೈಲ, ಹಂಪಿ ವಿರೂಪಾಕ್ಷನಿಗೆ ಹರಸಿಕೊಂಡು ಒಂಬತ್ತು ದಿನಗಳೋ ಅಥವಾ ೫ ದಿನಗಳ ಲೆಕ್ಕದಿಂದ ಕೇವಲ ಒಂದೇ ಮನೆಗೆ ಭಿಕ್ಷೆಗೆ ಹೋಗುತ್ತಾಳೆ. ಇವರು ಚಿಕ್ಕ ಮಠದವರೆಂಬುದು ಬಹು ಗಮನಾರ್ಹ.

ತತ್ವಪದಕಾರರು ಬದುಕಿದ ಕಾಲದಲ್ಲಿ ಜಂಗಮ ವ್ಯಕ್ತಿಗಳ ವೈವಿಧ್ಯಮಯ ಮುಖವಾಡಗಳನ್ನು ಕಂಡಿದ್ದರು. ಭಕ್ತರು ಕಾಣಿಕೆ ಎಂದು ನೀಡಿದ ಹಣದಿಂದ ತಮ್ಮ ಮಠಗಳನ್ನು ಅಭಿವೃದ್ಧಿ ಪಡಿಸಬೇಕೆಂಬ ಇಚ್ಛೆವುಳ್ಳವರಾಗಿದ್ದರು. ಇಂಥ ಸ್ವಾರ್ಥಪರ ವ್ಯವಹಾರದ ಜಂಗಮತ್ವದ ಕುರಿತು ತತ್ವಪದಕಾರರು ಕಿಡಿಕಾರಿದ್ದಾರೆ.

"ಬೇಡುವಾತ ಜಂಗಮನಲ್ಲ ಬೇಡಿಸಿ ಕೊಳ್ಳುವಾತ ಭಕ್ತನಲ್ಲ" ಇಂಥ ವಿಚಾರಗಳನ್ನು ತತ್ವಪದಕಾರರು ಕಾಲಕ್ರಮೇಣ ಅರಿತು ಖಂಡಿಸಿದ್ದಾರೆ. ಜಂಗಮದ ಈ ನೀಡುವ-ಕೊಡುವ ಭೌತಿಕ ಸ್ವರೂಪ ಕುರಿತ ನಿರಾಕರಣೆ ಅವರಲ್ಲಿದೆ.

"ಉಣುವ ಜಂಗಮ ದೇವರ್‍ಯ ತಂದು ಹಸಿವೆನಲು
ಮುಂದಿನ ಮನೆಗೆ ಹೋಗುಲ್ಲೇಕೆ ನಿಂತೆಂದು

ಪುಳಿಯುತ್ತಾ ಸಕ್ಕರಿ ಕಣಕ ಮುಂತಾದ

ವನು ಬಲಿ ತಂದು ತೀರ್ಥ ಯಾತ್ರೆಯೊಳ್

ಧಾರುಣೆಯ ತಿರುಗುತ ಬಳಲಿ ತಾವಂದು

ಪರಿಭ್ರಮಿತರಾಗುತ ಕುಣಿತೆವರ್

ಮೆಣ್ಣುಳ್ಳ ಗರಿಕಾನನ ಹಂಗಳವನರಿಸಿ

ಕಷ್ಟದಿ ಉಣದ ಕಲ್ಲಿಗೆ ಅಟ್ಟು ನೀಡುವ

ಬಣಗ ಮಾನವ ಪಶುಗಳಿಗೆ''[೨೫]

ಮೇಲಿನ ಹಾಡಿನಲ್ಲಿ ಜಂಗಮತ್ವವು ಸ್ವಾರ್ಥ, ಶೋಷಣೆ ಹಾಗೂ ಡಂಭಾಚಾರದ ನೆಲೆಯಾಗಿರುವ ಸಂಗತಿಯನ್ನು ತತ್ವಪದಕಾರರು ಬಿಡಿಸಿ ತೋರಿಸಿರುತ್ತಾರೆ. ಅದೊಂದು ಆತ್ಮತತ್ವವಾಗದೆ ಭಿಕ್ಷೆ ಮತ್ತು ಆಚಾರ ತತ್ವಾಗಿ ತನ್ನ ಸತ್ವ ಕಳೆದುಕೊಂಡ ಬಗೆಯನ್ನು ಚರ್ಚಿಸುತ್ತಾರೆ. ಇಂಥ ಕಪಟ ಜಂಗಮರ ವರ್ತನೆಯಿಂದ ಸಮಾಜದ ವಾತಾವರಣ ಹದಗೆಟ್ಟಿತೆಂಬ ವಿಶಾದವೂ ತತ್ವಪದಕಾರರಲ್ಲಿ ಕಂಡುಬರುತ್ತದೆ. ಜಂಗಮನ ಆರ್ಥಿಕ ಆಯಾಮ ಧಾರ್ಮಿಕ ವಲಯವನ್ನು ಒಪ್ಪಿಕೊಂಡರೂ ವಚನಕಾರರ ಜಂಗಮತ್ವದ ಆದರ್ಶಗಳು ತತ್ವಪದಕಾರರ ಹಾಡುಗಳಲ್ಲಿ ಕಂಡುಬರುವುದಿಲ್ಲ.

ಜಂಗಮ ಪಂಗಡದಲ್ಲಿದ್ದ ಗುಂಪುಗಾರಿಕೆ, ಸ್ಥಾನದ ಅಹಮ್ಮು, ಇಂಥ ಜಂಗಮರ ಹೆಸರಿನಲ್ಲಿ ಭಕ್ತರು ನಡೆಸುವ ಕಪಟತನಗಳಿಂದ ತತ್ವಪದಕಾರರು ರೋಸಿ ಹೋಗಿದ್ದರು. ''ನೀರಾಗ ಎಮ್ಮೆನ ಬಿಡಬಾರದು ಊರಾಗ ಐನೋರ್ನ ಬಿಡಬಾರ್ದು'' ಈ ಗಾದೆ ಸರಳವಾಗಿ ಕಂಡರೂ ಭಿಕ್ಷೆಗಾಗಿ ಬಂದ ಜಂಗಮ ಊರಿನ ಕಿತಾಪತಿಗೆ ಕೈ ಹಾಕಿದಾಗ ಜನಪದರು ಈ ಗಾದೆಯನ್ನು ಸೃಷ್ಟಿ ಮಾಡಿರಬೇಕು. ಬಸವಣ್ಣನ ಕಾಲದಲ್ಲಿದ್ದ ಜಂಗಮಕ್ಕಿಂತ ತತ್ವಪದಕಾರರ ಕಾಲಕ್ಕೆ ಜಂಗಮರು ಸಮಾಜದಲ್ಲಿ ಹೊರೆಯಾಗಿ ವಿಕೃತವಾಗಿ ಕಾಣಿಸಿಕೊಂಡಿರಬೇಕು.

''ಆದಿ ಜಂಗಮ ದೇವರು ಭಕುತಿಯ ನೋಯಿಯರು

ಪಲವರು ಗೋಧಿ ಬೀಸುವ ಸಮಯದಿ ಬರಲು

ಬಲುಗಾದಿಯಾಡುವಂತೆ ರಾಗಿ ಬೂದುರಿತ ಹಿಟ್ಟು

ತರುವವರೆಗೂ ದೇವರ ಹರಕೆಯಂತೆ ಬಹಳ

ಬಹಳ ಧಾವತಿ ಬಿಡುವೆಂದೆ ದೇವರ ದೇವ

ಜಂಗಮವಾದೇಳೆ ಹಸಿದರೆ ಭಾವದಿ

ಭಿಕ್ಷಾಯನೆ ಹೋವಾ ಹೊಗಾಚೆಗೆಂಬರು''[೨೬]

ಬಳಗಾನೂರು ಮರಿಸ್ವಾಮಿಗಳಿಗೆ ಭಕ್ತರು ಕೊಟ್ಟ ಚಂದ್ರಹಾರವು ಮಠದಲ್ಲಿ ಸಿಕ್ಕದ್ದರಿಂದ ಕಳ್ಳತನದ ಆಪಾದನೆಯ ಮೇಲೆ ಕೋರ್ಟ್‌ಗೆ ಹೋಗಬೇಕಾಯಿತು. ಘನಮಠ ನಾಗಭೂಷಣರನ್ನು

ಭಕ್ತರು ಅಲೆಮಾರಿ ಜಂಗಮನೆಂದು ತಿಳಿದಿದ್ದರು. ಹೀಗಾಗಿ ಈ ತತ್ವಪದಕಾರರು ಸಮಾಜದ ಜನರ ಮನೋಭಾವನೆ ಮನಗಂಡು ಭಕ್ತ ಮತ್ತು ಜಂಗಮ ಶೋಷಣೆ ಕುರಿತು ಹಲವು ಗೀತೆಗಳನ್ನು ರಚಿಸಿದ್ದಾರೆ. ಆದರೆ ಇಂದು ಜಂಗಮ ವ್ಯವಸ್ಥೆಯ ವಿರುದ್ಧದ ಹೋರಾಟ ಅನಿವಾರ್ಯವಾಗಿದೆ.

ವೀರಶೈವ ಧರ್ಮವು ಕಾಲಕಾಲಕ್ಕೆ ಧಾರ್ಮಿಕ ಸ್ವಾತಂತ್ರ್ಯ, ಸಮಾನ ಅವಕಾಶಗಳನ್ನು ಅರಸಿ ಮತಾಂತರಗೊಂಡ ಹಿಂದೂ ಕೆಳಜಾತಿಗಳ ಜನರು ಇರುವ ಸಮುಚ್ಛಯದಿಂದ ಕೂಡಿದೆ. ಇದರಿಂದ ಈ ಸಾಮಾನ್ಯ ವೀರಶೈವರ ಆಚರಣೆಗಳು, ಲಿಂಗಧಾರಣೆ, ಲಿಂಗಪೂಜೆ, ಭಸ್ಮಧಾರಣೆಗೆ ಮಾತ್ರ ಸೀಮಿತವಾದವು. ಹಾಗೆ ಇವರಲ್ಲಿ ಅನೇಕರು ಲಿಂಗಪೂಜೆಯ ಜೊತೆಗೆ ತಮ್ಮ ಪೂರ್ವದ ಎಲ್ಲಾ ದೇವರ ಪೂಜೆ ಆಚರಣೆಗಳನ್ನು ಅನುಸರಿಸಿದ್ದರಿಂದ ವೀರಶೈವ ಆಚರಣೆಗಳು ಅಪ್ರಬ್ರಂಶ ರೂಪ ತಾಳಿದವು.

ಸ್ವಾರ್ಥದಿಂದ ಕೂಡಿದ ಈ ಪೊಳ್ಳು ಸಮಾಜದಲ್ಲಿ ಜಂಗಮನು ಸಮಾಜದ ಪಾವಿತ್ರತೆಯನ್ನು ಕಾಪಾಡಬೇಕಾಗಿದ್ದಿತು. ಆದರೆ "ಬಸವಣ್ಣನು ಯಾವುದಕ್ಕೆ ಬೇಡ ಬೇಡವೆಂದನೋ ಅದೆಲ್ಲಾ ಜಂಗಮ ಪ್ರಪಂಚದಲ್ಲಿ ಕಾಣಿಸಿಕೊಂಡಿದೆ. ಅಷ್ಟರ ಮಟ್ಟಿಗೆ ಸಮಕಾಲೀನ ಜಂಗಮನ ವಾಸ್ತವಿಕ ಚಿತ್ರ ತನ್ನ ಮೂಲ ಸ್ವರೂಪವನ್ನು ಕಳೆದುಕೊಂಡು ವಿಪರೀತ ಸ್ಥಿತಿಯನ್ನು ಹೊಂದಿದೆ."[೨೬]

ಒಟ್ಟಿನಲ್ಲಿ ತತ್ವಪದಕಾರರು ಸಮಾಜದಲ್ಲಿ ಜಂಗಮತ್ವ ಪಡೆದುಕೊಂಡಿದ್ದ ಜಾತಿ ಮತ್ತು ಮಾನವೀಕೃತ ನೆಲೆಗಳನ್ನು ಕಟುವಾಗಿ ವಿರೋಧಿಸಿದರು. ಅದರಿಂದ ಹುಟ್ಟುತ್ತಿದ್ದ. ಸಾಮಾಜಿಕ ವಿಕಾರಗಳನ್ನ ದುಡಿಯದೆ ಉಣ್ಣುವ ದುರಹಂಕಾರಿಗಳನ್ನು ಅದರ ಶೋಷಿತ ನೆಲೆಗಳ ಕುರಿತು ಗಂಭೀರವಾಗಿ ಪ್ರತಿಕ್ರಿಯಿಸಿದರು. ಜಂಗಮವನ್ನು ಆಚಾರಾನು ಸಂಧಾನದ ಮಾರ್ಗವನ್ನಾಗಿ ನೋಡದೆ ಆತ್ಮಾನುಸಂಧಾನದ ಮಾರ್ಗವನ್ನಾಗಿ ರೂಪಿಸಿದರು. ಸ್ವಾವಲಂಬಿ ಹಾಗೂ ಸ್ವಾಭಿಮಾನದ ತಾಣವನ್ನಾಗಿ ದುಡಿಸಿದರು.

### ೪.೧.೪. ಸತಿಪತಿ ಭಾವ

ತತ್ವಪದಕಾರ ಗುರುವಿನ ಇರುವಿಕೆಯನ್ನು ದೃಢಪಡಿಸಲು ಹವಣಿಸುತ್ತಾರೆ. ಇದಕ್ಕೆ ಶರಣ ಸಂಸ್ಕೃತಿಯ ಆಧ್ಯಾತ್ಮಿಕ ಹಿನ್ನೆಲೆಯ ಪ್ರಭಾವವೆನ್ನುವುದು ಮರೆಯಲಾಗುವುದಿಲ್ಲ. ಸಂತರ ಈ ನಿಲುವಿಗೆ ತಮ್ಮ ಮನದಲ್ಲುಂಟಾದ ಆತ್ಮಕ್ಷೋಭೆ ಎನ್ನಬಹುದು. ಪ್ರತಿ ಮನುಷ್ಯ ಸಂಬಂಧಗಳಲ್ಲಿ ಹೆಣ್ಣು ಗಂಡಿನ ಗುಣಗಳು ಕಾರ್ಯನಿರ್ವಹಿಸುತ್ತಿರುತ್ತವೆ. ಹೆಣ್ಣಿನ ತುಮುಲಗಳು ಹೆಚ್ಚಾದಾಗ ಹೆಣ್ಣಿನ ಗುಣಗಳು ಗಂಡಿನ ವಿಕಾರಗಳು ಹೆಚ್ಚಾದಾಗ ಪುರುಷ ಸ್ವಭಾವಗಳು ದೇಹದಲ್ಲಿ ವಾಸ್ತವ್ಯ ಹೂಡುತ್ತವೆ. ಇದಕ್ಕೆ ನಮ್ಮ ಪ್ರಾಚೀನ ಧಾರ್ಮಿಕ ಸೂತ್ರಗಳಾದ ನಾಥ, ಶೈವ, ಶಾಕ್ತ, ತಾಂತ್ರಿಕ ಪಂಥಗಳಲ್ಲಿ ಸ್ತ್ರೀಯನ್ನು ಮಾತೃಸ್ವರೂಪಿಣಿ ಶಕ್ತಿಯೆಂದು ಪೂಜಿಸಿದ ಉದಾಹರಣೆಗಳನ್ನು ನೋಡುತ್ತೇವೆ. "ಲೋಕದ ಪರತತ್ವವನ್ನು

ಸ್ತ್ರೀರೂಪದಲ್ಲಿ ಭಾವಿಸಿಕೊಂಡು ಆರಾಧಿಸುವ ಧರ್ಮದಲ್ಲೊಂದು ಶಾಕ್ತ ಧರ್ಮವಾಗಿದೆ. ಪರತತ್ವಕ್ಕೆ ಸ್ತ್ರೀ ಮತ್ತು ಪುರುಷರೂಪಗಳೆರಡೂ ಇದ್ದರೂ ಪ್ರಜ್ಞಾ ಶಕ್ತಿ ನಿಷ್ಕ್ರಿಯವಾಗಿರುತ್ತದೆ. ಆ ಕ್ರಿಯಾರೂಪಿ ಬಲವಾದ ಶಕ್ತಿ ಸ್ತ್ರೀ ರೂಪದ್ದು. ಇದು ಕ್ರಿಯಾತ್ಮಕವೆಂದು ಶಾಕ್ತರು ನಂಬುತ್ತಿದ್ದು ಶಕ್ತಿಯನ್ನು ಮಾತೆಯ ರೂಪದಲ್ಲಿ ಗ್ರಹಿಸುತ್ತಾರೆ. ದೈವಿಕ ಪರತತ್ವದಲ್ಲಿ ಸ್ತ್ರೀ ಪುರುಷ ರೂಪಗಳೆರಡೂ ಇದ್ದರೂ ಅಂತಿಮವಾಗಿ ಆತ್ಯಂತಿಕ ಸ್ವರೂಪದಲ್ಲಿ ಇದಕ್ಕೆ ಹೆಣ್ಣುತನವಾಗಲೀ ಗಂಡುತನವಾಗಲೀ ಇರುವುದಿಲ್ಲ.[೨೬] ಇಂಥ ಧರ್ಮಗಳ ಅನುಯಾಯಿಗಳಾದ ತತ್ವಪದಕಾರರನ್ನು ಗಮನಿಸುವಾಗ ಸ್ತ್ರೀಪುರುಷ ಸ್ವಭಾವದ ಧೋರಣೆಯನ್ನು ವೈಚಾರಿಕವಾಗಿ ವಿಶ್ಲೇಷಿಸಬೇಕಾಗುತ್ತದೆ.

ವಚನಕಾರರು ಸ್ಪಷ್ಟಪಡಿಸಿದ ಸೃಷ್ಟಿ, ಸೃಷ್ಟಿಕರ್ತ, ಶಿವ ಜೀವರಿಗೆ ಅಬೇಧವನ್ನು ಕಲ್ಪಿಸದೇ ಒಂದೇ ಎಂಬ ಧೋರಣೆಯಲ್ಲಿ ಸಮೀಕರಿಸಿದರು. ಸೃಷ್ಟಿಯ ಪ್ರತೀಕವಾದ ಪ್ರಕೃತಿ ಮತ್ತು ಭೂಮಿಯನ್ನು ಹೆಣ್ಣಿಗೆ ಹೋಲಿಸಿ, ಫಲ ನೀಡುವ ಸಾಂಕೇತಿಕ ಮರ್ಮವನ್ನು ಅರುಹಲು ಪ್ರಯತ್ನಿಸಿದ್ದು ನಮ್ಮ ದಾರ್ಶನಿಕರ ಚಿಂತನೆಗಳಲ್ಲಿ ಕಾಣುತ್ತೇವೆ. ಈ ತತ್ವವನ್ನು ಅನುಸರಿಸಿಯೇ ತತ್ವಪದಕಾರನು ಸ್ತ್ರೀಯನ್ನು ಪ್ರೇಯಸಿಯಾಗಿ ತಿಳಿದು ಮಾತನಾಡಲು ಕಂಡುಕೊಂಡನು. ತನ್ನ ತತ್ವಗಳೊಂದಿಗೆ ಹೆಣ್ಣನ್ನು ಸಮೀಕರಿಸಿ ಪ್ರೀತಿ, ಪ್ರೇಮ, ಪ್ರಣಯದ ನೆಲೆಗಳನ್ನು ಪಾರಮಾರ್ಥಿಕವಾಗಿ ಶೋಧಿಸುತ್ತಾ ತತ್ವದ ವಿನ್ಯಾಸವನ್ನು ಪ್ರಕಟಿಸುತ್ತಾನೆ. ಶಿಶುನಾಳ ಶರೀಫ್, ಕಡಕೋಳ ಮಡಿವಾಳಪ್ಪನಂಥ ಹಿರಿಯ ತತ್ವಪದಕಾರರು ಸತಿಪತಿಯ ತತ್ವದೊಂದಿಗೆ ಸಮೀಕರಿಸುತ್ತಾರೆ. ಶಿಶುನಾಳ ಶರೀಫ್‌ರ ಈ ಹಾಡಿನಲ್ಲಿ ನನ್ನೊಳಗ ನಾ ತಿಳಕೊಂಡೆ ನನಗೆ ಬೇಕಾದ ಗಂಡನ್ನ ಮಾಡಿಕೊಂಡೆ, ಇಂಥ ಭಿನ್ನ ನೆಲೆಯ ಶೋಧದಲ್ಲಿ ತತ್ವಪದಕಾರ ಕುತೂಹಲಕರವಾಗಿ ಕಂಡುಬರುತ್ತಾನೆ. ಈ ತಾತ್ವಿಕ ಸತಿಪತಿ ಭಾವಗಳನ್ನು ಎರಡು ನೆಲೆಯಲ್ಲಿ ಗುರುತಿಸುವುದು ಅತ್ಯವಶ್ಯಕ

೧. ಗುರುವಿನ ಮೂಲಕ ಭಕ್ತಿ, ಜ್ಞಾನ, ವೈರಾಗ್ಯಗಳಂಥ ದಾರ್ಶನಿಕ ತತ್ವಗಳನ್ನು ನಿವೇದಿಸುವುದು.

೨. ಅನುಭಾವದ ನೆಲೆಯಲ್ಲಿ ಪ್ರಕೃತಿ, ಪುರುಷ, ದೇಹ, ಆತ್ಮಗಳನ್ನು ಕಥನಾತ್ಮಕವಾಗಿ ನಿರೂಪಿಸುವುದು. ಉದಾ : 'ಗಂಡಗಂಜಿ ಬದುಕು ಮಾಡಮ್ಮಾ ಮತ್ತೈದೆತನ ಕಳಕೋಬ್ಯಾಡಾ ತಿಳುಕೋ ತಂಗ್ಯಮ್ಮಾ.' ಎಂದು ಪ್ರಾರಂಭವಾದ ಸಾಲು 'ಮೇಲು ಮಹಲಿನ ಕೋಣೆ ತೆರಿಯಮ್ಮಾ, ನೀಲಜ್ಯೋತಿಯೆಂಬ ಬಾಲಚಂದ್ರನ ಬೆಳಕ ನೋಡಮ್ಮಾ' ಇಂಥಾ ವಾಕ್ಯಗಳೊಂದಿಗೆ ಕೊನೆಯಾಗುತ್ತದೆ. ಈ ನಿಟ್ಟಿನಿಂದ ಆಧ್ಯಾತ್ಮದಲ್ಲಿ ಹೆಣ್ಣಿನ ದೈಹಿಕ, ಬೌದ್ಧಿಕ ಬೆಳವಣಿಗೆಯನ್ನ ತತ್ವಪದ ಸಂಸ್ಕೃತಿಯ ಹಿನ್ನೆಲೆಯಲ್ಲಿಯೇ ಗ್ರಹಿಸಬೇಕಾಗುತ್ತದೆ.

ಅಕ್ಕಮಹಾದೇವಿ ಅಂದು ನಿರೂಪಿಸಿದ ವಚನಗಳು ಕನ್ನಡದ ಭಕ್ತಿಪಂಥದಲ್ಲಿ ಮೇರು ಸದೃಶ್ಯ ಪಡೆದುಕೊಂಡಂಥವುಗಳು.

“ಕರ್ಮವೆಂಬ ಗಂಡನ ಬಾವಿ ತೋಡಿದು
ಹಾದರ ಮಾಡುವೆನೆ ಹರನ ಕೂಡ
ಮನವೆಂಬ ಸಖಿಯ ಪ್ರಸಾದದಿಂದ
ಅನುಭಾವವ ಕಲಿತೆನೆ ಶಿವನೊಡನನೆ”[೨೮]

ಎಂದು ವಾಸ್ತವದ ತಿಳುವಳಿಕೆಯೊಂದಿಗೆ ಅನುಭಾವದ ಸ್ವಂತಿಕೆಯ ಅರಿವನ್ನು ಕೊಡುತ್ತಾಳೆ. ವಚನ ಮಾದರಿಯನ್ನು ಅನುಸರಿಸಿದ ತತ್ವಪದಕಾರರು ತಮ್ಮ ಆತ್ಮದ ನೆಲೆಗೆ ದಿನನಿತ್ಯದ ಬದುಕನ್ನು ಉದಾಹರಣೆಯಾಗಿ ನಿರೂಪಿಸಿದ ವಿಚಾರ ಹೀಗಿದೆ.

“ಬ್ಯಾರ್ಯಾದೆನವ್ವ ತಂಗಿ ಬ್ಯಾರ್ಯಾದೆನೆ
ಮನಸ್ಸಿನ ಗದ್ದಲದಿಂದ ಕಡಿಗಾದೆನೆ
ಮಂಡಲದೊಳಗೆ ಮೂಕ ಗಂಡನ
ಮಾಡಿಕೊಂಡೆನೆ
ಮೂಕಗ ಹುಟ್ಟಿದ ಮೂವರ
ಜ್ಯಾಕಿ ಮಾಡಿದ್ದೆನೆ, ಅತ್ತೆ ಕೊಟ್ಟ
ಮುತ್ತು ರತ್ನ ಒತ್ತೆಯಿಟ್ಟೆನೆ
ಮಾವಕೊಟ್ಟ ಹೊಲಮನಿ ಮಾರಿಬಿಟ್ಟೆನೆ”[೨೯]

ತತ್ವಪದಕಾರ ಹೆಣ್ಣಿನ ಮನಸ್ಸಿನೊಂದಿಗೆ ಸಂಸಾರದ ಮೌಲ್ಯಗಳನ್ನು ನಿವೇದಿಸುತ್ತಾನೆ. ಮನದ ಮಾಯೆಯಿಂದ ಬೇರಾಗಿ ಸಂಸಾರದ ಮಂಡಲದಲ್ಲಿ ಮೂಕ ಪತಿಯನ್ನು ಮಾಡಿಕೊಂಡೆ. ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ಮೂರು ಮಕ್ಕಳನ್ನು ಜೋಕೆ ಮಾಡಿದೆ. ದೇಹವೆಂಬ ಕ್ಷೇತ್ರದಲ್ಲಿ ಭಕ್ತನಾಗಿ ಎನ್ನ ಪತಿಗಾಗಿ ಕಾಯುವೆ ಎಂಬ ತಾತ್ವಿಕ ಅರ್ಥಗಳು ಗಮನಾರ್ಹವಾದಂಥವು.

ಸಂಸಾರದೊಂದಿಗೆ ಆತ್ಮದ ಪರಿಶುದ್ಧತೆಯನ್ನು ಸಾರಿದ್ದು ಬೌದ್ಧ ಮತ್ತು ವೀರಶೈವ ಧರ್ಮಗಳು ಮಾತ್ರವೆಂದು ಕಂಡುಬರುತ್ತವೆ. ಈ ಧರ್ಮಗಳಲ್ಲಿ ಸ್ತ್ರೀಯನ್ನು ಸ್ವೀಕರಿಸಿದರೆ ವೈದಿಕ ಧರ್ಮವು ಆತ್ಮದ ನೆಲೆಯಿಂದ ಸ್ತ್ರೀಯನ್ನು ಹೊರಗಿಟ್ಟಿತು. “ಸನ್ಯಾಸಪರವಾದ ಧರ್ಮಕ್ಕೂ ಸಾಂಸಾರಿಕ ಜೀವನವನ್ನು ಒಪ್ಪುವ ಧರ್ಮಗಳಿಗೂ ಹೆಣ್ಣಿನ ಬಗ್ಗೆ ಇರುವ ಭಿನ್ನ ಭಿನ್ನ ದೃಷ್ಟಿಕೋನಗಳು, ನಿರ್ದಿಷ್ಟ ಸಮಾಜವೊಂದರಲ್ಲಿ ಪರಸ್ಪರ ವಿರುದ್ಧವಾದ ನಂಬಿಕೆ ಧೋರಣೆಗಳನ್ನೂ ಹುಟ್ಟು ಹಾಕಿದ್ದವೆಂದು ಗಮನಿಸಲೇಬೇಕು.”[೩೦] ಸಮಾಜದ ವೈವಿಧ್ಯಮಯ ಜಡವ್ಯವಸ್ಥೆಯಲ್ಲಿ ಪಿತೃಪ್ರಧಾನ ಮಾತೃಪ್ರಧಾನ ಸಮಾಜಗಳು ಹೀಗೆ ನಿರ್ಮಾಣವಾಗಿರಲೇ ಬೇಕು. ದಾರ್ಶನಿಕತೆಯಲ್ಲಿ ಈ ಎರಡೂ ಸಮಾಜಗಳು ಎರಡು ಪಾತ್ರವನ್ನು ನಿರ್ವಹಿಸಿದವು. ಒಂದು ಬಹಿರಂಗದಲ್ಲಿ ಪಿತೃ ಸಮಾಜವನ್ನು ಪೋಷಿಸಿದರೆ, ಮತ್ತೊಂದು ಅಂತರಂಗದಲ್ಲಿ

ಸ್ತ್ರೀ ಪ್ರಧಾನವಾದ ಘಾತೃ ಸಮೂಹವನ್ನು ಹುಟ್ಟು ಹಾಕಿತು. ಮುಂದೆ ಈ ಎರಡೂ ಸಮೂಹಗಳು ಒಂದಾದವೆಂಬುದು ಅಷ್ಟೇ ಗಮನಾರ್ಹವಾದದ್ದು.

ತತ್ವಪದಕಾರ ಸ್ತ್ರೀ ಸಂಬಂಧದ ಬಗ್ಗೆ ಮಾತನಾಡುತ್ತ ಸತಿಯನ್ನು ಮಾಯೆ, ಪ್ರಾಣಸಂಗಾತಿ ನಳಿನಾಕ್ಷಿ, ಬಾಲೆ, ಪೋರಿ, ಎಂಬಂತಹ ಪದಗಳ ಮೂಲಕ ಸಂಭೋದಿಸುತ್ತಾರೆ. ಇವು ಪದೇ ಪದೇ ಹಾಡುಗಳಲ್ಲಿ ಸ್ತ್ರೀ ದೃಷ್ಟಿಕೋನದ ನಿಷ್ಪತೆಯನ್ನು ಪ್ರತಿನಿಧಿಸುತ್ತದೆ. ತಾನು ಆರಾಧಿಸುವ ಶಕ್ತಿದೇವತೆಯನ್ನು ಲಿಂಗಾತೀತವೆಂದು ಸ್ತುತಿಸುತ್ತಾನೆ. ತತ್ವಹೇಳುವಾಗ ಬಳಸುವ ತಂಗಿ, ನಾರಿ, ಅವ್ವ, ಅಕ್ಕ ಇಂಥ ಸಂಬಂಧ ವಾಚಕಗಳು ಆತ್ಮಾನುಸಂಧಾನದ ಸಂಕೇತಗಳಾಗಿವೆ.

“ಡಾ.ದೇವಿಪ್ರಸಾದ್ ಚಟ್ಟೋಪಧ್ಯಾಯರು ವಾಮ ಎಂಬುದಕ್ಕೆ ಸ್ತ್ರೀ, ಕಾಮ, ಅರ್ಥಗಳು ಇರುವುದರತ್ತ ಗಮನಸೆಳೆದು ‘ವಾಮಭೂತ್ವ ಯಜೇತ್ ಪರಮ್’ ಎಂದರೆ ಪರತತ್ವವನ್ನು ಆರಾಧಿಸಲು ಸಾಧಕನು ಹೆಣ್ಣಾಗಲೇಬೇಕೆಂಬುದೇ ವಾಮಾಚಾರದ ಮೂಲ ಸಿದ್ದಾಂತವೆಂದು ಪ್ರತಿಪಾದಿಸುತ್ತಾರೆ. ತಾಂತ್ರಿಕರು ಆಚರಿಸುವ ಸಾಧನಾ ಯೋಗವೆನ್ನುವುದು, ಸಾಧಕನು ತನ್ನೊಳಗಿನ ಸ್ತ್ರೀ ಸತ್ವವನ್ನು ಸಾಕ್ಷಾತ್ಕರಿಸಿಕೊಳ್ಳುವ ಸಂಗತಿಯೇ ಆಗಿದೆಯೆಂಬುದು ಅವರ ಅಭಿಮತವಾಗಿದೆ. ಷಟ್‌ಚಕ್ರಗಳು, ಪದ್ಮಗಳು, ತ್ರಿಕೋನಗಳು, ಸ್ತ್ರೀ ಜನನೇಂದ್ರಿಯ ಸಂಕೇತಗಳಾಗಿದ್ದು, ಸಾಧಕನು ಎಚ್ಚರಿಸಿಕೊಳ್ಳಬೇಕಾದ ಕುಂಡಲಿನಿ ಶಕ್ತಿಯು ತನ್ನೊಳಗಿನ ಸ್ತ್ರೀತ್ವವನ್ನು ಆಹ್ವಾನಿಸಿಕೊಳ್ಳುವ ಕ್ರಿಯೆ ಆಗಿರುತ್ತದೆ.”[೩೦] ಆದ್ದರಿಂದ ತತ್ವಪದಕಾರ ತನ್ನ ಆಧ್ಯಾತ್ಮಿಕ ಅನುಭವಗಳನ್ನು ಈ ತೆರನಾಗಿ ಹೇಳುತ್ತಾನೆ.

“ತನುವೆಂಬ ಮನೆಯೊಳು ನಾರಿ
ತನ್ನಿನಿಯನಿಗೆ ಮಂಚ ಹಾಕಿದಳೋ
ಗುರುರಾಯ ಕೇಳೋ,
ಒಮ್ಮನ ನಿಷ್ಟೆಯಿಂದ ನಿಶ್ಚಯಿಸಿ
ವಿನೀತಳಾಗಿ ಗಮ್ಮನೆ ಗುರುವಿನಂಘ್ರಿಯ
ಹಿಡಿದು, ಗಂಡನ ಪಡೆದು ಹಮ್ಮು
ಪಂಥಗಳು ಹರಿದೋಡಿ, ಹರುಷಾಬ್ಧಿ
ಕೂಡಿ ಬ್ರಹ್ಮಾನಂದದೊಳಾಡಿದಳೋ
ವರ ಮಹಾತ್ಮೆ ಕೇಳೋ”[೩೧]

ಸ್ತ್ರೀ ಪುರುಷ ಭಾವವು ಭಿನ್ನವಾಗಿ ಸತಿಗೆ ಪ್ರಥಮಸ್ಥಾನವನ್ನು ತೋರಿಸುತ್ತದೆ. ಸ್ತ್ರೀಯನ್ನು ಭೋಗದ ಪ್ರತಿನಿಧಿ ಎನ್ನುವ ನೆಲೆಗಿಂತ ಭಿನ್ನವಾಗಿ ವಿವರಿಸುವುದೂ ಇಲ್ಲಿ ಕಂಡುಬರುತ್ತದೆ. ಹೆಣ್ಣನ್ನು ಆದಿದೇವತೆಯೆಂದು ವರ್ಣಿಸುತ್ತಾರೆ.

ಬಹಳಷ್ಟು ತತ್ವಪದಕಾರರು ಸ್ತ್ರೀಗೆ ಬ್ರಹ್ಮಾನಂದವೆಂದು ಕರೆದಿದ್ದಾರೆ. ಕಾರಣ ಬ್ರಹ್ಮಾನಂದವೆಂದರೆ ಶಕ್ತಿಯ ಸಂಕೇತ. ತತ್ವ ಪದಕಾರರ ಮಾತೆಯು ಮುಖ್ಯದೇವತೆಯಾಗಿ, ಶರೀರದ ಕಮಲ ರೂಪದ ಪ್ರಾಣ ಸಖಿಯಾಗಿ ಕಾರ್ಯನಿರ್ವಹಿಸುವಳು. ಈಕೆ ಬ್ರಹ್ಮಜ್ಞಾನದ ಪ್ರಕಾಶಕಳಾಗಿ ಚೈತನ್ಯಕೊಡುವಂಥವಳು.

ಸತಿಪತಿ ಧರ್ಮವು ಲೌಕಿಕದ ಪ್ರಣಯವಾಗಿದ್ದು ಮುಂದೆ ಆಧ್ಯಾತ್ಮದಲ್ಲಿ ಶುದ್ಧವಾಗುವುದು. ತತ್ವಮೌಲ್ಯದ ಅನುಭಾವದಲ್ಲಿ ಸಮನ್ವಯವಾಗುವುದು.

"ಓಡಿ ಹೋಗೋನೂ | ಬಾ ಸುಂದರಿ
ಕಡೆನೋಟಗಣ್ಣಿನ | ವಯ್ಯಾರಿ
ತಡಮಾಡದಲೆ | ಹಿಡಿನಡುಗಡೆ ದಾರಿ
ಉಡಲಿಕ್ಕೆ ಕೊಡುವೆನು | ಸೀರೆ ಜರತಾರಿ
ಊರ ವಳಗೆ ಆರುಮಂದಿ |
ಪಹರೆ ತಿರುಗುತಿಹರು ಸರ್ವಸಂಧಿ|
ಘೋರ ರಾತ್ರಿಯೊಳು ಪೂರ
ಎಚ್ಚರದಿಂದ | ಯಾರಿಗೆ ಸಿಗದಂಗಾ
ಸಂಣ ಕಿಂಡಿಲಿ ತೂರಿ|"[೩೩]

ಗಂಡು ಹೆಣ್ಣಿನ ನಡುವೆ ಇರುವ ಸರಸ, ಕಡಿಗಣ್ಣ ನೋಟದ ಒನಪು ಒಯ್ಯಾರಗಳು ಬೇರೆಯಾಗದೇ ಒಂದೇ ಆಗಿ ದೇಹ ಮೀಮಾಂಸೆಯಲ್ಲಿ ಸಮಾಗಮವಾಗುವ ಪರಿಯಿಲ್ಲಿದೆಯೆಂದು ಗುರುತಿಸಬಹುದು. ಸ್ತ್ರೀ ಸಂಬಂಧಗಳೊಂದಿಗೆ ಉಪಮೆ ಕೊಡುತ್ತಾ ದೇಹವೆಂಬ ಕತ್ತಲೆಯಲ್ಲಿ ಅಷ್ಟಮದಗಳನ್ನು ನಿಯಂತ್ರಿಸಲಾರದೇ ಹೋದಾಗ ಸಖಿಯಾಗಿ ಸತಿಯಾಗಿ ದೇಹ ಮತ್ತು ಮನಸ್ಸನ್ನು ವಿವೇಕಯುತ ದಾರಿಯತ್ತ ನಡೆಸುತ್ತಾರೆ.

ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಸ್ತ್ರೀ ಮಾದರಿಗಳನ್ನು ಆದರ್ಶಯುತವಾಗಿ ಪರಿಭಾವಿಸುವ ವೈಚಾರಿಕತೆ ಇಂದು ನೆನ್ನೆಯದಲ್ಲ. ಅನಾದಿಕಾಲದಿಂದ ಬಂದದ್ದು. ಅರ್ಧನಾರೀಶ್ವರನ ಕಲ್ಪನೆಯಲ್ಲಿ ಬಲಭಾಗ ಪುರುಷನಾಗಿದ್ದು ಎಡಭಾಗ ಸ್ತ್ರೀಯಾಗಿರುವ ಈ ಸಂಯುಕ್ತ ಸ್ಥಿತಿಯು ಸತಿಪತಿ ಭಾವವನ್ನು ಪ್ರೇರೇಪಿಸುತ್ತದೆ. ಒಬ್ಬ ಶಕ್ತಿ, ಜಗನ್ಮಾತೆ, ಸ್ತ್ರೀ ದೇವತೆಯಾಗಿ ಕಂಡಾಗ ಅದು ಶಿಷ್ಟವೂ ಆಗಿ ಅದ್ವೈತ ತತ್ವದಲ್ಲಿ ರೂಪುಗೊಳ್ಳುತ್ತದೆ. ಆದ್ದರಿಂದ ವಚನಕಾರರು ತತ್ವಪದಕಾರರು ಲೌಕಿಕವಾಗಿ ಹೆಣ್ಣು ಗಂಡು ವ್ಯತ್ಯಾಸಗಳನ್ನು ನಿರಾಕರಿಸಿ ಆತ್ಮದ ನೆಲೆಯಲ್ಲಿ ಇಬ್ಬರೂ ಸಮವೆಂದು ಸಾರಿದರು. ಈ ಲೋಕವೆಲ್ಲಾ ಹೆಣ್ಣು ಶಿವನೊಬ್ಬನೇ ಗಂಡೆಂದು ಈ ಧರ್ಮಸಮರ್ಥಿಸಿತು.

"ಜಾಣೆ ಕಾಂತನ ಕಾಣದಿರಲಾರೆ ಕ್ಷಣ
ಪ್ರಾಣಗುಂದಿತೆನ್ನ ಮನ ಪ್ರಾಣ ಸಖನ
ದೇನು ಗುಣವು"[೩೪]

ಈ ಕ್ರಿಯಾಶೀಲ ಸ್ವಭಾವಗಳಲ್ಲಿ ಕಾಣುವ ಸ್ತ್ರೀತ್ವದ ನೆಲೆಗಳು ಬರೀ ಭಾವುಕ ಅಥವಾ ಶೃಂಗಾರ ನೆಲೆಯವಲ್ಲ. ಅದನ್ನು ಮೀರಿದ ಸಮಚಿತ್ತ ನೆಲೆಯವು. ಆತ್ಮೋದ್ಧಾರದ ನೆಲೆಯವು. ಗಂಡು ಹೆಣ್ಣು ಎನ್ನುವ ಎರಡು ಜೈವಿಕ ಹಾಗೂ ಭೌತಿಕ ಸ್ವರೂಪವನ್ನು ಮೀರಿದ ಸಾಂಸ್ಕೃತಿಕ ಸ್ವರೂಪದ್ದು. ಅದ್ವಯ ನೆಲೆಯದ್ದು.

"ಲಜ್ಜೆ ನಾಚಿಕೆ ಹೋದ ಮೇಲೆ
ನಿಮ್ಮದೋಯ್ತು ರಾಚೋಟಿ ವೀರ
ಆನೆಯನೇರಿದವರಿಗೆ ಶ್ವಾನ ಕಟ್ಟೆ
ಬಲ್ಲುದೇನು?
ಹಿಂಡು ದೇವರಿಗೆಲ್ಲಾ ಗಂಡನೆಂಬ
ನಿನ್ನ ಬಿರುದು ಕಂಡು ಕಂಡ
ಕಂಡ ಕಲ್ಲಿಗೆ ಮುಂಡೆ ನಾನು
ಎರಗಲಾರೆ ಕೊಂಡು ಒಯ್ದರೆ
ಒಯ್ಯೋ ಎನ್ನ ಪ್ರಾಣ
ಎಲ್ಲಮ್ಮ ಎಕನಾತಿ ಮಾರೆಮ್ಮ
ಮಸಣಮ್ಮ ಜಾರಿ ಬಿದ್ದ ಜಾಣರ
ಮೈಲಾರ ಕೇತುಕ ನೀರ ಹೊತ್ತುಕೊಂಡು
ಕೀಲುಗೊಂಬೆ ಕುಣಿಸುತ
ಹುಟ್ಟಿದೂರಿಗೆ ಉಟ್ಟುಗೈಲೆ
ಹೋಗಲಾರೆನೊ?"[೩೫]

ಇಲ್ಲಿ ಕಾಣುವ ದೇವದಾಸಿ ಮತ್ತು ಕೆಳದೈವಗಳ ಉಲ್ಲೇಖಗಳು ಹೊಸ ಸಾಂಸ್ಕೃತಿಕ ವ್ಯಾಖ್ಯಾನಕ್ಕೆ ಪ್ರೇರೇಪಿಸುವಂತವುಗಳಾಗಿವೆ. ಈ ಪದಗುಚ್ಛಗಳನ್ನು ಸಾಂಪ್ರದಾಯಿಕ ವ್ಯಾಖ್ಯಾನಗಳಾಗಿ ಬರೀ ವಿಕಾರ ದೇವದಾಸಿ ಪದ್ಧತಿಯ ಸಮರ್ಥನೆಗೆ ಬಳಸುವುದಕ್ಕಿಂತ ಭಿನ್ನವಾದ ಪಾತಳಿಯಲ್ಲಿ ಪರಿಭಾವಿಸಿದರೆ, ತತ್ವಪದಕಾರರ ಮಾನವ ಪ್ರೀತಿಯ ನೆಲೆಗಳನ್ನ ಅರ್ಥಮಾಡಿಕೊಳ್ಳಬಹುದು. ಮನಸ್ಸಿನ ಚಂಚಲತೆ ಹಾಗೂ ದುರ್ಬಲತೆಗಳನ್ನೇ ಮುಂದು ಮಾಡುವ ಇಂಥ ಸಂಗತಿಗಳು ಸಾಧಕನ ದಾರಿಗೆ ಅಡ್ಡಿಯಾಗುವ ಅಪಾಯಕಾರಿ ನೆಲೆಗಳ ಸೂಚನೆಯೊಂದಿಗೆ ಅದನ್ನು ಮೀರಬೇಕು ಎನ್ನುವ ಉಮೇದನ್ನು ಹೊಂದಿವೆ.

“ಸಿಬುಲೆ ದೇವಿಯ ಷಂಡ ಅರ್ಚಕರು ಹೆಣ್ಣಿನಂತೆ ವೇಷ ತೊಟ್ಟು, ಉದ್ದಕೂದಲು ಬಿಟ್ಟು ಸುಗಂಧ ಲೇಪಿಸಿಕೊಂಡು ಧಾರ್ಮಿಕ ವಿಧಿಗಳನ್ನು ಆಚರಿಸುವ ಘಟನೆಗಳು ಕಂಡುಬರುವವು. ಬೆಂಗಳೂರಿನಲ್ಲಿ ದ್ರೌಪದಿಯ ಕರಗ ಹೊರುವ ಪೂಜಾರಿ, ಹೆಣ್ಣು ವೇಷ ತೊಡುವ ಆಚರಣೆ ಈಗಲೂ ಜಾರಿಯಲ್ಲಿ ಇದೆ.”[೩೧]

ಜಾನಪದ ಆಚರಣೆಯಲ್ಲಿ ಬಸವಿ ಬಿಡುವ, ಕದ್ದು ವಿವಾಹವಾಗುವ ಪರಂಪರೆಗಳನ್ನು ಇಂದಿಗೂ ಕಾಣುತ್ತೇವೆ. ಕಂಡ ದೇವರಿಗೆಲ್ಲಾ ಸತಿಯಾಗಿ ಸಾವಿನಲ್ಲಿ ಮುಂಡೆಯಾಗಲಾರೆ ಎನ್ನುವ ವೈಚಾರಿಕ ಪ್ರಜ್ಞೆ ಪ್ರೇರೇಪಿಸುತ್ತದೆ. ತತ್ವಪದಕಾರ ಗುರುವಿಗೆ ತನ್ನ ಯೌವ್ವನದ ಪರಿಚಯವನ್ನು ಮಾಡಿಕೊಡುವ ಸಂದರ್ಭವು ಬಹು ಕುತೂಹಲವಾದದ್ದು.

“ಗಂಡನೆಂದರೆ ಅವ ಪುಂಡನವ್ವಾ ತಂಗಿ
ಅಖಂಡ ಮೂರುತಿಯಾಗಿರುವ
ಪ್ರಾಯದ ತರುಣಿಯು ನಾನಮ್ಮ ತಂಗಿ
ಹೇಯದ ಜೀವನ ಸಾಕಮ್ಮಾ
ಪ್ರಿಯತಮನೊಂದಿಗೆ ಸರಸವಾಡಮ್ಮಾ
ಹೋಯಿತು ನರಜನ್ಮದ ಚಿಂತ್ಯಮ್ಮಾ
ಕ್ಷಿತಿಯೊಳು ರಾಜೂರು ಪ್ರಭು
ಹನುಮೇಶ, ಸತಿಯಾಗಿ ನವಸುರ
ಜಾತನು ಸತಿಸೇವೆ ಮಾಡಿ
ಬಯಸದೆ ಮುಂದಿನ ಗತಿಯೇನು?
ತೋರೆಂದು ಬೇಡಿದನು.”[೩೨]

ಜೀವ ದೇಹದ ಕುರಿತ ಗಂಭೀರ ಚಿಂತನೆಯನ್ನು ಇಲ್ಲಿ ಕಾಣುತ್ತೇವೆ.ಗಂಡನೆಂಬ ಗುರುವಿನ ಪುಂಡಾಟವನ್ನು ವರ್ಣಿಸುತ್ತಾ ನರಜನ್ಮದ ಪ್ರಶ್ನೆಯಲ್ಲಿ ತಮ್ಮ ಇಡೀ ವ್ಯಕ್ತಿತ್ವವನ್ನು ನಿರ್ಜೀವವಾಗಿಸುತ್ತಾ ಸಾಗುತ್ತಾನೆ.

ಆಧ್ಯಾತ್ಮಿಕ ಅನುಭವದ ತತ್ವಪದಕಾರ ಧೋರಣೆಗಳು ಸಮನ್ವಯ ದೃಷ್ಟಿಯವು. ಹೆಣ್ಣನ್ನು ಪ್ರಥಮ ಸ್ಥಾನದಲ್ಲಿ ನಿಲ್ಲಿಸುತ್ತಾರೆ. ತನ್ನ ಹಾಡಿಗೆ ಆಧ್ಯಾತ್ಮಿಕ ಕವಚ ಹೊದಿಸುತ್ತಾ ಸತಿಪತಿ-ಜಾಣೆ-ಕಾಂತೆ-ಅಕ್ಕ-ತಂಗಿ-ತಾಯಿ ಎಂದು ಸಂಬಂಧಾತ್ಮಕ ನೆಲೆಯಲ್ಲಿ ಅನುನಯಿಸುವ ವಿಚಾರಗಳು ಹೊಸ ಅನುಭವಕ್ಕೆ ಗ್ರಾಸವಾಗುವಂಥವು.

ಭಾರತದ ಯಾವುದೇ ಭಕ್ತಿ ಪಂಥದಲ್ಲಾಗಲಿ ಸತಿಪತಿಭಾವಕ್ಕೆ ವಿಶಿಷ್ಟ ಮನ್ನಣೆಯಿದೆ. ಇದಕ್ಕೆ ಕಾರಣ ನಮ್ಮ ಪುರಾಣ ಕಾವ್ಯಗಳಲ್ಲಿ ಹುಟ್ಟಿಕೊಂಡಂಥ ಕೆಲ ನೀತಿ ಕತೆಗಳೂ ಆಗಿರಬಹುದು. ನಮ್ಮ ಪರಂಪರೆಯ ನಿತ್ಯ ಜೀವನದದಲ್ಲಿ ಪ್ರಕೃತಿ ಸಂಬಂಧದಲ್ಲಿ ಅಮಾವಾಸ್ಯಗೆ ಪತಿಯೆಂದು, ಹುಣ್ಣಿಮೆಗೆ ಸತಿಯೆಂಬ ಅಂಶಗಳನ್ನು ಗುರುತಿಸುತ್ತೇವೆ. ಉದಾಹರಣೆ ಶಿವರಾತ್ರಿ ಅಮಾವಾಸ್ಯೆ, ಮಣ್ಣೆತ್ತಿನ ಅಮಾವಾಸ್ಯೆ, ನಾಗರ ಅಮಾವಾಸ್ಯೆ, ಬೆನಕನ ಅಮಾವಾಸ್ಯೆ ಮಹಾಲಯ ಅಮಾವಾಸ್ಯೆ, ಇವು ಪುರುಷ ದೈವ ಸಂಸ್ಕೃತಿಯನ್ನು ಮುಂದು ಮಾಡುತ್ತದೆ. ಕಡ್ಲೆಗಡುಬು ಹುಣ್ಣಿಮೆ, ಆಗಿಹುಣ್ಣಿ, ಗೌರಿ ಹುಣ್ಣಿಮೆ, ನೂಲುಹುಣ್ಣಿಮೆ, ಸೀಗೆ ಹುಣ್ಣಿಮೆ - ಈ ಹುಣ್ಣಿಮೆಗಳು ಸ್ತ್ರೀಪರ ಸಂಸ್ಕೃತಿಯನ್ನು ಸೂಚಿಸುತ್ತವೆ.

ಇಂಥ ಸಾಂಸ್ಕೃತಿಕ ಹಾಗೂ ನೈಸರ್ಗಿಕ ಗ್ರಹಿಕೆಯ ಪರಂಪರೆ ಹಬ್ಬಗಳು ಸತಿಪತಿ ಭಾವದ ಸ್ತ್ರೀಪುರುಷ ಸಂಬಂಧದ ದ್ವಂದ್ವಾತೀತ ಇರುವಿಕೆಯನ್ನು ತೋರಿಸುತ್ತದೆ. ಲಿಂಗತಾರತಮ್ಯದ ನೆಲೆಯಿಂದ ಅತೀತವಾದದ್ದಾಗಿದೆ. ಇಂಥ ಪಾರಮಾರ್ಥಿಕ ತತ್ವವು ಮನಸ್ಸಿಗೆ, ತಿಳುವಳಿಕೆಯ ಎಚ್ಚರಿಕೆಯನ್ನು ನೀಡುವುದಲ್ಲದೆ ಸತ್‌ಚಾರಿತ್ರ್ಯ ಹಾಗೂ ಸದ್ಭಾವನಾ ಗುಣಗಳ ಬೆಳವಣಿಗೆಗೆ ಕಾರಣವಾಗುತ್ತವೆ.

"ಸೋಮವಾರ ಅಮಾವಾಸ್ಯೆ ಛಟ್ಟಿಯ ದಿನ
ನೇಮಿಸಿ ತುರಾಯಿ ನೀ ಇಚ್ಛೆ
ಕಾಮಿತ ಫಲವ ದೇವ ಕರುಣಿಸು ಸೂಗೂರಯ್ಯಾ
ಪ್ರೇಮದಿಂದಲಿ ಕೊಟ್ಟ ಪರುವಗೆ ಕೈಯ"[೩೮]

ಎಂದು ತತ್ವಪದಕಾರ ಅಮಾವಾಸ್ಯೆಯ ಮಹತ್ವವನ್ನು, ಪರಂಪರೆಯ ಜವಾಬ್ದಾರಿಯನ್ನು ಸಮುದಾಯದ ಮುಂದೆ ವ್ಯಾಖ್ಯಾನಿಸುವನು. ಸೋಮವಾರದ ಛಟ್ಟಿ ಅಮಾವಾಸ್ಯೆ ಶ್ರೇಷ್ಟವಾದದ್ದೆಂದು ಹಾಡಿನ ಹಿನ್ನೆಲೆಯಲ್ಲಿ ಪ್ರಕಟಿಸುವನು. ಪಾರಮಾರ್ಥಿಕ ಪಥದಲ್ಲಿ ಹಾಗೂ ಒಟ್ಟು ಮಾನವ ಸಂಬಂಧದಲ್ಲಿ ಸ್ತ್ರೀ ಪುರುಷಗುಣಗಳು ಭಿನ್ನವಾಗಿರದೇ ಒಂದೇ ಆಗಿ ಸ್ತ್ರೀ ಪುರುಷ ಎನ್ನುವ ಎರಡು ಗುಣಲಕ್ಷಣಗಳು ಸಾಧನ ವಿಧದಲ್ಲಿ ಅರಿವಿನ ಸಂಕಥನದಲ್ಲಿ ಅಭಿನ್ನವಾಗಿ ಪ್ರವಹಿಸುವ ಬಹುಮುಖ್ಯ ಸಂಗತಿಯನ್ನು ತತ್ವಪದಕಾರರು ತಿಳಿಸಿಕೊಡುತ್ತಾರೆ.

## ೪.೨. ಅನುಭಾವದ ಸ್ವರೂಪ ಮತ್ತು ಹಸಿವು

ಅನುಭವ ಮತ್ತು ಅನುಭಾವ ಆಧ್ಯಾತ್ಮಿಕ ವಿಕಾಸದ ಎರಡು ಹಂತಗಳು. ಲೌಕಿಕ ಜೀವನದಲ್ಲಿ ಕಂಡ ಸುಖ-ದುಃಖಗಳು, ನೋವು ಹತಾಶೆಗಳನ್ನು ಅನುಭವಿಸಿದ ವ್ಯಕ್ತಿಯನ್ನು ಸಂಸಾರದ ಅನುಭವಿ ಎಂದು ಹೇಳುತ್ತೇವೆ. ಈ ಲೌಕಿಕ ತತ್ವವು ಗಟ್ಟಿಗೊಂಡು ಪಾರಮಾರ್ಥಿಕತೆಯ ಮೂಲಕ ಆತ್ಮನಿವೇದನೆಯೊಂದಿಗೆ ಅರಿವಾಗುವ ಹಂತವೇ ಅನುಭಾವ. ಶರಣರ ವಚನಗಳಲ್ಲಿ ಹೀಗೆ ಗಮನಿಸಬಹುದು.

ಅಯ್ಯಾನಿಮ್ಮ ಅನುಭಾವದಿಂದ ಎನ್ನ ಕರ್ಮಭೇದನವಾಯಿತಯ್ಯ(ಬಸವಣ್ಣ). ಅರಿಷಡ್ವರ್ಗಗಳ ಇಚ್ಛೆಗೆ ಹರಿಯದಿರಲ್ಲಿಡೆ ಅನುಭಾವ (ಚೆನ್ನಬಸವಣ್ಣ) ಶರಣರು ಕಂಡ ಅನುಭಾವ ಪದದ ಅರ್ಥ ಶಿವಜ್ಞಾನ ಅಥವಾ ಶಿವನ ಬಗ್ಗೆ ತಿಳುವಳಿಕೆಯುಳ್ಳ ಮನದ ಅರ್ಥವೆಂದು ಶರಣರ ವಿಚಾರಕ್ಕೆ ಸಾಮ್ಯವಾಗಿ ಪಾಶ್ಚಾತ್ಯರು 'ಮಿಸ್ಟಿಸಿಸಮ್' ಎನ್ನುವ ಪದವನ್ನು ಬಳಸಿದ್ದಾರೆ. 'ಸೂಫಿಗಳು - ಗುರುವೇ ತಂದೆ, ಗುರುವೇ ತಾಯಿ, ಗುರುವೇ ಸರ್ವಸ್ವವೆಂದು, ದೇವರಿಗಿಂತ ದೊಡ್ಡಶಕ್ತಿ ಗುರುವೆಂದು ನಂಬುತ್ತಾ "ಗುರುವನ್ನು ಬರೀ ಭಯ ಭಕ್ತಿ ಗೌರವಗಳಿಂದ ಕಾಣದೇ ಗೆಳೆಯನಂತೆ, ಆತ್ಮ ಸಖಿಯಂತೆ ಕಾಣುತ್ತಾರೆ. ಗುರುವಿನ ಮೂಲಕ ಇಷ್ಟ ದೈವವನ್ನು ಸಖಿಯೆಂದು ಹೇಳುತ್ತಾ, ಆತ್ಮಪತಿ, ಪರಮಾತ್ಮ ಸತಿಯೆಂದು ತಿಳಿದಿದ್ದಾರೆ."[೩೯]

ಈ ಮೇಲಿನ ಮೂರು ಅಭಿಪ್ರಾಯಗಳನ್ನು ಅವಲೋಕಿಸಿದಾಗ ಜೀವಾತ್ಮ ಪರಮಾತ್ಮನಿಗೆ ಸಂಬಂಧಿಸಿದ ಆತ್ಮತೃಪ್ತಿಯೇ ಆತ್ಮ ತತ್ವವಾಗಿದ್ದು ಇದನ್ನು ತತ್ವಪದಕಾರರು ಗುರುವಿನ ಮೂಲಕ ಕಾಣುವ ಪ್ರಯತ್ನ ಮಾಡಿದರು. ತತ್ವಪದಕಾರನ ಅನುಭಾವ ಗುರುವೇ ಎಂದು ಗ್ರಹಿಸಿದ್ದಾನೆ. ಗುರುವಿನ ಇರುವಿಕೆಯನ್ನು ದೈವದ ಮುಖಾಂತರ, ಅನುಭಾವದ ಅಂತರಂಗವನ್ನು ತಟ್ಟಲು ಉಂಟಾಗುವ ಕಂಪನಗಳು ಅನುಭಾವದ ವಿಚಾರವಾಗುತ್ತವೆ. ಇದನ್ನೇ ಪಾರಮಾರ್ಥಿಕತೆಯ ಮೊದಲ ಸುಖವೆಂದು ಗುರುತಿಸುವುದು. ಗುರುಕರುಣೆ ದೈವದ ಇದು ದೊರಕಬೇಕಾದರೆ ಸಮಾಜವನ್ನು ಪ್ರೇಮದಿಂದ ನೋಡುವ ಧರ್ಮ ಸಹಿಷ್ಣುವಾಗಬೇಕಾಗುತ್ತದೆ ಸಾಧಕನಾಗಬೇಕಾಗುತ್ತದೆ.

ಸಮಾಜದಿಂದ ದೂರವಿರುವುದು, ಒಂಟಿಯಾಗಿ ಗುಹೆಯಲ್ಲಿರುವುದು. ಮೌನವಾಗಿರುವುದು ಇಂಥ ಸ್ವಭಾವಗಳ ಹಿನ್ನೆಲೆಯುಳ್ಳ ತತ್ವಪದಕಾರರು ಮುಗ್ಧ ಮಕ್ಕಳ ಸ್ವಭಾವದವರೆಂದು ಗುರುತಿಸಬಹುದು. ಶರಣರು ಶಿಶುಕಂಡ ಕನಸು, ಮೂಗನು ಬೆಲ್ಲಮೆದ್ದಂತೆ ಎಂದು ಹೇಳಿದ್ದನ್ನು ಇಲ್ಲಿ ಸ್ಮರಿಸಬಹುದು. ತನ್ನ ಒಂಟಿತನದಲ್ಲಿ ಅನುಭಾವದ ಹಂತವನ್ನು ತಲುಪಲು ಶ್ರಮಿಸುವ ವಿಚಾರ ಹೀಗಿದೆ.

"ಅನುಭಾವಿಯಾಗಿ ನೋಡಣ್ಣಾ
ಜೀವತನುಭಾವದ ಅನುಭಾವವನು
ತಿಳಿಯೋ ಮಂಗಣ್ಣ|
ಯೇಸು ಜನ್ಮಗಳಿಂದ ನೀನು
ಈಶನ ಕಾಣದ ಆಯಿತು
ಭವ ಬಂಧನ ಯೀ ಸಮಯದಿ ನೋಡೋ ಕಂದ
ದ್ಯಾಸಸೂನಾದೆ ಯೀಶನೊಳಿಡಬೇಕಾನಂದ
ಯರಡನುವಂದು ವಂದು ಮಾಡೋ ಮತ್ತೆ
ಮೂರು ಆರರೊಳು ಭಾವನೋಡೋ
ತಾರಕ ಬ್ರಹ್ಮನೊಡಗೂಡೇ ಪರ"[೪೦]

ತತ್ವದಲ್ಲಿ ಅನುಭಾವ, ತನುಭಾವ, ಬ್ರಹ್ಮಾನುಭಾವವೆಂಬ ವಿಚಾರ ಬಹುಮಹತ್ವಪೂರ್ಣವಾದದ್ದು. ಮನುಷ್ಯನು ಈ ಜನ್ಮದಲ್ಲಿ ಧನ್ಯನಾಗಬೇಕಾದರೆ ದೇವರಧ್ಯಾನ ಬಹುಮುಖ್ಯವಾಗಿರುತ್ತದೆ. ಎರಡರೊಳು ಒಂದು ಮಾಡು ಎಂದರೆ ತನು, ಮನ, ಭಾವವು ಅನುಭಾವವಾಗಿ ಪರಿವರ್ತಿತವಾಗುವುದು ಎಂಬ ವಿಚಾರ ಗಮನಾರ್ಹವಾದುದು. ಪಾಂಚಾಳರ ಕುಲದಿಂದ ಬಂದ ಖೇಮಣ್ಣ, ಗೂಗಲ್ಲು ಪರಪ್ಪಯ್ಯನಂಥ ತತ್ವಪದಕಾರರು ಶಿವಶಕ್ತಿ, ಕ್ರಿಯೆ, ಸಂಗಮ ಸ್ಥಾನಗಳಿಗೆ ಅನುಭಾವವೆಂದು ಹೇಳಿದ್ದನ್ನೂ ಇಲ್ಲಿ ಗ್ರಹಿಸಬೇಕಾಗುತ್ತದೆ.

"ಪಾಂಚಾಲದವರು ನಾವೀಗ|
ಪಂಚವರ್ಣಾನಿ ಜನಿಸಿದೆವೀಗ
ಪಂಚಾಕ್ಷರಿಯಿಂದ ಪಂಚಭೂತಗಳಲ್ಲಿ
ವಂಚನೆಯಿಲ್ಲದೆ ಪ್ರಪಂಚದೊಳಿರುವೆವು"[೪೧]

ಅಂದರೆ ಸರಳವಾಗಿ ಗಮನಿಸಿದಾಗ ಕುಲದ ನೆಲೆಯು ಪರಶಕ್ತಿಯಾಗಿ ಇಲ್ಲಿ ಅನುಭಾವದ ಅಂಶಗಳೊಂದಿಗೆ ಏಕವಾಗಿವೆ.

ಧರ್ಮ ಸಂಪ್ರದಾಯದಲ್ಲಿ ಅನುಭಾವವು ವಿಕಾಸವಾಗುವುದಿಲ್ಲವೆಂಬ ಅರಿವು ಇದ್ದುದ್ದರಿಂದಲೇ ನಿರ್ದಿಷ್ಟವಾಗಿ ತಮ್ಮ ಧರ್ಮದ ಬಗ್ಗೆ ಮಾತನಾಡುವುದಿಲ್ಲ. ಆದರೆ ಪಂಚಮವರ್ಣದ ವ್ಯವಸ್ಥೆಯನ್ನು ಕುರಿತು ಪ್ರತಿಕ್ರಿಯಿಸುತ್ತಾರೆ. ಮುಂದೆ ಪಂಚಾಕ್ಷರಿ ಮಂತ್ರದ ವರ್ಣನೆಯ ಸಂದರ್ಭದಲ್ಲಿ ಪ್ರಕೃತಿಯ ಪಂಚಭೂತಗಳಲ್ಲಿ ಶಿವಶಕ್ತಿಯರು ದೇಹವಾಗಿದ್ದಾರೆ. ಈ ದೇಹವೆಂಬ ಪಿಂಡಾಂಡದಲ್ಲಿ ಅನುಭಾವದ ಜ್ಞಾನ ಜ್ಯೋತಿಯಾಗಿ ದಾರಿ ತೋರುತಿಹರು.

"ನುಡಿನಿಂದು ನಡೆ ನಿಂದು
ಜಡವಿಡಿದು ಒಡಲೊಂದು
ತೊಡರಿಕೊಂಡನು ಬಿಡದೆ
ಹಿಡರಿಕೊಂಡನು ಬಿಡದೆ
ಹಿಡಿಗಡನೆ ಒಂದು
ಅರಿವು ಮರೆವು ಕುರುಹು
ಬೆರೆದೆರಡಾಗದಿಹ ಪರ"[೪೨]

ಈ ಪದ್ಯದಲ್ಲಿ ಜಡವಿಲ್ಲದ ಅನುಭಾವದ ಸ್ಥಿತಿಯನ್ನು ವಿವರಿಸುತ್ತಾ ಅರಿವು, ಕುರುಹು, ಈ ಮೂರೂ ಒಂದೇ ಮನಸ್ಥಿತಿಯನ್ನು ಅಂತರಂಗದ ಮೂಲಕ ಹೊರಹಾಕುತ್ತವೆ. ಅರಿವಿನ ಪ್ರಜ್ಞೆಯೇ ಅನುಭಾವವಾಗುತ್ತದೆ. ಮೊದಲು ದ್ವೈತವಾಗಿದ್ದು ಮುಂದೆ ಮನದ ಒಲವಿನಿಂದ ಅನುಭೂತಿಗೊಳ್ಳುತ್ತದೆ.

ತನ್ನ ಗುರುವಿನ ಸಾಂಕೇತಿಕತೆಯೊಂದಿಗೆ ಆಧ್ಯಾತ್ಮಿಕ ಪರಿಭಾಷೆಯಲ್ಲಿ ಅರಿವು, ಕುರುಹು ಭಿನ್ನವಲ್ಲ. ಎರಡೂ ಒಂದೇ ಎಂಬ ಗ್ರಹಿಕೆಯು ಆತ್ಮತತ್ವದ ಮೂಲಕ ಪ್ರಕಟವಾಗುವುದು. ಡಾ.ಎಸ್.ವಿದ್ಯಾಶಂಕರರು ಹೇಳುವಂತೆ "ಮನದ ಅಂತರಂಗದಲ್ಲಿರುವ ಶಕ್ತಿಗಳನ್ನು ಎಚ್ಚರಗೊಳಿಸಿ ಆ ಎಚ್ಚರದಿಂದ ತೆರೆದ ಒಳಗಣ್ಣಿನಿಂದ ಸತ್ಯದ ಸ್ವರೂಪವನ್ನು ಪ್ರತ್ಯಕ್ಷವಾಗಿ ಸಾಕ್ಷಾತ್ಕರಿಸಿಕೊಳ್ಳುವುದು" ತತ್ವಪದಕಾರನ ದೈವನಿಷ್ಠೆ ಪ್ರಮುಖವಾಗಿದೆ. ಇವರು ಗ್ರಾಮೀಣ ಪ್ರದೇಶದಿಂದ ಬಂದಿದ್ದವರಾಗಿದ್ದರಿಂದ ಇವರ ದೈವನಿಷ್ಠೆಯೂ ಗ್ರಾಮೀಣ ಬದುಕಿನ ಒಂದು ಪ್ರಮುಖ ಭಾಗವಾಗಿದೆ. ಇವರು ಏಕದೇವೋಪಾಸಕರಾದಂತೆ, ಬಹುದೇವೋಪಾಸಕರೂ ಹೌದು. ಇವರ ದೈವ ಕಲ್ಪನೆ ಧಾರ್ಮಿಕ ಮನೋಭಾವಗಳು ಅಬೇಧವೆಂದೆನಿಸುವುದಿಲ್ಲ.

"ಕಾಮಕ್ರೋಧಮುಲನ್ನಿ ವಿಡಿಚಿ
ರಾಮನಾಮಮು ತೆಲವರಾ
ಸೋಮ ರಕ್ತಮು ಪಾಡು ಚೇಸಿ
ರಾಮಕಾಂತಿನಿ ಚೂಡು ರಾ
ಮೂಡು ನಾಲ್ಕು ಏಡು ಮೆಟ್ಟಲು
ಜಾಡ ತೆಲಿಸಿ ಎಕ್ಕುರಾ
ರೆಂಡು ಒಗಟಿ ಮೂಡುನೆತ್ತುಲೋ
ಮೂಡು ಮೂಲತೋ ಉಂಡು ರಾ
ಸಂಗಮರಿಸಿ ಮಾಣು ಮರಿಸಿ
ಪ್ರಾಣಲಿಂಗಮು ವೆತುಕುರಾ"[೪೩]

ಕಾಮಕ್ರೋಧಗಳು, ಅಷ್ಟಮದಗಳು ಈ ಮನದಲ್ಲಿ ನಿಶೆಯಿದ್ದ ಹಾಗೆ. ಇವುಗಳನ್ನು ತ್ಯಜಿಸಿ, ಭಕ್ತಿಯಿಂದ ರಾಮನ ಬೆಳಕನ್ನು ನಿನ್ನ ಅಂತರಂಗದಲ್ಲಿ ನೋಡು. ಏಡುಮೆಟ್ಟಿಲು ಭಕ್ತಿಯ ಹಂತಗಳು ಈ ಪಿಂಡಾಂಡದಲ್ಲಿ ಇಹಪರ ಮೀರಿ ಜ್ಞಾನ ಶೂನ್ಯಾಂತವಾದ ಏಕಭಾವ ಅನುಭಾವವಾಗಿದೆ. ಇದುವೇ ಪ್ರಾಣಭಾವವೆಂಬ ನಿವೇದನೆ ತತ್ವಪದಕಾರರದು. ಮನಪ್ರಾಣ ಅನುಭಾವ ಹಂತದಲ್ಲಿ ಭಕ್ತಿಯು ವೈಯಕ್ತಿಕವಾದದ್ದು. ಇದು ಆತ್ಮದ ಹೃದಯ ತಟ್ಟಬೇಕಾದರೆ ಎಲ್ಲಾ ತರ್ಕಗಳನ್ನು ಬದಿಗೊತ್ತಿ ಮೌನವಾಗುವುದು. ಅಕ್ಕಮಹಾದೇವಿಯ ವಚನದಿಂದ ಇನ್ನಷ್ಟು ಪುಷ್ಟೀಕರಿಸಬಹುದು.

"ಮರಮರ ಮಥಿನಿಸಿ ಕಿಚ್ಚು ಹುಟ್ಟಿ
ಸುತ್ತಣ ತರುಮರಾದಿಗಳ ಸುಡಲಾಯ್ತು
ಆತ್ಮ ಆತ್ಮ ಮದಿಸಿ ಅನುಭಾವ ಹುಟ್ಟಿ
ಹೊದ್ದಿರ್ದ ತನುಗುಣಾದಿಗಳ ಸುಡಲಾಯ್ತು

ಇಂತಪ್ಪ ಅನುಭಾವದ ಅನುಭಾವವ
ತೋರಿ ಎನ್ನ ಒಡಲನುಳಿಹಿಕೊಳ್ಳಾ”[೪೪]

ಭಕ್ತಿಯ ಮನ ಸಂಘರ್ಷದಲ್ಲಿ ಕಿಚ್ಚು ಹುಟ್ಟಿದರೂ ಏಕವಾದ ಹಂತವು, ತನುಗುಣಗಳು ಶಾಂತವಾದರೂ ಕೊನೆಯ ಹಂತದಲ್ಲಿ ಅನುಭಾವದ ಸತ್ಯ ಪ್ರಕಟವಾಗುತ್ತದೆ. ಇದು ಕ್ಷಣಿಕವಾದರೂ ಅದರ ಫಲಿತಾಂಶ ಮಾತ್ರ ಮನೋಬಲವನ್ನು ಕೊಡುವಂಥದ್ದು. ವಚನಕಾರರಲ್ಲಿ ಕಾಣುವ ಅನುಭಾವದ ಸಂವೇದನೆಗಳು, ಕೆಲವು ಸಾರಿ ಆಕ್ರೋಶದಿಂದ ಭೋರ್ಗರೆಯುತ್ತಾ, ಆರ್ಭಟಿಸುತ್ತಾ ಮುಂದೆ ಸಾಗುವುದು. ಅನಿತ್ಯ ಅಂಗವಿಚಾರದಲ್ಲಿ ನಿರ್ಲಿಪ್ತವಾಗುವುದು. ಈ ಹಂತವನ್ನೇ ವಚಕಾರರು ಅಂಗ, ಲಿಂಗ, ಸಂಗ ಸುಖವೆಂದರು.

ಡಾ.ವೀರೇಶ ಬಡಿಗೇರರು ಹೇಳುವಂತೆ, ‘ವಚನಕಾರರಲ್ಲಿ ಉಂಟಾದ ಶರೀರ ಸುಖದ ಕಲ್ಪನೆಯನ್ನು ಅಪ್ರತಿಮ ಶೈವ ಅದ್ವೈತಿಯಾದ ಅಲ್ಲಮನಲ್ಲೂ ಸಕಾರಾತ್ಮಕ ನೆಲೆಯಲ್ಲಿ ಕಾಣಬಹುದು. “ಒಡಲಿಚ್ಛೆ ಸಲಿಸದೆ ನಿಮಿಷವಿರಬಾರದು” ಎನ್ನುವ ಪ್ರಭು ನಿಷ್ಟುರವಾದ ದೇಹದಂಡನೆಯನ್ನು ಅಲ್ಲಗಳೆಯುತ್ತಾನೆ. ವಿಶಿಷ್ಟ ಸೆಳುವುಗಳನ್ನು ಆತ ಗೌರವಿಸುತ್ತಾನೆ.”[೪೪] ಈ ಗೌರವವು ಜ್ಞಾನ ವಿಕಾಸದ ದಾರಿಯಲ್ಲಿ ಆಧ್ಯಾತ್ಮಿಕ ಅರಿವಿಗೆ ಸಹಾಯಕವಾಗುತ್ತದೆ. ಇದನ್ನೆ ಜ್ಞಾನ ಮಾರ್ಗವೆನ್ನುವುದು. ಅಲ್ಲಮನಂಥವರು ಶಬ್ದಗಳ ಕಟ್ಟಡದಲ್ಲಿ ಪರಿಪಕ್ವ ವ್ಯವಸ್ಥೆಯನ್ನು ಕಟ್ಟಿಕೊಡುವರು. ಇದುವೇ ಶೂನ್ಯ ಬಯಲು ಆಗಿ, ಅಲೌಕಿಕ ಸ್ಥಿತಿಯ ಹಂತವನ್ನು ಮನಸ್ಸಿಗೆ ನಾಟುವಂತೆ ಮಾಡುತ್ತಾರೆ. ‘ಶಬ್ದದ ಲಜ್ಜೆಯ ನೋಡಾ’ ಎಂಬ ಮೂದಲಿಕೆ ಅನುಭಾವದಲ್ಲಿ ಗಮನಸೆಳೆಯುತ್ತದೆ.

ವಚನಕಾರರು ಬಳಸಿದ ಅನುಭಾವಪದವನ್ನು ತತ್ವಪದಕಾರರು ತಮ್ಮ ಹಾಡುಗಳಲ್ಲಿ ಹೆಚ್ಚಾಗಿ ಬಳಸಲಿಲ್ಲ. ಅವರ ಮನಸ್ಥಿತಿಯ ಆಂತರಿಕ ಧ್ಯಾನವು ಶಿವಮನಸ್ಥಿತಿಗೆ ತಲುಪುವಂತೆ ಹೀಗೆ ಹೇಳಿದರು. ‘ದಯಾದಕ್ಷ ಲಿಂಗ ಶತಕಂಠ ಲಿಂಗ, ಹರಕೂಟ ವರಬ್ಯಾಟಿ ಲಿಂಗ ಉಮೆಯ ಅಂಗಲಿಂಗ, ಆನಂದ ಪರವನ ಪ್ರಾಣಲಿಂಗ’ ವೆಂದು ಹೇಳುತ್ತಾರೆ. ಲಿಂಗದ ಬೆಳಗೇ ಆತ್ಮದ ಉನ್ಮತ್ತದಲ್ಲಿ ಲಿಂಗದ ಉಪಮೆ ಕೊಡುವರು. ಇನ್ನೂ ಕೆಲ ತತ್ವಪದಕಾರರು ಜೀವ, ಆತ್ಮ, ಕರ್ಮ, ವೈರಾಗ್ಯ, ಮೋಕ್ಷಗಳಂಥ ಹಾಡುಗಳನ್ನು ನಾನು ಬ್ರಹ್ಮಾನುಭವಿ ಎಂಬ ಅರ್ಥದಲ್ಲಿ ಬಳಸುತ್ತಾರೆ.

“ಅಳಿವ ಜ್ಯೋತಿ ತೈಲವಿತ್ತಂತೆ ಮನಕೆ
ಕಳೆತುಂಬಿ ಬಂದ ಕಾಳಬೆಳಗುಂದಿ ವೀರೇಶ
ಸುಳುವಿನೊಳಗೆ ಸೂರೆಗೊಂಡವನಮ್ಮಾ
ನರರ ಪರವನ್ನಾಳಿದ ಪರಬ್ರಹ್ಮ ವೀರೇಶನಮ್ಮ”[೪೬]

ಭಕ್ತಿಯೆಂಬ ತೈಲದಲ್ಲಿ ಅನುಭಾವವೆಂಬ ಜ್ಯೋತಿಯ ವಿವರಣೆ ಕೊಡುತ್ತಾನೆ. ಎನಗೆ ತಿಳಿಯದೇ ಎನ್ನ ಆತ್ಮದಲ್ಲಿ ಸ್ವಾನುಭಾವದ ಭಕ್ತಿಯನ್ನು ರೂಪಿಸಿಕೊಂಡೆ ಎಂಬಂಥಾ ವಿಚಾರಗಳು ಹೊರಹೊಮ್ಮುತ್ತವೆ. ಇವೆಲ್ಲವೂ ಗುರು ಸಾಧನೆಯ ಕಲಿಕಾ ವಿಧಾನಗಳಾಗಿ ಪರಿಣಮಿಸುವವು.

ಪ್ರಮುಖ ಧರ್ಮಗಳಾದ ದ್ವೈತ, ಅದ್ವೈತ, ಶಕ್ತಿ ವಿಶಿಷ್ಟಾದ್ವೈತ ತತ್ವಗಳು ಅನುಭಾವದ ನೆಲೆಯನ್ನು ಪ್ರಕಟಿಸಲು ಸೋತಾಗ ಇಂಥ ಶಬ್ದಗಳನ್ನೂ ಬಳಸಿರಬೇಕು. ಇವೆಲ್ಲಾ ಸಿದ್ಧಮಾದರಿಯ ತತ್ವಗಳನ್ನು ಮುರಿದು ಸಿದ್ಧಾಂತಗಳಾಗಿ ಆಧ್ಯಾತ್ಮಿಕ ಪರಿಧಿಯನ್ನು ವಿಶಾಲ ಮಾಡುತ್ತದೆ. ತತ್ವಪದಕಾರರು ಹೆಚ್ಚಾಗಿ ಜ್ಞಾನದ ಅನುಭಾವದ ಹಂತವನ್ನು ಹಂಚಿಕೊಂಡವರು. ತಮ್ಮ ಜ್ಞಾನ ವಿಕಾಸಕ್ಕೆ ಒಗ್ಗಿದಂಥ ಮಾತುಗಳನ್ನು ಹಾಡುಗಳಲ್ಲಿ ಬಳಸುವರು. ಭಾರತೀಯ ದರ್ಶನಗಳನ್ನು ಮೌಖಿಕ ಜ್ಞಾನದ ಮೂಲಕ ಹಂಚಿಕೊಂಡು ತತ್ವಪದ ಸಾಹಿತ್ಯದ ರಚನೆಯ ಸಮೃದ್ಧಿಗೆ ಕಾರಣರಾಗಿದ್ದಾರೆ. ಉದಾ. ಬಾಲಲೀಲ ಮಹಾಂತ ಶಿವಯೋಗಿಗಳಂಥವರು ಶಿಶುವಿನಂತೆ ತೊಟ್ಟಿಲಲ್ಲಿ ಮಲಗಿರುತ್ತಿದ್ದರೆಂದರೆ ಇಂಥ ಮುಗ್ಧ ಸ್ವಭಾವದ ಸಂತರು ವಿರಕ್ತಿ, ಹಠ, ಮೌನಗಳೊಂದಿಗೆ ಅನುಭಾವಿಗಳಾಗಿ ಕಾಣುವರು.

> "ನಾನಾ ಆತ್ಮವು ನಾನಾ ಕಲ್ಪನೆ
> ನಾಮ ರೂಪವು ನಾನೇ ದಿಟ
> ಸತ್ತು ಚಿತ್ತು ನಾನೇ ದಿಟ
> ಯುಕ್ತ ಶಕ್ತನು ನಾನೇ ದಿಟ
> ಮುಕ್ತಿ ದೇಹಕನು ನಾನೇ ದಿಟ
> ನಾನಾರೆಂದವ ನಾನೆ ದಿಟ
> ನೀನೆ ನಾನಾದವ ನಾನೆ ದಿಟ"[೪೭]

ಈ ದೇಹದ ಜಡತ್ವವನ್ನು ಕಂಡು ತಾನಾರೆಂದು ಚಿಂತಿಸುವ ಅಂತರಾತ್ಮನು, ಮನದ ತತ್ವವನ್ನರಿತು, ಪರತತ್ವದೊಂದಿಗೆ ಬಿಡುಗಡೆ ಬಯಸುವ ಕೊನೆಯ ಅವಸ್ಥೆ ಇದಾಗಿದೆ. ಇದೇ ಅದ್ವೈತ ನೆಲೆಯ ಅನುಭಾವದ ಭಾಷೆಯಾಗಿದೆ. ಅನುಭಾವದ ಅರಿವು ಅಂತರಂಗದ ಹಸಿವನ್ನು ಉದ್ದೀಪನಗೊಳಿಸುತ್ತದೆ. ಭಕ್ತಿಯ ಮುಖಾಂತರ ಮುಕ್ತಿ ಸಾಧ್ಯವೆಂಬ ಗುರಿಯಲ್ಲಿ ನಡೆಯುತ್ತಾರೆ. ಇದನ್ನೇ "ಆಧ್ಯಾತ್ಮಿಕ ಅಧ್ಯಯನದ ಮನಃಶಾಸ್ತ್ರವೆಂದು ಹೇಳುವುದು. ಮನಸ್ಸನ್ನು ಅನ್ವೇಷಿಸುವ ಮತ್ತು ವ್ಯಕ್ತಿಯ ಕಾಣ್ಕೆಗಳ ಸೀಮೆಯನ್ನು ವಿಸ್ತರಿಸುವ ಶಾಸ್ತ್ರಮಾರ್ಗ"[೪೮]

ಕೂಡಲೂರು ಬಸವಲಿಂಗರು ತಮ್ಮ ಪತ್ನಿಯನ್ನು ನಡುಬಜಾರದಲ್ಲಿ ಪ್ರಣಯಕ್ಕೆ ಆಹ್ವಾನಿಸಿದ ವಿಚಾರ ತಿಳಿದುಬರುತ್ತದೆ. ನೀರಲಕೇರಿ ಬಸವಲಿಂಗರು ಶಕ್ತಿಯನ್ನು ಕುರಿತಾಗಿ ಓಂಕಾರ ರೂಪಿಣಿ, ಭೋಗಿ ಭಯಂಕರಿ, ಶಂಕರನ ಅರ್ಧಾಂಗಿನಿ ಎಂದು ಕರೆಯುತ್ತಾರೆ. ಶಿವನ ಅರ್ಧಾಂಗಿನಿಯನ್ನು ಆತ್ಮದಲ್ಲಿ

ಬಿಂದುವೆಂದು ಸ್ತುತಿಸುವ ಪರಿ ಕುತೂಹಲವನ್ನು ಮುಂದು ಮಾಡುತ್ತದೆ. ಮಂತ್ರ ತಂತ್ರಕ್ಕೆ ಮೀರಿ ತಮ್ಮ ಚಿಂತೆಗೆ ಪರಿಹಾರ ಮಾಡ್ವದೆ? ಎನ್ನುವ ನಿವೇದನೆಗೆ ಪರಿಹಾರ ಹುಡುಕುವ ಮಾರ್ಗ ಈ ಸಂತರಿಗೆ ಕಾಡಿರಬೇಕು. ಶಿವ ಶಕ್ತಿಯರನ್ನು ಶ್ರದ್ಧಾಭಕ್ತಿಯಿಂದ ಪೂಜಿಸುತ್ತಿದ್ದು, ಶಿವೆ ಉಗ್ರಭೈರವನ ಸ್ವರೂಪದಲ್ಲಿದ್ದು ತಾವು ಪೂಜಿಸುವ ಆರಾಧಿಸುವ ಆಚರಣಾ ವಿಧಿಗಳನ್ನು ಅನುಭಾವಿಕ ಹಂತದ ಮಿಲನವೆಂದು ಇವರು ತಿಳಿದಿದ್ದರು. ಡಾ. ಲೋರೆಂಜನ್ ರವರು ಹೇಳುವಂತೆ ಈ ಮಿಲನ ಫಲವು ಎರಡು ಬಗೆಯದಾಗಿದೆ. ೧. ಭಕ್ತನು ಅತಿಮಾನುಷವಾದ ಅದ್ಭುತಶಕ್ತಿಗಳ ಸಿದ್ಧಿಯನ್ನು ಪಡೆಯುವನು. ೨. ಭಕ್ತನು ಮುಕ್ತಿ ಹೊಂದಿ ಅಲೌಕಿಕ ಆನಂದದಲ್ಲಿ ಲೀನವಾಗುವುದು. ಇವರ ಉತ್ತೇಜಿತ ಹಂತ ಪಂಚಮಕಾರದ (ಮಾಂಸ, ಮಧ್ಯ, ಮತ್ಸ್ಯ, ಮೈಥುನ, ಮುದ್ರಾ) ಅಂಶಗಳು, ಸಾಧನೆಯ ಹಂತಗಳೆಂದು ಇವರು ಗ್ರಹಿಸಿರಬೇಕು. ಆದರೆ ಈ ಐದನ್ನೂ ಸ್ವೀಕರಿಸಿದರೆಂದು ಹೇಳಲು ಸಾಧ್ಯವಿಲ್ಲ. ಮಧ್ಯವನ್ನು ಬಳಸಿದರು ಮೈಥುನವನ್ನು ವಿವರಿಸಿದರು.

"ಹ್ಯಾಗ ಬಿಡಲಮ್ಮಾ ಇವನ | ಸೊಗಸಿನ ಪ್ರಿಯನ
ಹ್ಯಾಗ ಬಣ್ಣಿಸಲಮ್ಮಾ ಇವನ| ಭೋಗದ ಕಲೆ ಬಲ್ಲವನ
ಅರಳ ಕಂಗಳ ಎಂದು ಕರೆಯುವವನ | ಮುಂಗುರುಳನು
ಬೆರಳಿನಿಂದ ತಿದ್ದುವವನ | ಹರಳಿನ ಮೂಗುತಿ
ತಂದು ಕೊಟ್ಟು | ಭಾರಿ ಸಂತೋಷ ಪಡುವವನ
ಹತ್ತಿರ ಬಂದು | ಸೆರಗ ಎಳೆವವನು
ಪ್ರೀತಿಯಿಂದ ಒತ್ತಿ ಪಿಡಿವವನ| ಮುತ್ತು ಕೊಟ್ಟು ನಗುವವನ"[೯]

ಮಾನವ ಸಂಬಂಧದ ಹಸಿವಿನಲ್ಲಿ ಭೋಗದ ಪ್ರಣಯದ ಹಸಿವು ಮುಖ್ಯವಾಗಿದೆ. ತತ್ವಪದಕಾರನು ರೂಪಿಸಿದ ಭೋಗವು ನಿಸರ್ಗ ಸಹಜತೆಯಲ್ಲಿ ಲೈಂಗಿಕತೆಯ ಸೂಕ್ಷ್ಮ ಅಂಶಗಳನ್ನು ಸೂತ್ರೀಕರಿಸಿದ್ದನ್ನು ಕಾಣಬಹುದು. ತತ್ವಪದಕಾರನ ದಾರ್ಶನಿಕ ನಿಯಮದ ಪ್ರಕಾರ ಇಂದ್ರಿಯ ಉನ್ಮತ್ತತೆ, ಮಾನಸಿಕ ಸ್ಥಿತಿಯ ತೀವ್ರತೆಯು ಅನುಭಾವದ ಸಂಗದಲ್ಲಿ ಎರಡಾಗಿದ್ದು, ಮುಂದೆ ಒಂದಾಗುವುದು. ಇಂಥ ಅನ್ವೇಷಿತ ಭಾವ ಮನಸ್ಥಿತಿಗೆ ಮೈಥನ ನಿಯಮವು ಉದಾಹರಣೆಯಾಗಿದೆ

ತತ್ವಪದಕಾರನ ಹಸಿವಿನ ಇನ್ನೊಂದು ಹಂತವು ಅನುಭಾವದ ನೆಲೆಗಾಗಿ ಲೌಕಿಕವನ್ನು ಗ್ರಹಿಸಲು ಆಧ್ಯಾತ್ಮಿಕ ವ್ಯವಸ್ಥೆಯನ್ನು ಈ ರೀತಿ ಬಳಸುತ್ತಾನೆ. ಹಾದರ ಮಾಡುವುದು, ಗಾಂಜಾ ಸೇದುವುದು, ಇವು ಅನುಭಾವದ ತಿಳುವಳಿಕೆಯ ಹಂತವಾಗಿದೆ. ಡಾ. ಅಮರೇಶ ನುಗುಡೋಣಿಯವರು ಹೇಳುವಂತೆ "ಲೌಕಿಕದ ವ್ಯಾಮೋಹವನ್ನು ಮರೆಯಲು ಸ್ವತಃ ಗುರುವೇ ಶಿಷ್ಯನಿಗೆ ಗಾಂಜಾ ಕೊಡುವ ಸಂಪ್ರದಾಯವಿದೆ. ಸಾಧನೆಯ ಹಾದಿ ಹಿಡಿಯಲು ಬೇಕಾಗುವ ಪರವಶಕ್ಕಾಗಿ ಇದು ಆರಂಭದಲ್ಲಿ ಅಗತ್ಯವೆಂಬುದು ನಿಜ.

ಆದರೆ ನಿಜವಾದ ಸಾಧಕನು, ತಮಗೆ ಬೇಕಾಗುವ ಪರವಶವನ್ನು ಧ್ಯಾನ, ಯೋಗದಿಂದ ದಕ್ಕಿಸಿ ಕೊಳ್ಳುತ್ತಾರೆ."[೫೦]

"ಸೇದೋ ಸೇದೋ ಗಾಂಜಿಯ| ಸಾಧು ನೀನಾಗೋ ಸೇದೋ
ಸೇದೋ ಸೇದೋ ಗಾಂಜಿ| ಆದಿ ಅಂತ್ಯವ ಭಾಗಿಸಿ
ಸಂಗಾ ಸುಸ್ಸಂಗಾ ನಿಸ್ಸಂಗಾ| ಜುಂಜುರಿಸಿತ್ತೋ ಸೇದೋ
ಓದಿವಾದಿ ಮಾಡಲಿ ಬ್ಯಾಡಾ| ಹೋಗುವ ಹಾದಿಯ ನೊಲತೋ
ನಾದ ಬಿಂದು ಖಳೆ ಬೇಧಿಸಿ| ಸಾಧು ಲೆಕ್ಕಿ ಸೇದೊ ಸೇದೊ"[೫೧]

ಭಕ್ತಿಯ ಎರಡನೇ ಹಂತದಲ್ಲಿ ಗಾಂಜಾವು ಮನದ ಸ್ವಪ್ನಾವಸ್ಥೆಯ ಚಿತ್ತದಿಂದ ಕಲ್ಪಿತವಾದದ್ದು. ಆದಿ, ಅಂತ್ಯವು ಭಾಗಿಸಿ ಎನ್ನುವಲ್ಲಿ ಗಾಂಜಾದ ನಿಶೆ ಹೊರಹೋಗದಂತೆ ತಡೆಯುವುದು. ಅಂತರಂಗದಲ್ಲಿ ಜಾಗೃತಾವಸ್ಥೆಯನ್ನು ಅಡಗಿಸಿಕೊಳ್ಳುವುದು. ಇದೇ ಮುಂದೆ ನಾದ, ಬಿಂದು, ಕಳೆಯಾಗುವುದು. ಆನಂದದ ತೂರ್ಯಾವಸ್ಥೆಯಾಗುವುದು. ಇಂಥ ಮನೋಭೂಮಿಕೆಯ ಭಿನ್ನ ರೂಪಗಳು ಅನುಭಾವ ಸ್ವರೂಪದ ಉದಾಹರಣೆಗಳಾಗಿವೆ. ಗಾಂಜಾದ ರೂಪಕವನ್ನು ಬಳಸುವಾಗ ತತ್ವಪದಕಾರರ ಮೂಲಭಾವ ಮನದಲ್ಲಿ ಮರೆಯಾಗುತ್ತದೆ.

ಗಾಂಜಾದ ರೂಪಕವು ಅನುಭವದ ಗ್ರಹಿಕೆಯಾಗಿ ಮುಂದುವರಿದು ಧಾರ್ಮಿಕ ಅಂತಃಸತ್ವದ ವಿಧಾನದಲ್ಲಿ ನೂತನ ಸ್ಥಾನವನ್ನು ತನ್ನದಾಗಿಸಿಕೊಳ್ಳುತ್ತದೆ. ಗಾಂಜಾ ಮತ್ತೇರಿಸುವ ಸರಕು. ಇದನ್ನು ಸೇವನೆ ಮಾಡುವ ಸಂದರ್ಭದಲ್ಲಿ ಮನುಷ್ಯ ಯಾವ ರೀತಿಯಾಗಿ ಆಲೋಚಿಸುವನೋ ಗಾಂಜಾ ಮತ್ತೇರಿದಂತೆ ಅದೇ ಆಲೋಚನೆಯನ್ನು ಗಟ್ಟಿಗೊಳಿಸುತ್ತದೆ. ಸಾಮಾನ್ಯವಾಗಿ ಇದರ ಸೇವನೆ ಮಾಡಿದರೆ ಭಕ್ತಿಯ ಕಡೆಗೆ ಹೆಚ್ಚು ಒಲವು ಮೂಡುತ್ತದೆ ಎಂಬುದು ಗಾಂಜಾ ವ್ಯಸನಿಗಳು ಹೇಳುತ್ತಾರೆ. ಹೀಗಾಗಿ ತತ್ವಪದಕಾರರಿಗೆ ಭಕ್ತಿಯ ಕಡೆಗೆ ಒಲವು ಮೂಡಿರಬಹುದು. ಇಂಥ ರೂಪಕಗಳೇ ಅನುಭಾವಗಳಾಗಿ ಕಾಣಿಸಿಕೊಳ್ಳುತ್ತವೆ. ಇವೆಲ್ಲವೂ ತತ್ವಶಾಸ್ತ್ರದಲ್ಲಿ ಜ್ಞಾನಾನುಸಂಧಾನವೆಂದು ಗುರುತಿಸಿಕೊಳ್ಳುತ್ತವೆ. ಒಬ್ಬ ತಾಯಿ ತನ್ನ ಮಗುವಿಗೆ ತಾನೆಂದು ಪರಿಭಾವಿಸುವಳೋ ಮಗುವು ತಾನೇ ತಾಯೊಳಗೆ ಐಕ್ಯವಾಗಿಬಿಡುವ ಹಂಬಲ ಹೊತ್ತಿರುತ್ತದೆ. ಇದನ್ನೇ ವಿಮರ್ಶಕರು ಅನುಭಾವವೆಂದು ಶಿಶುಕಂಡ ಕನಸೆಂದು ಹೇಳಿದ್ದು ಔಚಿತ್ಯಪೂರ್ಣವಾಗಿದೆ. ಹೀಗಾಗಿ ಅನುಭಾವದ ಹಂತವನ್ನು ಭಕ್ತಿ ಸಾಹಿತ್ಯದ ವ್ಯವಸ್ಥೆಯ ಒಡಲಲ್ಲಿ ತುಂಬಿ ಹರಿಯುವಂತೆ ಮಾಡಿದರು. ಪುರುಷ ಪ್ರಧಾನ ಜ್ಞಾನವನ್ನು ಬದಿಗಿಟ್ಟು ಮಾತೃಪ್ರಧಾನ ಭಾವನ್ನು ಸ್ವೀಕರಿಸಿದರು. ತತ್ವದ ಮೂಲಕ ತಾಯಿಯಾದರು ಪ್ರಣಯದ ಮೂಲಕ ಹೆಂಡತಿಯಾದರು ಮುಗ್ಧ ಭಕ್ತಿಯಿಂದ ಶಿಶುವಾದರು ಇವೆಲ್ಲಾ ಅನುಭಾವದ ಅರಿವಿನ ಹಂತದ ವ್ಯಾಪ್ತಿಗಳಾಗಿ ಪ್ರಕಟಗೊಳ್ಳುವುದು ಸ್ಪಷ್ಟವಾಗಿದೆ.

## ೪.೩. ಏಕವ್ಯಕ್ತಿ ಮತ್ತು ವಿಕೇಂದ್ರೀಕೃತ ಆಲೋಚನೆಗಳು

ತತ್ವಪದಕಾರರು ತಾವು ಕಂಡ ಅನುಭಾವೀ ಬದುಕನ್ನು ಮುನ್ನಡೆಸುವ ಮೂಲಕ ಹೊಸ ಸಂಸ್ಕೃತಿಯ ಬೆಳವಣಿಗೆಗೆ ಕಾರಣರಾದರು. ವ್ಯಕ್ತಿ ಮೂಲವಾದ ನಿರ್ದಿಷ್ಟ ಧರ್ಮ ಸಿದ್ಧಾಂತಗಳಿಂದ ದೂರ ಸರಿದು ಬಹುವಿಧವಾದ ಸಾಂಸ್ಕೃತಿಕ ಸಂವೇದನೆಗಳ ಸಶಕ್ತೀಕರಣಕ್ಕೆ ಪ್ರೇರಣೆ ಒದಗಿಸಿದರು. ಭೌತ ಮತ್ತು ಮಾನವ ಪ್ರಪಂಚಗಳ ವೈವಿಧ್ಯತೆ ಹಾಗೂ ವೈರುಧ್ಯತೆಗಳನ್ನು ಖಂಡವಾಗಿ ಗ್ರಹಿಸದೇ ಅಖಂಡವಾಗಿ ಗ್ರಹಿಸಿದರು. ತಮ್ಮ ಹಾಡುಗಳಲ್ಲಿ ರೈತರ, ಸ್ತ್ರೀಯರ, ಸಮಾಜದಲ್ಲಿ ಅವಮಾನಿತರಾದವರ, ಆಧುನೀಕರಣದ ಭರಾಟೆಯಲ್ಲಿ ಅವಿವೇಕಗಳಾಗುತ್ತಿರುವ ವ್ಯಂಗವನ್ನು ಗುರುತಿಸಿದರು. ಅವರ ಹಾಡುಗಳಲ್ಲಿ ಇಂಥ ವಿಸ್ತೃತ ನೆಲೆಗಳನ್ನು ಗುರುತಿಸಬಹುದು. ಇಂತಹ ವರ್ಗ ಜಾತಿಯ ಸಮಸ್ಯೆಗಳನ್ನು ಜನಸಾಮಾನ್ಯರ ಬದುಕಿನ ಮಿಡಿತಗಳನ್ನು ತತ್ವಪದಕಾರರಿಗಿಂತ ಮೊದಲೇ ಸರ್ವಜ್ಞ ವೇಮನರಂತಹ ಸಂತರು ತೆರೆದಿಡಲು ಪ್ರಯತ್ನಿಸಿದ್ದನ್ನು ಕಾಣಬಹುದು.

"ಕುಲಕರ್ಣಿ ಗೌಡರು ಊರ ಮುಂದಿನ ಹೊಲ
ಪಾಲಿಗೆ ಕೊಟ್ಟರೆ ಮಾಡಬಾರದು | ಮಾಡಿದ್ಯಾಕ
ಮಾಡುವಲ್ಲಿ ಮತ್ತೊಂದು ಹೇಳತೀನಿ | ಕಲಕಲ
ಬಾಯಿ ಮಾಡಬಾರದು | ಛಾವಡಿ ಏರಬಾರದು"[೫೨]

ಸ್ವಭಾವತಃ ಕಾಯಿಪಲ್ಲೆ ವ್ಯಾಪಾರಿಯಾದ ಕೂಡ್ಲೂರು ಬಸವಲಿಂಗಪ್ಪನ ಈ ಪದ ಸಹಜವಾಗಿ ರೈತನ ಸಮಸ್ಯೆಗಳು, ವ್ಯವಹಾರಿಕ ಸಂಬಂಧಗಳು, ಅವನ ಶೋಷಣೆ ಇವೆಲ್ಲ ಮೇಲ್ನೋಟಕ್ಕೆ ಭೌತಿಕ ವಿವರಗಳೆನಿಸುತ್ತವೆ. ಹೊಲ ಮಾಡುವ ರೈತ ವ್ಯಕ್ತಿಯಾದರೂ ಆತ ಕೃಷಿಗೈಯುವ ಹೊಲ ಊರನಾಳುವ ಪ್ರಭಾವಿ ವ್ಯಕ್ತಿಗಳದ್ದು. ಹಾಗಿದ್ದಾಗ ಆತನಿಗೆ ಸಹನೆ ಮತ್ತು ಸದ್ಬುದ್ಧಿಯಿದ್ದರೆ ಮಾತ್ರ ಕೃಷಿ ಫಲಗಳನ್ನ ಉಣ್ಣಬಲ್ಲ ಇಲ್ಲವಾದರೆ ನಿಷ್ಫಲ.

ಈ ಕಾಯವೆಂಬ ಊರಿನಲ್ಲಿ ಅಜ್ಞಾನ ಮತ್ತು ಅಹಂಕಾರ ಗುಣಗಳುಳ್ಳ ಗೌಡ ಮತ್ತು ಕುಲಕರ್ಣಿಯರು ವಾಸವಾಗಿದ್ದಾರೆ. ಭಕ್ತಸ್ಥಲವೆಂಬ ಈ ಹೊಲದ ಒಡೆಯರು ಅವರಾಗಿದ್ದರಿಂದ ಅವರ ಜೊತೆಗೆ ತಂಟೆಗೋಗದೆ ವಿನಯದಿಂದ ನಿನ್ನ ಕೆಲಸ ಮಾಡು. ಊರ ಮುಂದಿನ ಹೊಲದ ಪ್ರಧಾನರು ಅವರಾದ್ದರಿಂದ ತಂಟೆಕೋರರು ದಾಳಿ ಮಾಡಿ ನಿನ್ನನ್ನು ಅಪರಾಧಿಯನ್ನಾಗಿ ಮಾಡುವರು.

"ದೇವರ ಪುಣ್ಯದಿಂದ ಎಂಟ್ಹೆತ್ತು ಕಟ್ಟಿದರೆ|
ಹೆಚ್ಚಿನ ಕೋಣ ಕಟ್ಟಬಾರದು|"[೫೩]

ಅಷ್ಟಮದ ತುಂಬಿದ ಈ ದೇಹದಲ್ಲಿ ಅಜ್ಞಾನಿ ಭಾವದ ಒಂದು ಕೋಣವನ್ನು ಕಟ್ಟಿದರೆ ನಿನ್ನ ಮನವೇ ದಿಕ್ಕು ತಪ್ಪುವುದು.

"ತತ್ವಪದಕಾರರ ಇಂತಹ ಸಹಜ ನುಡಿಯಲ್ಲಿ ಯಾವ ಆಕ್ರೋಷಗಳಿಲ್ಲದ ಮನಕ್ಕೆ ತಗುಲುವಂತೆ ತತ್ವವನ್ನು ನಿರೂಪಿಸಿದ್ದಾರಷ್ಟೆ. ಆದರೂ ಅನೇಕ ಸಂದರ್ಭದಲ್ಲಿ ಆಕ್ರೋಷವನ್ನು ತೋರಿಸಿ ಅಷ್ಟೇ ನಿರ್ಭಿತಿಯಿಂದ ಯಾವ ಮುಜುಗರವಿಲ್ಲದೇ ಪದಗಳನ್ನು ಬಳಸಿ ಬಯ್ಯುತ್ತಲೇ ತಿಳಿ ಹೇಳಿದ್ದಾರೆ. ಹೀಗೆ ವ್ಯಕ್ತಪಡಿಸಲು ಅವರಿಗೆ ಅವರ ಅನುಭಾವ ಶಕ್ತಿಯೇ ಅಧಿಕಾರವನ್ನು ನೀಡಿದೆ. ಅನುಭಾವಿಗಳ ಸಾಧನೆಗೆ ಅವರ ಅನುಭಾವಕ್ಕೆ ಸಮಾಜ ತಲೆಬಾಗುತ್ತದೆ. ನಡೆ ನುಡಿ ಒಂದಾದ ಅವರ ವ್ಯಕ್ತಿತ್ವಕ್ಕೆ ದೈವ ಸ್ವರೂಪ ಬಂದಿರುತ್ತದೆ. ಈ ಗುಣದಿಂದಾಗಿ ಯಜಮಾನ್ಯತೆ ಅವರಿಗೆ ಪ್ರಾಪ್ತವಾಗಿ ಲೋಕದ ಯಜಮಾನನಂತಿರುತ್ತಾರೆ."[೫೪]

"ಸೊಕ್ಕು ಬಿಡು ಮುಕ್ಕಣ್ಣ ನೆನಿ| ಮುಕಳಿ ತುಂಬಿತೋ
ಎಲೋ| ಠಕ್ಕು ಮಾಡೆ ಯಮ ಡಕ್ಕೆ ಮುರಿವನಾಳೆ
ದಿಕ್ಕಿಲ್ಲರಾರೇಲೋ| ಯೋನಿ ಜನಕೆ ತಲೆಬಾಗಿ
ನಡೆಯದಿರೆ ಗೂಗಿಜನ್ಮ ಕೇಳೆಲೋ ಎಲೋ"[೫೫]

"ಸೊಕ್ಕುಬಿಡು ಮುಕ್ಕಣ್ಣ ನೆನಿ" ಎಂಬ ಸಲುಗೆಯಲ್ಲಿ ಕುಲಮದ, ಧನಮದ, ಯೌವ್ವನ ಮದವುಳ್ಳವನು ಈ ಜಗತ್ತನ್ನು ಅಹಂಕಾರದಿಂದಲೇ ಆಳಿಯುವನು. ಮರ್ಕಟ ತುಂಬಿದ ಅಂಥವನ ಮನಕ್ಕೆ ಸೂಕ್ಷ್ಮ ಚಿಕಿತ್ಸೆ ನೀಡಿದ್ದು ಇಲ್ಲಿ ಕಂಡುಬರುತ್ತದೆ. ಯೋಗಿ ಜನರಿಗೆ ಮರ್ಯಾದೆ ಕೊಡದಿದ್ದರೆ ಗೂಗಿ ಜನ್ಮವು ನಿನ್ನ ಬೆನ್ನಹತ್ತುವುದು. ಗೂಗಿ, ಸ್ಮಶಾನ, ಸಾವು, ಕತ್ತಲು ಇವೆಲ್ಲ ಅವರ ನೀತಿ ಬೋಧನೆಯ ಸಲಕರಣೆಗಳು. ನೀನು ಕಣ್ಣಿದ್ದು ಕುರುಡನಾಗುವ ಕತ್ತಲ ಶಾಪದಿಂದ ನರಳುವ ಎಂಬ ಸಂಗತಿಗಳು ಮನುಷ್ಯನ ಅಜ್ಞಾನದ ಅತಿರೇಖಗಳಾಗಿವೆ. ತನ್ನಲ್ಲಿ ಎಲ್ಲ ಸಾಮರ್ಥ್ಯಗಳಿದ್ದು ಅವನ್ನು ಗುಣಾತ್ಮಕವಾಗಿ ಅಭಿವೃದ್ಧಿಪಡಿಸಿಕೊಳ್ಳದೆ ಬದುಕನ್ನು ಹಾಳು ಮಾಡಿಕೊಳ್ಳುವ ಕ್ಷುಲ್ಲಕ ಜನರಿಗೆ ಹೇಳುತ್ತಾರೆ.

ತತ್ವಪದಕಾರ ಇದನ್ನು ಸಹಜವಾಗಿ ಹೇಳಿದರೂ ಆಧ್ಯಾತ್ಮಿಕ ನೆಲೆಯ ತಾತ್ವಿಕ ಗುಣಗಳು ಈ ಹಾಡಿಗಿವೆ. ಆದರೆ ಇವರ ಭಾಷೆಗೆ ದೃಷ್ಟಿಕೋನಕ್ಕೆ ಗ್ರಹಿಸುವ ಶಕ್ತಿಗೆ ಇರುವ ವೈಶಾಲ್ಯತೆ ವಿಕೇಂದ್ರಿಕರಣದ ಉತ್ಕಟ ತುಡಿತವಾಗಿದೆ. ನಿಂತಲ್ಲಿ ನಿಲ್ಲದ ನಿರ್ದಿಷ್ಟ ಕೋನವೊಂದರಿಂದ ಬದುಕನ್ನು ಗ್ರಹಿಸಿದ ಇವರ ಕ್ರಿಯಾಶೀಲ ನೆಲೆಯ ಒಳಗಡೆಯೋ ಸಾಮುದಾಯಿಕವಾದ ಬಹುಜನ ಉಪಯೋಗಿಯಾದ ಅಂತಃ ಸತ್ವಗಳಿವೆ.

ಇಂತಹ ವಿಕೇಂದ್ರೀಕೃತ ಮನಸ್ಸಿನ ಪ್ರಗತಿಪರ ಧೋರಣೆಗಳನ್ನು ತತ್ವಪದಕಾರರಲ್ಲಿ ದಟ್ಟವಾಗಿ ಕಾಣುತ್ತೇವೆ. ಸಮಾಜದ ಆರೋಗ್ಯದ ಜೊತೆಗೆ ಮನದ ಆರೋಗ್ಯ ಮತ್ತು ದೇಹದ ಆರೋಗ್ಯಕ್ಕೂ

ಪ್ರಾಶಸ್ತ್ಯ ನೀಡಿ ಆಯುರಾರೋಗ್ಯ ಸಿದ್ಧಿಗಾಗಿ ಶ್ರಮಿಸಿದರು. ಒಂದು ವಿಸ್ತಾರವಾದ ಸ್ವಚ್ಛಂದ ಬದುಕಿನ ರೂಪಿಕೆಗೆ ಹಂಬಲಿಸಿದರು.

"ಆಕಳು ಗಿಣ್ಣು | ಬಲು ಸವಿಯಣ್ಣಾ | ಉಣ್ಣೋ ಬಸವಣ್ಣಾ
ಆ ಆ ಉಣ್ಣೋ ಬಸವಣ್ಣಾ | ಕಾಶಿದ ಹಾಲು ಬೋನ
ಮೀಸಲು ಉಣ್ಣೋ ಬಸವಣ್ಣಾ | ಕಲಸನ್ನಾ ಸಾರು
ಮೇಲೆ ಮೊಸರು | ಮಜ್ಜಿಗೆ ನುಚ್ಚು ಎಲ್ಲಕೂ ಹೆಚ್ಚು
ಉಣ್ಣೋ ಬಸವಣ್ಣಾ ಆ ಆ sss"[೫೫]

ಮಂದಕಲ್ ಭೀಮಲಿಂಗಪ್ಪನು ವೃತ್ತಿಯಲ್ಲಿ ರೈತ. ಕೃಷಿ ಬದುಕಿನ ಜೊತೆಗೆ ದನ, ಕರುಗಳನ್ನು ಪೋಷಿಸುತ್ತಿದ್ದನು. ಆಕಳು, ಗಿಣ್ಣ, ಹಾಲು, ಮೊಸರು, ಅನ್ನ, ಮಜ್ಜಿಗೆ ಇವು ಎಲ್ಲವೂ ಉತ್ಪಾದನಾಶೀಲ ಸಂಸ್ಕೃತಿಯ ಪ್ರತೀಕಗಳಾಗಿವೆ. ಉತ್ಪಾದನೆ-ಉಪಭೋಗ ಹಾಗೆ ರೂಪ-ನಿರೂಪ-ಸ್ವರೂಪ ಹಾಗೆ ವ್ಯಕ್ತಿ-ಉತ್ಪಾದನೆ-ಸಮಾಜ ಹೀಗೆ ಒಂದು ನಿರಂತರ ಸೃಷ್ಟಿಶೀಲ ವಿಕಾಸಕ್ರಮವನ್ನು ತತ್ವಪದಕಾರರಲ್ಲಿ ಕಾಣುತ್ತೇವೆ. ವಸ್ತು ಫಲಿತಗೊಂಡು ಸಮಷ್ಟಿಗೆ ಉಪಯೋಗವಾಗುವ ಉಪಯೋಗ ಉತ್ಪಾದನೆಗೆ, ಸಾಧನೆಗೆ ದಾರಿಯಾಗುವ ಆ ಸಾಧನೆ ಸಾಮಾಜಿಕ ಕಳಕಳಿಗೆ ಭೋಜನವಾಗುವ ಒಂದು ಬಹುಪಯೋಗಿ ನೆಲೆಯನ್ನಿಲ್ಲಿ ಕಾಣುತ್ತೇವೆ.

ಸಹಜವಾಗಿಯೇ ತತ್ವಪದಕಾರರು ಸಮಾಜವನ್ನು ಪ್ರೀತಿಸಿದವರು. ಸಾಂಪ್ರದಾಯಿಕ ಮಡಿವಂತರ ವ್ಯವಸ್ಥೆಯನ್ನು ಸಮೀಪದಿಂದ ಕಂಡವರು. ಅಂಥ ವ್ಯವಸ್ಥೆಯನ್ನು ಸ್ವಾರ್ಥಪರವಾದ ಮನೋಧರ್ಮವನ್ನು ನಿರ್ಭಯವಾಗಿ ಖಂಡಿಸಿದರು. ಪರೋಪಕಾರದ ಹಾಗೂ ಸಮ ಸಂಸ್ಕೃತಿಯ ನೆಲೆಗಳನ್ನು ಹುರಿಗೊಳಿಸಲೆತ್ನಿಸಿದರು. ಬೇರು ಸಮೇತವಾಗಿ ಒಣಗಿದ ವ್ಯವಸ್ಥೆಗೆ ಹಸಿರ ಉಡಿಸಿದರು. ಬಸಿರ ತುಂಬಿಸಿದರು. ಮೈ-ಮನಸ್ಸನ್ನು ನಡೆ-ನುಡಿಗಳನ್ನು ಜಾಗೃತವಾಗಿಸಿದರು. "ಆತ್ಮದ ಅನುಭವ ತಾವು ತಿಳಿದಿಲ್ಲ| ನುಡಿದಂತೆ ತಾವು ಒಮ್ಮೆಯಾದರೂ ನಡೆಯಲೇ ಇಲ್ಲ." ಒಂದೆಡೆ ತತ್ವವಿದೆ ಇನ್ನೊಂದರಲ್ಲಿ ನೀತಿಯಿದೆ. ಇಂತಹ ಹಲವು ಮೌಲಿಕವಾದ ಮಾತುಗಳಿಂದ ತತ್ವಪದಕಾರರು ಪರಂಪರೆಯನ್ನು ಮುರಿದು ಕಟ್ಟುತ್ತಾ ಬಂದದ್ದನ್ನು ಗುರುತಿಸಬಹುದು.

"ವಕೀಲ ಬಂದನೆ ನೋಡು | ಪರಬ್ರಹ್ಮ ವಕೀಲ ಬಂದನೆ
ನೋಡು | ಅಖಿಲ ಬ್ರಹ್ಮಾಂಡ ಕಾಯ| ಕಿವ ತ್ರೀಸ ಕೀಲ
ಮಾಹಿತಿ ಮಾಡಿದ | ಕೊಡೋ ಧೀರೋಕೀಲ ಬಂದನೆ ನೋಡು
ಲೋಭ ಮೋಹವ | ಮತ್ಸರದ ಖಟ್ಲೆ ಬಗೆಹರಿಸುವವ"[೫೭]

ಇಲ್ಲಿ ಪರಬ್ರಹ್ಮ ಮತ್ತು ವಕೀಲನನ್ನು ಸಾಮಾಜಿಕ ಸಂದರ್ಭ ತಾತ್ವಿಕ ರೂಪಕವಾಗಿ ಗುರುತಿಸಲಾಗಿದೆ. ತತ್ವಪದಕಾರರು ವಕೀಲಿ ಎನ್ನುವುದು ಯಾರೇ ಒಬ್ಬರ ಪರವಾಗಿ ವಾದಿಸುವ ಪಾರ್ಶಿಕ ರೂಪದ್ದು. ಅದಕ್ಕೆ ಸುಳ್ಳು-ಸತ್ಯ, ನ್ಯಾಯ-ಅನ್ಯಾಯಗಳ ಗೋಜಿಗಿಂತ ತಾನು ಹಿಡದ ದಾರಿ ಗೆಲ್ಲಬೇಕೆನ್ನುವ ಏಕೀಕೃತ ಉದ್ದೇಶ ಮಾತ್ರ ಇರುತ್ತದೆ. ಅದಕ್ಕೆ ಸಾರ್ವತ್ರಿಕ ಗುಣ ಇರದು. ಆಧುನಿಕ ವ್ಯವಸ್ಥೆಯ ವಕೀಲನನ್ನು ವಿರೋಧಿಸುತ್ತಾನೆ. ಲೌಖಿಕ ಜ್ಞಾನಕ್ಕೆ ಸೀಮಿತನಾದ ವಕೀಲನಿಗೂ ಪಾರಮಾರ್ಥಪಥ ರೂಪಿಸಿದ ಬ್ರಹ್ಮನಿಗೂ ವ್ಯತ್ಯಾಸ ಒಡೆದು ತೋರುತ್ತದೆ. ಪರಬ್ರಹ್ಮ ವಕೀಲನೆಂದು ಹೇಳುವ ವ್ಯಂಗ್ಯವು ಏಕಮನದಿಂದ ಹುಟ್ಟುವ ಪ್ರಕ್ರಿಯೆಯಾಗಿದೆ. ಬ್ರಹ್ಮ ಸರ್ವಾಂತರ್ಯಾಮಿ ಆತನ ರೂಪವೇ ಬಹುಮುಖಿಯಾದದ್ದು. ಸಾರ್ವತ್ರಿಕ ಸ್ವರೂಪದ್ದು, ಬ್ರಹ್ಮಗಂಟೆ ವಿಶಾಲ ಧೋರಣೆಯ ತರ್ಕ ಮನುಷ್ಯನಿಗೂ ಬೇಕು ಎಂದು ಹೇಳುತ್ತಾರೆ.

"ಆಧುನಿಕರಲ್ಲದ ಆದರೆ ಆಧುನಿಕ ಕಾಲಘಟ್ಟದಲ್ಲಿ ಬದುಕಿ ಬಾಳಿದ ವಡಿಕೆ ತಾತಪ್ಪಯ್ಯನಂಥವರ ತತ್ವಪದಕಾರರ ಹಾಡುಗಳಲ್ಲಿ ಇಂಥ ಹಲವು ರೀತಿಯ ವಿಕೇಂದ್ರೀಕೃತ ಸಂವೇದನೆಗಳಿವೆ. ಬ್ರಿಟಿಷರ ಆಳ್ವಿಕೆಯಿಂದಾಗಿ ಸಮಾಜದಲ್ಲಿ ಹೋಟೆಲ್, ಕೋರ್ಟ್, ವಕೀಲ ಮುಂತಾದ ಹೊಸ ವ್ಯವಸ್ಥೆಗಳು ಕಾಣಿಸಿದ್ದು ತಿಳಿದುಬರುತ್ತದೆ. ಜೊತೆಗೆ ನಿಜಾಂ ಆಳ್ವಿಕೆಯಿಂದ ಮೊಘಲಾಯಿ ವ್ಯವಸ್ಥೆಯಲ್ಲಿ ಮುಲಜುಮ್ ಮುನ್ಸಿಫ್, ಶಿರಸ್ತೆದಾರ, ನಾಜುಮ್ ಇಂಥ ಅಧಿಕಾರ ಸ್ಥಾನಗಳು ಈಗಲೂ ರಾಯಚೂರು ಪರಿಸರದಲ್ಲಿ ಬಳಕೆಯಲ್ಲಿರುವುದನ್ನು ಕಾಣಬಹುದು. ಇವು ಸಾಂಪ್ರದಾಯಿಕ ಸಮಾಜದಲ್ಲಿ ಹುಟ್ಟು ಹಾಕುವ ಅನೇಕ ಸಮಸ್ಯೆಗಳನ್ನು ಅವುಗಳಿಂದಾಗುವ ಪರಿಣಾಮಗಳನ್ನು ಗಮನಿಸುತ್ತಲೇ ತತ್ವಪದಕಾರರು ತಮ್ಮ ಪ್ರತಿಕ್ರಿಯೆಗಳನ್ನು ವ್ಯಕ್ತಪಡಿಸಿದರೂ ಇದನ್ನು ಇವರೆಲ್ಲ ತಮ್ಮ ಅನುಭಾವದ ನೆಲೆಯಲ್ಲಿ ಗ್ರಹಿಸಿರುವುದೇ ಹೆಚ್ಚು."[೫೪]

ವಚನಕಾರರ ಕಾಲದಲ್ಲಿದ್ದಂತಹ ಸಂಘಟನಾಯುಕ್ತ ವ್ಯವಸ್ಥೆಯನ್ನು ನಿರಾಕರಿಸಿ ವ್ಯಕ್ತಿಗತ ಹೋರಾಟದ ಹಾದಿ ಹಿಡಿದವರು. ನಮ್ಮ ಪ್ರಾಚೀನ ಧರ್ಮಗಳ ಆಧ್ಯಾತ್ಮದ ಹಂಗನ್ನು ನಿರಾಕರಿಸಿ ಜೀವನಾನುಭವವೇ ಪ್ರಧಾನವೆಂಬ ಸ್ಪಷ್ಟತೆ ಇವರಿಗಿತ್ತು. ಮನುಷ್ಯ ಧರ್ಮವೆನ್ನುವುದು ಪುರುಷಾರ್ಥ ಸಾಧನೆಯಾಗಬೇಕಾಗಿದೆ. ನಮ್ಮ ಪ್ರಜ್ಞೆಗೆ ಗೋಚರವಾಗುವ ಸೂಕ್ಷ್ಮ ಧರ್ಮವನ್ನು ತತ್ವದಿಂದ ವಿಕಾಸಗೊಳಿಸಬೇಕಾಗಿದೆ. ವಚನಕಾರರನ್ನು ಭಕ್ತಿ ಮತ್ತು ಜ್ಞಾನದಿಂದ ಗ್ರಹಿಸಬಹುದು. ಆದರೆ ತತ್ವಪದಕಾರರು ಹಾಗಲ್ಲ. ಭಕ್ತಿಯ ಕಲ್ಪನೆಯನ್ನು ಕೊಡುತ್ತಾರೆ. ಆಧ್ಯಾತ್ಮ, ತತ್ವ, ನೀತಿ, ಲೋಕಜ್ಞಾನ, ಮನುಷ್ಯನ ಅವಸ್ಥೆಗಳ ನಿಷ್ಠೆ ಗಟ್ಟಿತನವನ್ನೂ ಬೇರೆ ಬೇರೆ ನೆಲೆಗಳಲ್ಲಿ ಹೇಳಲು ಪ್ರಾರಂಭಿಸುತ್ತಾರೆ. ಇಂತಹ ಭಿನ್ನ ನೆಲೆಯ ತತ್ವಪದಕಾರರು ಹಳೆಯ ವ್ಯವಸ್ಥೆಯ ಜೊತೆಗೆ ಮುಖಾಮುಖಿಯಾಗುತ್ತಾರೆ. ಈ ನಿಟ್ಟಿನಿಂದ ತತ್ವಪದಕಾರರು "ಸಂಘಟನಾತ್ಮಕವಾಗಿ ಶ್ರಮಿಸಿದವರಲ್ಲ. ಅವರದು ಏನಿದ್ದರೂ

ವ್ಯಕ್ತಿಗತ ಹೋರಾಟವಾಗಿತ್ತು."[೫] ತತ್ವಪದಕಾರರ ಗುರು, ಲಿಂಗ, ಜಂಗಮ ಕಲ್ಪನೆಗಳಾಗಲೀ ಬದುಕಿನ ಕ್ರಮಗಳಾಗಲೀ ಏಕಮುಖೀ ಹಾಗೂ ಒಂಟಿತನವನ್ನು ತೋರಿಸಿದರೂ ಅದು ಬದುಕಿನ ಬಹುವಿಧ ಸಂವೇದನೆಗಳೊಂದಿಗೆ ಒಂಟಿತನವನ್ನು ಮೀರಿದ ವಿಶ್ವಾಸಾತ್ಮಕ ಸ್ವಭಾವದ್ದಾಗಿತ್ತು. ತತ್ವಪದಕಾರರ ಜಾತಿಯ ಎಲ್ಲೆ ಮೀರಿ ಕಾಲದ ಕಟ್ಟು ಪಾಡುಗಳನ್ನು ಮುರಿದ ಸಂಚಲನ ಸ್ವಭಾವವೇ ಹರಿವ ನೀರಿನಂತೆ ಉರಿವ ಬೆಂಕಿಯಂತೆ ಬಹುಕೇಂದ್ರಿತ ಸ್ವರೂಪದ್ದಾಗಿತ್ತು ಎನ್ನುವುದು ಬಹಳ ವಿಶೇಷ.

## ೪.೪. ಆರೂಢ, ಅವಧೂತ, ಕೊಡೇಕಲ್‌ಗಳಂಥ ಭಿನ್ನ ಪರಂಪರೆ ಮತ್ತು ತತ್ವಪದಕಾರರು

ಆರೂಢರು, ಧರ್ಮದ ಸತ್ಯವನ್ನು ಅರಿಯಲು ಭಕ್ತಿ ಎನ್ನುವ ನಂಬಿಕೆಯ ಮೂಲಕ ವಿಮರ್ಶಿಸಿ ನೀತಿ ಎನ್ನುವ ಒರೆಗಲ್ಲಿನಿಂದ ಅದನ್ನು ಉಜ್ಜಿ ತೀಕ್ಷ್ಣಗೊಳಿಸಿದರು. ಇದರಿಂದಾಗಿ ಆರೂಢವು ಸತ್ಯವೆಂಬ ಚಿನ್ನದಲ್ಲಿ ಹುಟ್ಟಿ ಗಟ್ಟಿಗೊಂಡು ಅಪರಂಜಿಯಂತೆ ಬೆಳೆದು ಬಂತು. ತತ್ವಪದಕಾರರ ಬದುಕಿನಲ್ಲಿ ಕಂಡ ಅನುಭವ ಮತ್ತು ತಿಳುವಳಿಕೆಯಿಂದ ರೂಪುಗೊಂಡ ಆಧ್ಯಾತ್ಮಿಕ ಪರಿಧಿ ಆರೂಢವಾಗಿದೆ. ಆಧ್ಯಾತ್ಮದಲ್ಲಿ ಆರೂಢನೆಂದರೆ ತಾತ್ವಿಕವಾಗಿ ಮೇಲೆ ಏರಿದವನು. ಅಂದರೆ ಯೋಗದಲ್ಲಿ ಜೀವನ್ಮುಕ್ತನಾಗುವುದು. ಪ್ರಕೃತಿಯ ಬಂಧನದಿಂದ ಬಿಡುಗಡೆ ಬಯಸುವುದು. ಜ್ಞಾನವನ್ನು ಸಮರ್ಥವಾಗಿ ಯೋಗದ ಮೂಲಕ ದೇಹ ಪ್ರಧಾನ ಮೀಮಾಂಸೆಯೊಂದಿಗೆ ಅರಿತವನು ಆರೂಢನು. ಈ ಜಗತ್ತು ಮೋಡವಾಗಿ ಆಕಾಶದಲ್ಲಿ ತೋರಿ ಅಡಗುವಂತೆ ಆರೂಢತ್ವ ಬದುಕಿನಲ್ಲಿ ಅಡಗಿರುತ್ತದೆ. ಹಾಗೇ ಆರೂಢನು ಮೋಡದಂತೆ ಅವಿತುಕೊಳ್ಳುವನು. ಗುಹೆಯಲ್ಲಿ ಏಕಾಂಗಿಯಾಗಿ ಸಾಧನೆ ಮಾಡುವನು. ಇಂದ್ರಿಯ ವಿಗ್ರಹದ ಮೂಲಕ ಮನಸ್ಸನ್ನು ವಶಪಡಿಸಿಕೊಂಡವನು ಆರೂಢನು.

ವಾಸ್ತವವಾಗಿ ಆರೂಢತ್ವದ ಆಚರಣೆ ತುಂಬಾ ಕ್ಲಿಷ್ಟವಾದಂಥದು. ಲೌಕಿಕ ಅನುಭವದ ಮೂಲಕ ವ್ಯಾಖ್ಯಾನಿಸುವಾಗ ಎರಡು ತೆರನಾದ ಹಂತಗಳನ್ನು ಗುರುತಿಸಬಹುದು.

೧. ಅಧಿಕಾರಾರೂಢ, ಸಿಂಹಾಸನಾ ರೂಢ, ಅಶ್ವಾರೂಢ, ಜ್ಞಾನರೂಢ, ಸಿದ್ದಾರೂಢವೆಂಬ ಆರೂಢತ್ವದ ಪರಿಕಲ್ಪನೆಗಳು.

೨. ಜ್ಞಾನಾರೂಢ, ಅಶ್ವಾರೂಢ, ಸಿದ್ಧಾರೂಢ ಸಂಬಂಧಗಳು ಹಠಸಾಧನೆಯಲ್ಲಿ ಕಂಡುಬರುವ ಪಾರಮಾರ್ಥಿಕ ಸ್ಥಾನದ ಪ್ರಮುಖ ಸಂಬಂಧವಾಗಿದೆ. ಯೋಗಾರೂಢನೆಂದು ಕರೆಯಿಸಿಕೊಳ್ಳುವವನಿಗೆ ಗುರು ಕರುಣೆಯು ಪ್ರಮುಖವಾಗಿದ್ದು ದೇಹ, ಮನ, ಆಯುರಾರೋಗ್ಯ ಶುದ್ಧಿಗಾಗಿ ದೀರ್ಘಾಯು ಸಿದ್ಧಿಗಾಗಿ ಮಹತ್ವಕೊಡುತ್ತಾನೆ. ಆದ್ದರಿಂದ ಸಾವನ್ನು ಜಯಿಸಿದವನು ಸಿದ್ಧಾರೂಢ.

ನಿರುಪಯುಕ್ತ ಹಾಗೂ ಜೀವ ವಿರೋಧಿ ಧರ್ಮವನ್ನು ಬಿಟ್ಟವನು ತತ್ವಪದಕಾರನಾದ್ದರಿಂದ ಆರೂಢದ ಆಚರಣೆಯು ಇವನಿಗೆ ಬಹು ಸಮೀಪವಾಗುತ್ತದೆ. ತನ್ನ ಬೌದ್ಧಿಕ, ಮಾನಸಿಕ ಅಂತಃ

ಸ್ವತ್ವಗಳಿಂದ ರೂಪುಗೊಂಡ ಈತನ ಬದುಕು ಸರ್ವವೂ ಬ್ರಹ್ಮನೆಂಬ ಅನುಭವದಲ್ಲಿ ಅಡಗಿರುತ್ತದೆ. ತಾನಲ್ಲದೆ ಇನ್ನೊಂದಿಲ್ಲವೆನ್ನುವ ಅದ್ವಯ ಅನುಭವದಲ್ಲಿ ನೆಲೆನಿಂತವನು ಆರೂಢ. ನಿಜವಾದ ಆರೂಢನು ತನ್ನ ಸಾಧನೆಗೆ ದೇಹವನ್ನೇ ಪ್ರಧಾನವಾಗಿಟ್ಟುಕೊಳ್ಳುತ್ತಾನೆ.

ಈ ನಿಟ್ಟಿನಿಂದ ತತ್ವಪದಕಾರರು ಆರೂಢದ ಅಂತಃಸ್ಸತ್ವಗಳನ್ನು ಅಳವಡಿಸಿಕೊಂಡಿದ್ದರೆನಿಸುತ್ತದೆ. ಯೋಗ ಮಾರ್ಗದಲ್ಲಿ ದೇಹವನ್ನು ಹದಗೊಳಿಸಿ ಹಠಯೋಗವನ್ನು ಸಾಧಿಸಿಕೊಂಡವರು. ವಿಶೇಷವಾಗಿ ಖೇಮಣ್ಣನ ಹಾಡುಗಳಲ್ಲಿ ಹಠಯೋಗದ ವಿಚಾರವು ಸಾಕಷ್ಟು ಬರುತ್ತದೆ.

> "ನೀರುಯಿಲ್ಲದ ಭಾವಿಯೊಳಗೆ | ಬೇರುಯಿಲ್ಲದ
> ಮರದ ಮ್ಯಾಲೆ | ಮೋರೆಯಿಲ್ಲದ ಪಕ್ಷಿಯೊಂದು
> ಹಾರಿಭರಭರ ನೀರು ಕುಡಿಯುವುದೋ
> ಚುಕ್ಕೆವರ್ಣದ ಎರಡು ತತ್ತಿಯು | ಚೊಕ್ಕಟದಿ
> ನಿಕ್ಕೀಹ್ಯದೋ | ಲೆಕ್ಕವಿಲ್ಲದ ಚಿಕ್ಕಮರಿಗಳು
> ಕೆಕ್ಕರಿಸಿ ಸೊಕ್ಕಿತತ್ತ್ಯೇಳಿಹವೋ|"[೬೦]

ಘೂಲಚಿಂತಿಯ ಮಠದಲ್ಲಿ ಆಧ್ಯಾತ್ಮಿಕ ಚರ್ಚೆ ನಡೆಯುತ್ತಿರುವಾಗ ಗುರುಪತ್ನಿಯು ಖೇಮಣ್ಣನವರನ್ನು ಕುರಿತು ಖೇಮಣ್ಣ ನಿನಗೆ ಜ್ಞಾನದ ಅಹಂಕಾರ ಬಂದಿದೆ ಎಂದು ನುಡಿದಳು. ಆಗ ಖೇಮಣ್ಣನು ಬೌದ್ಧಿಕ ಮತ್ತು ಮಾನಸಿಕವಾಗಿ ವಿಚಲಿತನಾಗುತ್ತಾನೆ. ಇಂಥ ಸಮಯದಲ್ಲಿ ಯೋಗದ ಅರ್ಥಾನ್ವೇಷಣೆಯಲ್ಲಿ ತೊಡಗುತ್ತಾರೆ. ನೀರಿಲ್ಲದ ದೇಹದಲ್ಲಿ ಯೋಗ ಸಾಧನೆಗೆ ತೊಡಗಿದಾಗ ಜ್ಞಾನದ ಪಕ್ಷಿಯು ಬಂದು ನೀರು ಕುಡಿಯುತ್ತದೆ. ಲೆಕ್ಕವಿಲ್ಲದ ಚಿಕ್ಕಮರಿಗಳು ಕೆಕ್ಕರಿಸಿ ಸೊಕ್ಕಿನಿಂದ ಎಂದಾಗ ದೇಹದಲ್ಲಿಯ ಅಷ್ಟಮಗಳು ಕೆಕ್ಕರಿಸಿ ನೋಡುತ್ತಿವೆ ಎಂಬ ವಿಚಾರವನ್ನು ತತ್ವಪದಕಾರ ಯೋಗದ ಭಾಷೆ ತಿಳಿಯಪಡಿಸುತ್ತದೆ.

> "ಬೆಲಿಯಿಲ್ಲದ ರತ್ನ ಬಾಯಿಲಿಡಿದು
> ಬೈಲೊಳು ಇರಿವುದೂ | ಚಲನವಿಲ್ಲದ
> ಚಂದ್ರಮಂಡಲದಾಟಿ | ನಡೆದಾಡುತಿಹರೋ"[೬೧]

ಬಹುಪಾಲು ತತ್ವಪದಕಾರರು ಚಂದ್ರಮಂಡಲ ಮತ್ತು ಸೂರ್ಯಮಂಡಲದ ಉದಾಹರಣೆಯನ್ನು ಭಿನ್ನ ಅರ್ಥಗಳೊಂದಿಗೆ ಪ್ರತಿಪಾದಿಸುವುದು ಕುತೂಹಲಕರವಾಗಿದೆ. "ಯೋಗಶಾಸ್ತ್ರದ ಪ್ರಕಾರ ಸೂರ್ಯನೆಂದರೆ ಪ್ರಾಣವಾಯು, ಚಂದ್ರನೆಂದರೆ ಅಪಾನವಾಯು, ಇವೆರಡರ ಯೋಗ ಅರ್ಥಾತ್ ಪ್ರಾಣಾಯಾಮದಿಂದ ವಾಯುನಿರೋಧ ಮಾಡುವುದೇ ಹಠಯೋಗ. ಮತ್ತೊಂದು ವ್ಯಾಖ್ಯಾನದ ಪ್ರಕಾರ ಸೂರ್ಯನೆಂದರೆ ಇಡಾನಾಡಿ, ಚಂದ್ರನೇ ಪಿಂಗಳನಾಡಿ ಈ ಇಡಾ ಮತ್ತು ಪಿಂಗಳ ನಾಡಿಯನ್ನು

ನಿರೋಧಿಸಿ ಸುಷುಮ್ನ ಮಾರ್ಗದಿಂದ ಪ್ರಾಣವಾಯುವನ್ನು ಸಂಚಾರಿತಗೊಳಿಸುವುದೇ ಹಠಯೋಗ."[೬೨] ಇದರಿಂದ ಹಠಾತ್ತನೆ ಸಿದ್ಧಿದೊರೆಯುವುದು ಎಂಬ ನಂಬಿಕೆ ಈ ಮಾರ್ಗಾನುಯಾಯಿಗಳಲ್ಲಿ ಕಂಡುಬರುತ್ತದೆ.

ಇಂತಹ ಯೋಗವು ಮನಸ್ಥೈರ್ಯವನ್ನು ಹೆಚ್ಚಿಸುವುದರೊಂದಿಗೆ ಕಾಯವನ್ನು ಬಲಿಷ್ಟಗೊಳಿಸುತ್ತದೆ ಎಂಬುದು ವೈಜ್ಞಾನಿಕ ಸತ್ಯವಾಗಿದೆ. ತತ್ವಪದಕಾರರಿಗೆ ಸದೃಢ ದೇಹ ಮತ್ತು ಸದೃಢ ಮನಸ್ಸಿನ ಅವಶ್ಯಕತೆಯಿದೆ. ಈ ಹಿನ್ನೆಲೆಯಲ್ಲಿ ಗಮನಿಸಿದಾಗ ನಾಥಪಂಥದ ಪ್ರಭಾವವಿರಲೇಬೇಕು. ಡಾ.ಬಸವಲಿಂಗ ಸೊಪ್ಪಿಮಠ ಹೇಳುವಂತೆ "ಆರೂಢ ಒಂದು ಮಾರ್ಗವೇ ವಿನಃ ಧರ್ಮವಲ್ಲ. ನಾಥಪಂಥದ ಹಾಗೆ ಇದೂ ಒಂದು ಮಾರ್ಗವೇ ಆಗಿ ಬೆಳೆದಿದೆ."[೬೩]

ಆದರೆ ತತ್ವಪುದಕಾರರ ಯೋಗದ ಹಾಡುಗಳನ್ನು ಕಂಡಾಗ ನಾಥಪಂಥಕ್ಕೆ ಹತ್ತಿರವಾಗುವಂಥೆ ತಮ್ಮ ಹಾಡುಗಳಲ್ಲಿ ಹಠಯೋಗದ ವಿವರಣೆ ಕೊಡುತ್ತಾರೆ. ಆದರೂ ಇವರಿಗೆ ನಾಥರೆನ್ನುವುದಿಲ್ಲ ಅವಧೂತರೆಂದು ಕರೆಯುವುದಿಲ್ಲ. ಆರೂಢರೆಂದು ಒಪ್ಪಿಕೊಳ್ಳುವುದಿಲ್ಲ. ಕಾರಣ ತತ್ವಪದಕಾರರ ಬದುಕನ್ನು ಗ್ರಹಿಸಿದಾಗ ಧರ್ಮತೀತ ಹಾಗೂ ತತ್ವತೀತವಾಗಿ ನಮಗೆ ಸಲ್ಲುತ್ತಾರೆ. ಆರೂಢ, ಅವಧೂತ ನಾಥಪಂಥದಂಥ ಆತ್ಮನೆಲೆಯ ಹಲವು ವಿಧದ ತಾತ್ವಿಕತೆಯನ್ನು ಗರ್ಭೀಕರಿಸಿಕೊಂಡು ಸಾಗುತ್ತಾರೆ.

"ಹಜಾಮರು ನಾವು ಹಜಾಮರು | ಅಜ ಅರಿ ಸುರರೆಲ್ಲಾ
ದೃಷ್ಟಿಯಿಟ್ಟು ನೋಡುವಂಥಾ | ಜ್ಞಾನವೆಂಬ ಕತ್ತಿಯನ್ನು
ವಿರತಿ ಎಂಬ ಪಾಣಿ ಹಿಡಿದು | ಏರಿ ಬರುವ ದೈತ್ಯರನ್ನು
ಮುರಿದು ಹಾಕುವಂಥಾ | ಎಂಟು ಮಂದಿಯ ಕಿವಿಯ
ಹಿಂಡಿ | ಐದು ಮಂದಿ ಮಂಡಿ ತೆಗೆದು | ಬಂಟರಾಗಿ
ನಾವು ಒಂಟಿಯಾಗಿ ನಿಲ್ಲುವಂಥಾ"[೬೪]

ಮೇಲ್ನೋಟಕ್ಕೆ ಹಜಾಮರು ನಾವೆಂಬ ಅಸ್ಪೃಶ್ಯತೆಯನ್ನು ಮುಂದುಮಾಡುತ್ತಾನೆ. ಯೋಗ ಪ್ರಜ್ಞೆಯ ಸೂರ್ಯನ ಬೆಳಕು ಮನದಲ್ಲಿ ಪ್ರಜ್ವಲವಾದಾದಗ ಈ ದೇಹಕ್ಕೆ ಗ್ರಹಣವಿಡಿದಾಗ ಅಷ್ಟಾಂಗ ಯೋಗದಿಂದ ಈ ದೇಹವನ್ನು ನಿಯಂತ್ರಿಸಬಹುದು. ಪಂಚಕ್ಲೇಷಗಳನ್ನು ಕಾಯುವ ಬಂಟರಾಗಿ ಗೆಲ್ಲ ಬಹುದು.

ಇವರ ಆಧ್ಯಾತ್ಮದ ಕ್ರಿಯಾಶೀಲತೆಯನ್ನು ಗಮನಿಸಿದಾಗ ಯೋಗ ಅನುಭವದ ವಿಚಾರಗಳನ್ನು ಮನಮುಟ್ಟುವಂತೆ ಅಭಿವ್ಯಕ್ತಿಸಿದರೆಂಬುದನ್ನು ಅಲ್ಲಗಳೆಯಲಾಗುವುದಿಲ್ಲ. ಈ ಹಿನ್ನೆಲೆಯಲ್ಲಿ ತತ್ವಪದಕಾರರ ಯೋಗದ ವಿಷಯವನ್ನು ಹೀಗೆ ಗ್ರಹಿಸಲು ಸಾಧ್ಯ. ವಚನಕಾರರಾದಂಥ ಅಲ್ಲಮ, ಸಿದ್ದರಾಮ, ಅಜಗಣ್ಣರು ಆರೂಢರೆ. ಶಿವಭಕ್ತನಾದ ಅಜಗಣ್ಣನು ಆರೂಢವನ್ನು ಸ್ವೀಕರಿಸಿದ ಘಟನೆಯು "ಒಂದು

ದಿನ ರಾತ್ರಿ ಅಜಗಣ್ಣ ಹೊಲದಲ್ಲಿರುವಾಗ ಒಂದು ದಿವ್ಯ ದರ್ಶನವನ್ನು ಕಂಡನು. ಸರ್ಪವೊಂದು ತನ್ನ ಫಣಾಫಣೆಯನ್ನು ನೆಲದ ಮೇಲಿರಿಸಿ ಅದರ ಬೆಳಕಿನಲ್ಲಿ ಆಹಾರ ಹುಡುಕಲು ಹೋದಂತೆಯೂ ತನ್ನ ಶಿವಮಂತ್ರೋಚ್ಚರ ಸ್ವರವನ್ನು ಕೇಳಿ ಮುನ್ನಿಸಿದಂತೆ ಹೆಡೆಯಲ್ಲಿ ಫಣಿರತ್ನವನ್ನು ಹುದುಗಿಸಿಕೊಂಡು ಹರಿದು ಮಾಯವಾದಂತೆಯೂ ತೋರಿತು. ಈ ದೃಶ್ಯದಿಂದ ಅಜಗಣ್ಣನ ಮನಸ್ಸಿನ ಮಾರ್ಗವೇ ಬದಲಾಯಿತು."[೬೫]

ಆತ್ಮವಾದಿಗಳ ಇಂಥ ಸಿದ್ಧಿಗಳನ್ನು ಪರಂಪರಾಗತವಾಗಿ ಕಂಡುಬರುವ ಪ್ರಯೋಗಗಳನ್ನು ತತ್ವಪದಕಾರರು ತಮ್ಮ ಹಾಡುಗಳಲ್ಲಿ ಹಾಡಿದರು. ಇವರ ಪೂಜಾರಹಸ್ಯ ಹಾಗೂ ಸಾಧನಾ ಪಥಗಳು ಗುಪ್ತವಾಗಿದ್ದು ಬಹಿರಂಗದ ಪೂಜೆಗಿಂತ ಅಂತರಂಗದ ಸಾಧನೆಗೆ ತಮ್ಮನ್ನು ಅರ್ಪಿಸಿಕೊಂಡದ್ದನ್ನು ನೋಡಬಹುದು. ಹಾಡುಗಳಲ್ಲಿ ಅಂಡದೊಳು ಪಿಂಡಾಂಡವು, ಪಿಂಡಾಂಡದೊಳು ಬ್ರಹ್ಮಾಂಡವು, ಕುಂಡಲಿನಿಯ ಕುದುರೆ ಹಿಂದೆ ಎಂಬಂತಹ ಪದಗಳು ಸಿಗುತ್ತವೆ. ಇದನ್ನು ಆದಿ ಅಮಾತ್ಯಪ್ಪನ ಹಾಡುಗಳಲ್ಲಿ ಗುರುತಿಸಬಹುದಾಗಿದೆ.

"ಮಾತನಾಡೋ ಏ ಮಹಾದೇವ | ಆರು ಸ್ಥಳದಲ್ಲಿ
ರುವಂಥಾ | ಆರು ಅಕ್ಷರಕೆ ಮೀರಿದಂಥಾ
ಆರೂಢಾಚಾರ ಮಾಡುವಂಥಾ | ಗೆಲಿಯೋ ಎನ್ನಯ
ಪಂಥ | ಪಂಚಾಕ್ಷರಕೆ ಮೇಲಾದಂಥ | ಪಂಚಭೂತ
ಗಳಳಿದಂಥಾ | ಭಕ್ತರಿಗೆ ಪಾವನ ಮಾಡುವಂಥಾ"[೬೬]

ಆತ್ಮಲಿಂಗದ ಅರಿವಿನ ಯೋಗಿಯಾಗಿ ಮನದಲ್ಲಿ ಪೂಜೆ ಮಂತ್ರ, ಧ್ಯಾನ, ಜಪ, ತಪಗಳನ್ನು ಪೂಜೆಯೊಂದಿಗೆ ಮಾಡುವನು. ಶರಣ ಧರ್ಮದ ನಮ್ರ ತಿಳುವಳಿಕೆಯನ್ನು ತ್ಯಜಿಸಿ ಮಹಾದೇವನೇ ಗುರುವೆಂದು ಹೇಳುತ್ತಾನೆ. ಪರಂಪರೆಯ ಅನುಕರಣೆಯನ್ನು ಸಾಂಕೇತಿಕ ಭಾಷೆಯಲ್ಲಿ ವಿಸ್ತಾರಗೊಳಿಸುತ್ತಾನೆ. ಶಿಷ್ಟರ ಶಾಸ್ತ್ರೀಯ ಆರೂಢವನ್ನು ಬಯಸದೇ ಜನಪದ ನಿವೇದಕನಂತೆ ಒಪ್ಪಿಕೊಳ್ಳುತ್ತಾನೆ. ಆದ್ದರಿಂದ ಇವನಿಗೆ ಆಧ್ಯಾತ್ಮದ ಭಾಷೆಯಲ್ಲಿ ಸಗುಣಾರೂಢನೆಂಧು ಹೇಳುವುದು ಅಷ್ಟೇ ಗಮನಾರ್ಹವಾಗಿದೆ.

ತತ್ವಪದಕಾರನ ಮನದಿಂದ ಉಗಮಗೊಂಡ ಆರೂಢನು ದೈವಕ್ಕೆ ಸಮವಾದ ವ್ಯಕ್ತಿಯೆಂದು ತತ್ವದ ರೂಪಕಗಳಿಂದ ಕಾಣುತ್ತೇವೆ. ಏಕೆಂದರೆ ಗೋರಕ್ಷ ಅಲ್ಲಮಪ್ರಭುವಿನ ಸಂವಾದದಿಂದ ಕಂಡುಕೊಂಡ ಸತ್ಯವು ಪರಂಪರೆಯ ಅರ್ಥವನ್ನು ಒಂದು ಕಡೆ ದಾಖಲಿಸುತ್ತದೆ. ನಾಥರ ಶಿಥಿಲಗೊಂಡ ವ್ಯವಸ್ಥೆಯನ್ನು ಇವರು ಚೈತನ್ಯಾತ್ಮಕವಾಗಿ ಹಾಡುಗಳ ಮೂಲಕ ಕಟ್ಟಿಕೊಡುತ್ತಾರೆ. ಶಿಷ್ಟರ ಗುರುಗಳಿಂದ ರೂಪುಗೊಂಡ ಅಂದಿನ ಧ್ಯಾನಮಾರ್ಗವು ಯೋಗಮಾರ್ಗವಾಗಿ ಪರಿವರ್ತಿತವಾಗಿದ್ದನ್ನು ನೆನಪಿಸಬಹುದು. ಏಕೆಂದರೆ ನಾಥರ ಸಾಂಸ್ಥಿಕ ಆರೂಢತತ್ವಕ್ಕೂ ತತ್ವಪದಕಾರರು ಹುಟ್ಟುಹಾಕಿದ ಚಾರಣ ಧರ್ಮಕ್ಕೂ

ವ್ಯತ್ಯಾಸ ಒಡೆದು ತೋರುತ್ತದೆ. ತತ್ವಪದಕಾರನ ಆರೂಢ ಧರ್ಮ ಯಾವುದೆಂದು ನೆನಪಿಸಿಕೊಂಡಾಗ ಶಿಶುನಾಳ ಶರೀಫ್ ಮತ್ತು ಕಡಕೋಳ ಮಡಿವಾಳಪ್ಪನವರ ವ್ಯಕ್ತಿತ್ವದ ಆದರ್ಶಗಳು ತೃತೀಯ ಸ್ಥಾನದ ನಂಬಿಕೆಗಳಾಗುತ್ತವೆ.

> "ಆಧಾರ ಚಕ್ರದೊಳು ನಾಲ್ಕು ದಳದಕ್ಷರ | ಕಮಲಾನಕಾರ
> ಪ್ರಣಮೂ ಆಚಾರಲಿಂಗ ಬೋದಿಸಿದಾ | ಸ್ವಾದಿಷ್ಟ ಚಕ್ರದೊಳು
> ಆರು ದಳದಕ್ಷರ | ಕಮಲಾಮಾಕಾರ ಪ್ರಣಮೂ ಗುರುಲಿಂಗ
> ಬೋಧಿಸಿದಾ | ಮಣಿಪೂರ ಚಕ್ರದೊಳು ಹತ್ತು ದಳದಕ್ಷರ |
> ಕಮಲಾ ಪ್ರಣಮೂ ಶಿವಲಿಂಗ ಭೋದಿಸಿದಾ"[೬೨]

ಕಮಲ ಕೆಸರಿನಲ್ಲಿ ಹುಟ್ಟಿ ಪರಶಿವನ ಪ್ರೀತಿಗೆ ಪಾತ್ರವಾದ ಪುಷ್ಪವೆಂಬುದು ತಿಳಿದ ವಿಷಯ. ತತ್ವಪದಕಾರರು ಕಮಲದ ಸಾಂಕೇತಿಕ ಪದವನ್ನು ಹೀಗೆ ಗ್ರಹಿಸಿದ್ದಾರೆ. ಈ ದೇಹವೆಂಬ ಹೊಲಸಿನಲ್ಲಿ ಅರಳಿದ ಕಮಲವು ಪಿಂಡಾಂಡದಲ್ಲಿ ಅಷ್ಟದಳ ಕಮಲವಾಗಿದೆ. ಇದು ಹೃದಯದಲ್ಲಿರುತ್ತದೆ. ಇದನ್ನೇ ಆತ್ಮಲಿಂಗವೆನ್ನುವರು. ಅಷ್ಟದಳ ಕಮಲವೆನ್ನುವರು. ಈ ಎಂಟು ದಳಗಳು ಅಧೋಮುಖವಾಗಿ ಎಂಟು ದಿಕ್ಕಿನತ್ತ ಕುಡಿ ಚಾಚಿರುತ್ತವೆ. ಇಂಥ ಕಮಲವು ನಮ್ಮ ಹೃದಯದಲ್ಲಿದ್ದು, ಈ ದಳಗಳು ಹೃದಯದಲ್ಲಿ ಪಲ್ಲಟವಾಗುತ್ತಿರುತ್ತವೆ. ಒಂದೊಂದು ದಳವು ಆತ್ಮದ ಸ್ಥಾನಕ್ಕೆ ಬಂದಂತೆಲ್ಲಾ ಮನುಷ್ಯನ ಮನಸ್ಸಿನ ಸ್ವಭಾವಗಳು ಪಲ್ಲಟವಾಗುತ್ತಿರುತ್ತವೆ. ಇವು ಕ್ರಮವಾಗಿ ಭಕ್ತಿ, ಹಸಿವು, ಕ್ರೋಧ, ದ್ವೇಷ, ನಿದ್ರೆ, ಗಮನ, ಧರ್ಮ, ಶೀಲಗಳೆಂಬ ಒಳನೋಟಗಳನ್ನು ಪ್ರತಿಬಿಂಬಿಸುತ್ತವೆ.

ಈ ವಿವರಗಳನ್ನು ಗಮನಿಸಿದಾಗ ತತ್ವಪದಕಾರರು ಬಹು ಎಚ್ಚರಿಕೆಯಿಂದ ಸಾಧನೆ ಮಾಡಿದ ಅಂಶ ಪ್ರಕಟವಾಗುತ್ತದೆ. ಏಕೆಂದರೆ ತಾತಪ್ಪಯ್ಯ ವಡಿಕೆ ಗ್ರಾಮದ ಮಹಾಲಕ್ಷ್ಮಿ ದೇವಿಯ ಆರಾಧಕನಾಗಿ ತಿರುಪನ ಗುಡ್ಡ ಡಬ್ಬಗಳ್ಳಿ ಮತ್ತು ಕೇದಿಗೆ ಬನದಲ್ಲಿದ್ದು ಅಲ್ಲಿಯೇ ಹನ್ನೆರಡು ವರ್ಷ ದಿಗಂಬರರಾಗಿ ಕಠಿಣ ತಪಸ್ಸು ಮಾಡಿದರು. ದೇವಿಯು ಪ್ರತ್ಯಕ್ಷಳಾಗಿ ನೀನು ನುಡಿದದ್ದು ಮಂತ್ರವಾಗಲಿ, ನಡೆದದ್ದು ದಾರಿಯಾಗಲೆಂದು ಆಶೀರ್ವದಿಸಿದಳು. ಇಂತಹ ಸನ್ನಿವೇಶಗಳು ಆರೂಢರ ವ್ಯಕ್ತಿತ್ವದ ಕಟ್ಟಡಕ್ಕೆ ದೊರೆತ ಮನ್ನಣೆಯೆಂದು ಹೇಳಬಹುದು. ಆದ್ದರಿಂದ ತತ್ವಪದಕಾರರ ಯೋಗದ ಘಟನೆಗಳು ಗಮನಸೆಳೆಯುತ್ತವೆ. ಒಂದು ನೆಲೆಯಿಂದ ತತ್ವಪದಕಾರರು ನಿಜಗುಣ ಶಿವಯೋಗಿಗಳಂತಹ ಶಿಷ್ಟರ ಯೋಗ ಮಾರ್ಗದಲ್ಲಿ ನಡೆಯಲು ಪ್ರಯತ್ನಿಸುತ್ತಾರೆ. ಕಾರಣ ಇವರಿಗೆ ತತ್ವಗಳ ಜೊತೆಗಿದ್ದ ಪ್ರೀತಿ ಮೌಖಿಕ ಸಿದ್ಧಾಂತಗಳ ಹವ್ಯಾಸ ಕಾರಣವಾಗಿರಬೇಕೆಂದು ಸೂಕ್ಷ್ಮವಾಗಿ ಅರಿವಾಗುತ್ತದೆ.

ತತ್ವಪದಕಾರರ ಮೂಲಬೇರು ಆ ನೆಲದ ಸಂಸ್ಕೃತಿಯಾಗಿದೆ. ಆ ನೆಲೆದ ಭಾಷೆಯಾಗಿದೆ. ಅವರು ಯೋಗದ ಮೂಲಕ ಹಾಡಿದರೂ ಕತೆ ಹೇಳಿದಂತಿರುತ್ತದೆ.

“ಬಾಳೆಯ ಬನದೊಳು| ಫಣ್ ಫಣ್ ನಾದವ
ಕೇಳುವುದು| ಸಹಸ್ರ ಕಮಲದೊಳು ಸಾರಿ
ಕೂಗುವುದು ಶರಣರಿಗೆ| ಮರಣವು ಇಲ್ಲಿಲ್ಲ
ಎನುತಲಿ|[೬೮]

‘ಶರಣರಿಗೆ ಮರಣವೇ ಇಲ್ಲ ಎಂದೆನುತಲಿ’ ಎಂಬ ಅರ್ಥ ಸಾವನ್ನು ಜೈಸಿದವನು. ಒಂದರ್ಥದಲ್ಲಿ ಶರಣರ ಬದುಕು ಜನಪದರ ಒಡಲಿನಿಂದ ಉದಯಿಸಿದ್ದು ಸರ್ವರಿಗೂ ಯೋಗದ ಅರಿವಾಗಲಿ ಎಂಬಂತಹ ವಿಚಾರವನ್ನು ತಿಳಿಸುತ್ತಾನೆ. ತನ್ನ ನಿಜಸ್ವರೂಪವನ್ನು ತೋರಿಸಲು ಹಠಯೋಗದ ಮೂಲಕ ದೇಹ ಮತ್ತು ಮನಕ್ಕೆ ಆಯುರಾರೋಗ್ಯ ವೃದ್ಧಿಸಲಿಯೆಂದು ಪ್ರಾರ್ಥಿಸುತ್ತಾನೆ.

ತತ್ವಪದಕಾರರು ವಿಶೇಷವಾಗಿ ಗಮನ ಸೆಳೆಯಲು ಕಾರಣ ಸಂಸಾರದ ಹೇಯತೆಯನ್ನು ಪ್ರಧಾನವಾಗಿಸಿಕೊಳ್ಳದೇ ಬದುಕಿನಲ್ಲಿದ್ದೇ ಯೋಗವನ್ನು ಪ್ರತಿಪಾದಿಸಿದರು. ಅವರಿಗೆ ಯೋಗ ಒಂದು ಜೀವನ ವಿಧಾನವಾಗಿತ್ತು. ಕಾರಣ ಬದುಕಿನ ಸತ್ಯವು ಆಧ್ಯಾತ್ಮದ ರೂಪದಲ್ಲಿ ಹುರಿಗೊಳಿಸಿಕೊಂಡರು.

ಗೂಗಲ್ಲು ಪರಪ್ಪಯ್ಯ ಬೆಂಡಬೆಂಬಳಿಯಿಂದ ಗೂಗಲ್ಲಿಗೆ ಪ್ರಭುವನ್ನು ಕಾಣಲು ನದಿದಾಟ ಬೇಕಾಗಿತ್ತು. ನದಿ ದಡದ ಮೇಲೆ ಅಂಬಿಗರಿಲ್ಲದ ಕಾರಣ ಹೆಗಲ ಮೇಲಿದ್ದ ಕಂಬಳಿಯನ್ನೇ ನೀರಿನ ಮೇಲೆ ಹಾಸಿ ಅದರ ಮೇಲೆ ಕುಳಿತು ಪ್ರಭುವಿನ ದರುಶನಕ್ಕೆ ಬರುತ್ತಿದ್ದನಂತೆ. ಗೊಬ್ಬೂರು ಮಾರ್ತಾಂಡಪ್ಪನು ಗೋಡೆ ಕಟ್ಟುವ ಕಾಯಕದವ. ಈತ ಗೋಡೆಯ ಮೇಲೆಯೇ ಯೋಗ ಮಾಡುತ್ತಿದ್ದನಂತೆ ಇವರ ದೇಹ ಆಕಾಶದಲ್ಲಿ ಪಕ್ಷಿಯಂತೆ ಕಾಣುತ್ತಿತ್ತಂತೆ. ತತ್ವಪದಕಾರರು ಆಧ್ಯಾತ್ಮವೇ ಬೇರೆ, ಸಂಸಾರವೇ ಬೇರೆ, ಯೋಗವೇ ಬೇರೆಯೆಂದು ಗ್ರಹಿಸದೆ, ಜೀವನವೇ ಯೋಗಾಯೋಗವೆಂದು ಆತ್ಮಾರ್ಪಣೆಯೇ ಅಧಿಕವೆಂದು ಅರಿತಿದ್ದರು. ಜನಪದರು ಹೇಳುವ ‘ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿ” ಎನ್ನುವ ಇವರ ಜೀವನಕ್ಕೆ ಉತ್ತಮ ಉದಾಹರಣೆಯಾಗಿದೆ.

“ಎತ್ತ ನೋಡಲು ಮುತ್ತಿನ ರಾಶಿ
ಸುತ್ತ ಮುತ್ತ ಜ್ಯೋತಿಯ ತುಂಬಿ
ಚಿತ್ತಮಾರ್ಗದೆ ನಿತ್ಯನೀನೆಂದು
ನೆತ್ತಿಯ ಮೇಲೆ ಹಸ್ತವನಿಟ್ಟು”[೬೯]

ತತ್ವಪದಕಾರನು ಯೋಗಿಯೇ ಆದರೆ ಯೋಗಿ ಎಂದು ಬಳಸುವುದಿಲ್ಲ. ನಿಜಗುಣ ಶಿವಯೋಗಿ ಎನ್ನುತ್ತೇವೆ. ಶಿಶುನಾಳ ಶರೀಫ್‌ನಿಗೆ ತತ್ವಪದಕಾರನೆನ್ನುತ್ತೇವೆ. ಈ ಇಬ್ಬರು ಸಂತರು ಆತ್ಮದ ಕುರಿತಾಗಿ ಬೌದ್ಧಿಕವಾಗಿ ಮಾತನಾಡಿದರು. ಇಂಥ ನಂಬಿಕೆಗಳು ಇಂದು ಹೊಸ ವಿಚಾರಗಳಾಗಿ ಕಂಡುಬರುತ್ತವೆ. ಎತ್ತ ನೋಡಲು ಮುತ್ತಿನ ರಾಶಿ ಸುತ್ತಮುತ್ತ ಜ್ಯೋತಿಯ ತುಂಬಿ. ಈ ಸಂತನಿಗೆ ಮುತ್ತು ಸುಲಭವಾಗಿ

ದೊರಕುತ್ತದೆ. ಶ್ರೀಮಂತರ ವಜ್ರವೆನ್ನುವುದಿಲ್ಲ. ಜ್ಯೋತಿಯೆನ್ನುವನು. ಮುತ್ತೆನ್ನುವನು ತತ್ವಪದಕಾರನಿಂದ ಉಗಮವಾದ ಇಂತಹ ರೂಪಕಗಳು ಜನಪದರ ದೃಢ ವಿಶ್ವಾಸವನ್ನು ಗಳಿಸುವಲ್ಲಿ ಯಶಸ್ಸು ಕಾಣುತ್ತವೆ. ಆತ್ಮದ ಮನೋಸಂಬಂಧದ ಪರಿಚಯ ಹೇಳುತ್ತಾನೆ. "ಗಂಗ ಯಮುನೆಯೊಳಾಡಿ | ಸಂಗಮ ತ್ರಿವೇಣಿ ಸ್ನಾನವ ಮಾಡಿ | ಪಿಂಗಳ ಪ್ರಭೆ ನೋಡಿ ಗಂಗ ಯಮುನೆಯರು ಇವರಿಗೆ ಮನದಲ್ಲಿ ದರ್ಶನ ಕೊಡುವರು. ತ್ರಿವೇಣಿಸಂಗಮ ಎನ್ನುವುದು ಭೂಮಧ್ಯದಲ್ಲಿರುವ ಆಜ್ಞಾಚಕ್ರವಿದಾಗಿದೆ. ನಾಸಿಕಾಗ್ರ ಜ್ಯೋತಿಯ ಸಹಾಯದಿಂದ ಗಂಗೆ ಯಮುನೆಯರಂತೆ ಪವಿತ್ರವಾಗಬಹುದೆಂದು ಹೇಳುತ್ತಾನೆ. ತತ್ವಪದಕಾರನ ಮನಸ್ಸಿನ ಸಂಬಂಧವನ್ನು ಎರಡು ರೀತಿಯಾಗಿ ಗ್ರಹಿಸಬಹುದು. ೧. ನಿಸರ್ಗದ ಅನುಭವವನ್ನು ಶೋಧಿಸುವ ಪ್ರಯತ್ನ, ೨. ಸ್ತ್ರೀ ದೇವತೆಗಳ ಮನಸ್ಸಿನ ಪವಿತ್ರತೆಯನ್ನು ಭಯ ಮತ್ತು ನಂಬಿಕೆಯ ಮೂಲಕ ಗ್ರಹಿಸುವುದು.

ಇಲ್ಲಿ ಗಮನಿಸುವ ಮುಖ್ಯ ಅಂಶವೆಂದರೆ ಲೋಕಾನುಭವದೊಂದಿಗೆ ಆಧ್ಯಾತ್ಮಿಕ ಜ್ಞಾನವನ್ನು ಶೋಧಿಸುವ ತವಕದ ಸ್ವರೂಪವನ್ನು. ಅಹಂಬ್ರಹ್ಮಾಸ್ಮಿ, ಮತ್ತು ಬ್ರಹ್ಮನ ಸಾಕ್ಷಾತ್ಕಾರದ ಮಧ್ಯದ ಮಿತಿಯನ್ನು ಅವರ ಜೀವನದ ಮೂಲಕ ಗಮನಿಸುವುದು ಅಷ್ಟೇ ಮುಖ್ಯವಾಗಿದೆ. ಬಾಲರಾಮಪ್ಪನ ಗುರುಗಳಾದ ನಾಗಯ್ಯನು ಭಾವಿಯಲ್ಲಿ ಧುಮುಕಿ ನೀರಿನ ತಳದಲ್ಲಿಯೇ ಜಲಸ್ತಂಭ ಯೋಗವನ್ನು ಮುಗಿಸಿ ಹೊರಬರುತ್ತಿದ್ದನಂತೆ ಇದನ್ನೇ ಜಲಯೋಗವೆನ್ನುವರು.

ಬ್ರಹ್ಮಸಾಕ್ಷಾತ್ಕಾರವು ಹಲವು ಕಾಲ ಘಟ್ಟಗಳಲ್ಲಿ ಮರುರೂಪ ಪಡೆಯುತ್ತಾ ಬಂದಿದೆ. ತತ್ವಪದಕಾರರ ಬ್ರಹ್ಮವೂ ಅಂಥ ಹಲವು ಐದು ರೂಪಗಳ ಫಲಿತವಾಗಿದೆ.

"ಬ್ರಹ್ಮಾಂಡವೆಂಬ | ಹರವಿಯ ಹೂಡಿ
ಪಿಂಡಾಂಡವೆಂತೆಂಬ | ಬಟ್ಟೆಯ ಕುದಿಸಿ
ತಾರಕ ಬ್ರಹ್ಮನ ಬಂಡೆ | ನಿರ್ಬಂಡೆ ಮಾಡಿ
ಮೂರು ಮೂರುತಿಯೆಂಬ | ಏಟನು ಹೊಡೆದು
ಬೇರಿನಾದವ | ಬಿಸಿಲಿಗಿ ಒಣಗಿಸಿದಂಥಾ"[೨೦]

ತಾರಕ ಬ್ರಹ್ಮನ ಬಂಡೆ ಎನ್ನುವಲ್ಲಿ ಸಾಂಖ್ಯ, ತಾರಕ, ಅಮನಸ್ಕವೆಂಬ ಹಂತದಲ್ಲಿ ರಾಜಯೋಗದೊಂದಿಗೆ ಪೂರ್ಣವಾಗುವುದು. ಆದ್ದರಿಂದ ಈ ಲೋಕದ ಬ್ರಹ್ಮ ಮನುಷ್ಯನ ಅಂತಃ ಕರಣದಲ್ಲಿ ಮನಃಶಕ್ತಿಕೊಡುತ್ತಾನೆ. ಅದು ಯೋಗದ ಮುದ್ರೆಯಲ್ಲಿ ಪ್ರಕೃತಿಯ ಶಿವಶಕ್ತಿಯರ ಸಂಬಂಧಗಳಾಗಿ ಕಾರ್ಯನಿರ್ವಹಿಸುತ್ತವೆ. ಈ ಎರಡೂ ಶಕ್ತಿಗಳು ಪಿಂಡಾಂಡದಲ್ಲಿ ಮಣಿಪೂರ ಮತ್ತು ಅನಾಹತ ಚಕ್ರಗಳಲ್ಲಿ ಗೋಚರಿಸುತ್ತದೆ. ಇದೇ ಕುಂಡಲಿನಿಯ ರೂಪದಲ್ಲಿ ಕಾರ್ಯ ನಿರ್ವಹಿಸುತ್ತದೆ. ಶರೀರದ ಕುಂಡಿಲಿನಿ ಶಕ್ತಿಯನ್ನು ಜಾಗೃತಗೊಳಿಸುವುದೇ ಕುಂಡಿಲಿನಿ ಯೋಗವಾಗಿದೆ. ಕುಂಡಿಲಿನಿಯು

ಮೂಲಾಧಾರದಲ್ಲಿ ಸರ್ಪಾಕೃತಿಯಂತೆ ಸುಪ್ತವಾಗಿದ್ದು ಮೂಲಾಧಾರ ಸ್ವಾಧಿಷ್ಠಾನ ಅನಾಹತ, ವಿಶುದ್ಧ, ಆಜ್ಞಾ ಮೊದಲಾದ ಆರು ಚಕ್ರಗಳು ಕುಂಡಲಿನಿಯ ಮೂಲಕ ಸೇರುವುದೇ ಈ ಯೋಗದ ವೈಶಿಷ್ಟ್ಯ. ಸಹಸ್ರಾರವೇ ಪರಶಿವನಸ್ಥಾನ. ಇಲ್ಲಿಯೇ ಜೀವಾತ್ಮ ಪರಮಾತ್ಮರ ಐಕ್ಯವುಂಟಾಗುವುದು. ಸಹಸ್ರಾರವನ್ನು ಅರಿತವನಿಗೆ ಸಂಸ್ಕಾರವಿಲ್ಲ. ಈ ಕುಂಡಿಲಿನಿ ಯೋಗವನ್ನೇ ರಾಜಯೋಗವೆಂದು ಹೇಳುವರು.[೨೧] ಹಠಯೋಗದ ಇಂಥ ಗುಪ್ತವಿದ್ಯೆಗಳು ಕ್ರಿಯೆ ಮತ್ತು ಅರಿವಿನ ಮೂಲಕ ಗಟ್ಟಿಗೊಳ್ಳುತ್ತವೆ. ಆತ್ಮನೆಲೆಯಲ್ಲಿ ಪ್ರತಿಷ್ಠಾಪಿತಗೊಳ್ಳುತ್ತವೆ.

ತೋಂಟದ ಸಿದ್ದಲಿಂಗೇಶ್ವರರು ಯೋಗದಲ್ಲಿ ಧ್ಯಾನಸ್ಥರಾದಾಗ ಅವರ ದೇಹದ ಸುತ್ತಲೂ ಹುತ್ತು ಬೆಳೆದ ಪವಾಡವು ನೆನೆಪಿಗೆ ಬರುತ್ತದೆ. ನಿಜಗುಣ ಶಿವಯೋಗಿಗಳು ಶಂಭುಲಿಂಗನ ಬೆಟ್ಟದ ಗುಹೆಯಲ್ಲಿ ಧ್ಯಾನಸ್ಥರಾಗಿರುತ್ತಿದ್ದರೆಂಬ ಪ್ರಸ್ತಾಪವನ್ನು ಸಹ ಇಲ್ಲಿ ಉದಾಹರಿಸಬಹುದು. ಈ ಮೇಲಿನ ಸಂತರ ಹಠಯೋಗವನ್ನು ಪರಿಗಣಿಸಿದಾಗ ತತ್ವಪದಕಾರರು ಇಂಥ ಘೋರವಾದ ಯೋಗವನ್ನು ಮಾಡಿದ ನಿದರ್ಶನಗಳು ಬಹಳ ಕಡಿಮೆ. ಇಂತಹ ಧ್ಯಾನವನ್ನು ನಿರಾಕರಿಸುತ್ತಾ ಬಂದ ಇವರು ಹಿಮಾಲಯಕ್ಕೆ ಹೋಗಿ ತಪ್ಪಸ್ಸು ಮಾಡಲಿಲ್ಲ. ದೇಹವನ್ನು ದಂಡಿಸಲಿಲ್ಲ. ಜೀವನವನ್ನು ಒಂದು ಯೋಗವೆಂದು ಸ್ವೀಕರಿಸಿದರು. ಯೋಗದಲ್ಲಿ ಪ್ರಧಾನ ವ್ಯಕ್ತಿಗಳಾಗಿ ಕಂಡುಬರುವ ನೀರಲಕೇರಿ ಬಸವಲಿಂಗಪ್ಪ, ಬಾಲರಾಮಪ್ಪ, ವಡಿಕೆ ತಾತಪ್ಪಯ್ಯನಂಥವರು ಯೋಗ ಸಾಧನೆಯಲ್ಲಿ ಪ್ರಭಾವ ಪ್ರಭಾವೀಯಾಗಿದ್ದರು. ನಾವು ತತ್ವಪದಕಾರರು ರೂಪಿಸಿದ ಅವರ ಜೀವನದ ಆರೂಢತ್ವವನ್ನು ಗಮನಿಸುವುದಿಲ್ಲ. ಅನೇಕ ಭಕ್ತಿಪಂಥದವರ ಜೊತೆಗೆ ಮುಖಾಮುಖಿಯಾಗಿ ನೋಡುತ್ತೇವೆ. ಪತಾಂಜಲಿ ಮುನಿಯ ಯೋಗಶಾಸ್ತ್ರವನ್ನು ನೆನಪಿಸಿಕೊಳ್ಳುತ್ತೇವೆ. ಆದರೆ ತತ್ವಪದಕಾರರು ನಾಥರ ವಜ್ರಕಾಯದ ಬಲಿಷ್ಠತೆಯನ್ನು ಧಿಕ್ಕರಿಸಿ ಹಾಡುಗಬ್ಬದ ಪರಂಪರೆಗೆ ಯೋಗದ ಸಾಂಕೇತಿಕ ನಿರೂಪಣೆಯನ್ನು ಕೊಟ್ಟರು. ಧ್ಯಾನವನ್ನು ವಿಸ್ತರಿಸಿದರು. ಆತ್ಮತತ್ವದ ವ್ಯಾಖ್ಯಾನವನ್ನು ಸರಳೀಕರಿಸಿದರು.

ಪ್ರೊ.ಓ.ಎಲ್.ನಾಗಭೂಷಣಸ್ವಾಮಿಯವರು ಹೇಳುವಂತೆ "ಅನುಭಾವದ ದಾರಿ, ಭಕ್ತಿಯ ದಾರಿ, ವ್ರತ ನೇಮಗಳ ಹಿಡಿದವರೆಲ್ಲರೂ ಇದ್ದರು. ಮಠ, ಗುರು ಬೇಕು ಅನ್ನುವವರಿದ್ದರು. ಬೇಡ ಅನ್ನುವವರಿದ್ದರು. ಅದೊಂದು ದೊಡ್ಡ ಸಂತೆ ಹುಲುಗೂರು ಸಂತೆ."[೨೨] ತತ್ವಪದಕಾರರ ಯೋಗದ ಮೌಲ್ಯ ಆರೂಢ ಪರಂಪರೆಗೆ ಬಹುಸೂಕ್ತವೆನಿಸುತ್ತದೆ ಈ ಮಾತು.

**ಅವಧೂತ :** ಆರೂಢದ ಇನ್ನೊಂದು ನೆಲೆಯ ಆತ್ಮತರ್ಕದ ಭಕ್ತಿ ಮಾರ್ಗವೆಂದು ಕರೆಯಲಾಗುತ್ತದೆ. ಅವಧೂತದ ಚಿಂತನವನ್ನು ಪ್ರವೇಶಿಸುವ ಪ್ರಯತ್ನದ ಹಿಂದೆ ಬುದ್ಧನ ಬದುಕು ಒಳ್ಳೆ ಉದಾಹರಣೆಯಾಗಿದೆ. ಪ್ರಾರಂಭದಲ್ಲಿ ಬುದ್ಧನು ಸಿದ್ಧಾರ್ಥನಾಗಿದ್ದ ಅವನು ದೈವವಾದಾಗ ಅವಧೂತನಾದ. ಹಾಗೆಯೇ ಸಿದ್ಧಾರೂಢರು ಲೋಕಸಂಚಾರದ ನಂತರ ಅವಧೂತರಾಗಿದ್ದನ್ನು ಕಾಣಬಹುದು. ಶರಣರ ಮಾತಿನಂತೆ

ಅಂಗದ ಮೇಲೆ ಲಿಂಗವುಳ್ಳದ್ದೆಲ್ಲವೂ ಸಂಗಮನಾಥನೆಂಬ ಭಾವನೆಯಾಗುವುದಿಲ್ಲ. ಇಂತಹ ಮಾರ್ಗವನ್ನು ಸ್ವೀಕಾರ ಮಾಡಿದವರಲ್ಲಿ ಘನಲಿಂಗದೇವ, ಶಾಂತಮಲ್ಲಿಕಾರ್ಜುನ, ಬತ್ತಲೇಶ, ಬೋಳಬಸವೇಶ, ಸಪ್ತಕಾವ್ಯದ ಗುರುಬಸವ ಮುಖ್ಯರಾದಂಥವರು.

ಅವಧೂತವೆಂಬ ಮಾತಿನ ಅರಳುವಿಕೆಯಲ್ಲಿ ಸನ್ಯಾಸತ್ವದ ಸ್ವೀಕಾರ ಮನೋಭಾವ ತೆರುದು ತೋರುತ್ತದೆ. ಸರಳವಾಗಿ ಹೇಳುವುದಾದರೆ ಅವಧೂತವೆಂಬ ಆಯ್ಕೆಯ ಹಿಂದೆ ಎಲ್ಲಾ ಬಗೆಯ ಅಭಿಮಾನವನ್ನು ತಳ್ಳಿ ಹಾಕಿದವನು. ಆಡಂಬರದ ಭಕ್ತಿಯನ್ನು ಬಯಸದವನು. ಯೋಗಿ ಅಥವಾ ಸನ್ಯಾಸಿಗಳಂತೆ ತನ್ನನ್ನು ಗುರುತಿಸಿಕೊಳ್ಳುವವನು ಎಂದು ಗುರುತಿಸಲಾಗುತ್ತದೆ.

ಇಂಥ ಮನಸ್ಥಿತಿಯ ತತ್ವಪದಕಾರನ ಬದುಕು ಭಕ್ತಿಯ ಸಂವೇದನೆಯಾಗಿ ಪಾರಮಾರ್ಥಿಕ ಬದುಕಿನ ಪ್ರೇರಣೆಯಾಗಿ ಕಂಡುಬರುವುದು. ಮುಖ್ಯವಾಗಿ ಅವಧೂತರನ್ನು ಗುರುತಿಸಲು ಅವರ ಅಂತರಂಗದ ವ್ಯಕ್ತಿತ್ವದ ಪರಿಚಯವನ್ನು ಆಶ್ರಯಿಸಿ ಪರಿಗಣಿಸಬೇಕಾಗುತ್ತದೆ. ಉದಾ : ನೀರಲಕೇರಿ ಬಸವಲಿಂಗನ ಖ್ಯಾತಿಯನ್ನು ಕೇಳಿ ಒಬ್ಬ ಅಪರಿಚಿತ ನೀರಲಕೇರಿ ಗ್ರಾಮಕ್ಕೆ ಬರುತ್ತಾನೆ. ಊರಲ್ಲಿ ಬಸವಲಿಂಗಪ್ಪ ತಾತ ಯಾರೆಂದು ಎಲ್ಲರನ್ನೂ ಕೇಳುತ್ತಾನೆ. ಒಬ್ಬ ಹಿರಿಯ ಅಲ್ಲಿ ಕಟ್ಟೆಯ ಮೇಲೆ ಕುಳಿತಿರುವಾತನೇ ಬಸವಲಿಂಗಪ್ಪನೆಂದು ಹೇಳುತ್ತಾನೆ. ಆ ಭಕ್ತನು ತಾತ ನೀವೇನು ಉದ್ಯೋಗ ಮಾಡಿಕೊಂಡಿರುವಿರಿ ಎಂದು ಕೇಳಿದಾಗ

> "ತಮ್ಮ ಕೇಳೋ ಎನ್ನ ಉದ್ಯೋಗ | ತಮ್ಮಾ ಕೇಳೋ
> ಎನ್ನ ವ್ಯವಹಾರ | ಹಮ್ಮನಳಿದು ಪರಬ್ರಹ್ಮ
> ಚಿಂತೆಯೊಳು | ಸುಮ್ಮನಿರುತಲಿ ಎರಡೆಮ್ಮೆ ಕಾಯ್ತೀನಿ"[೭೩]

ಪರಬ್ರಹ್ಮ ಚಿಂತೆಯೊಂದಿಗೆ ಎರಡೆಮ್ಮೆ ಕಾಯ್ತೀನಿ ಎನ್ನುವುದು ಇಹಲೋಕದಲ್ಲಿ ಪರ ಧ್ಯಾನದ ಸ್ಥಿತಿಯಾಗಿತ್ತೆಂದು ಊಹಿಸಬಹುದು. ಅನ್ಯರ ವ್ಯವಹಾರವನ್ನು ನಿರಾಕರಿಸಿ ಇಹ-ಪರದಲ್ಲಿ ಬ್ರಹ್ಮಜ್ಞಾನವನ್ನು ತಿಳಿದಂಥವರು, ಆತ್ಮವೇ ದೊಡ್ಡದೆಂಬ ಆದರ್ಶವನ್ನು ಅರಿತವನು ದೇಹದ ವ್ಯಾಮೋಹವನ್ನು ಬಿಟ್ಟವನು, ನಿರ್ದಿಷ್ಟ ಧರ್ಮಗಳ ಹಂಗನ್ನು ಕಿತ್ತೊಗೆದಂಥವರು ಅವಧೂತರೆ.

ತತ್ವಪದಕಾರರು ಶಿಷ್ಟರಿಗಿಂತ ಹೇಗೆ ಬೇರೆಯೆಂದು ಗುರುತಿಸಿದ್ದೇವೆ. ಶಿಷ್ಟ ಅವಧೂತರದಲ್ಲಿ ತತ್ವಪದಕಾರರ ಜೀವನದ ಆಚರಣೆಯಲ್ಲಿ ಕಂಡುಬರುವ ಕ್ರಮಗಳು ಬೇರೆ ಬೇರೆಯಾಗಿದ್ದು ಶಿಷ್ಟರಲ್ಲಿ ಯೋಗ ಪ್ರಧಾನವಾದರೆ, ತತ್ವಪದಕಾರರಲ್ಲಿ ಧ್ಯಾನದ ವಿವಿಧ ಮುಖಗಳು ಪ್ರಧಾನವಾಗುತ್ತವೆ.

ಅವಧೂತರ ನಿರ್ಭಿಡೆ ತೀರ್ಮಾನಗಳು ಮತ್ತು ಕಠಿಣ ನಿಷ್ಠೆಗಳು ಬಹುಮುಖ್ಯವಾದಂಥವು. ಇವರ ಸಮಾಧಿಮರಣ, ಇಚ್ಛಾಮರಣಗಳು ಇವರ ಕ್ರಿಯಾಶೀಲ ಹಾಗೂ ಹಠಮಾರಿ ವ್ಯಕ್ತಿತ್ವಕ್ಕೆ

ಸೂಕ್ಷ್ಮತೆಯನ್ನು ತಂದುಕೊಡುತ್ತವೆ. ತಮ್ಮ ಇಷ್ಟಲಿಂಗ ಕಳೆದು ಹೋದರೆ ಭಿನ್ನವಾದರೆ ಕಳಚಿ ಭೂಮಿಯ ಮೇಲೆ ಬಿದ್ದರೆ, ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದರು. ಅಷ್ಟರ ಮಟ್ಟಿಗೆ ಉಗ್ರನಿಷ್ಠೆಹೊಂದಿದ್ದರು. ನೀರಲಕೇರಿ ಬಸವಲಿಂಗರಿಗೆ ಪಾರಮಾರ್ಥಿಕತೆಯಲ್ಲಿ ಒಳ್ಳೆಯ ಸ್ಥಾನವಿರುವುದನ್ನು ಸಹಿಸದ ಕೆಲ ದುಷ್ಟ ಜನರು ಇವರ ಇಷ್ಟಲಿಂಗವನ್ನು ಕದ್ದರು.

"ಅಂಗದೊಳಗೆ | ನಿಸ್ಸಂಗವಾಗೋತನಕ
ರಂಗಮಂಟಪದ ಮದ್ಯ | ಕೈಸೇರೋತನಕ
ಕಂಗಳೆರಡು ಮುಚ್ಚಿ | ಕಡೆಗಾಗೋತನಕ
ಮಂಗಳ ಪ್ರಭೆಯೊಳು | ಮುಳಿಗ್ಯಾಡೋ ತನಕ"[೭೪]

ಎಂಬ ಈ ಹಾಡನ್ನು ಹಾಡುತ್ತಾ ಉಪವಾಸದಿಂದ ೮ ದಿನ ಕಳೆದರು. ಹೀಗೆಯೇ ದೇಹತ್ಯಾಗ ಮಾಡಲು ನಿರ್ಧರಿಸಿದರು. ಇವರ ಕಠಿಣ ವ್ರತವನ್ನು ಮನಗಂಡು ಲಿಂಗಕದ್ದ ಇವರು ಮಲಗಿದಾಗ ಇಷ್ಟಲಿಂಗವನ್ನು ತಂದಿಟ್ಟರೆಂಬ ಹೇಳಿಕೆಗಳು ನೀರಲಕೇರಿ ಗ್ರಾಮದಲ್ಲಿ ಕೇಳಿಬರುತ್ತದೆ. ಇಂತಹ ಕಠಿಣ ಆರಾಧನೆಗಳನ್ನು ಅವಧೂತರ ಸ್ವಭಾವದಲ್ಲಿ ಕಾಣುತ್ತೇವೆ.

ರೇವಣಸಿದ್ಧರಿಂದ ಪ್ರಾರಂಭವಾದ ಈ ಪರಂಪರೆಯು ತತ್ವಪದಕಾರರ ಕಾಲದ ತನಕ ಮರುರೂಪುಗೊಳ್ಳುತ್ತಾ ಬಂದಿದೆ. ಉದಾ : ವಚನಕಾರರ ನಿಷ್ಠೆಯ ಶಿವಯೋಗವು ಶೈವತ್ವದಿಂದ ಗಟ್ಟಿಯಾಗಿ ನಾಥವೆಂಬ ನಾಮಾಂಕಿತದಿಂದ ಗುರುತಿಸಲಾಯಿತು. ಕೀರ್ತನಕಾರರಲ್ಲಿ ಅವಧೂತವೆಂಬ ಪದದ ಬಳಕೆಯು ವೈದಿಕರ ದತ್ತಾತ್ರೇಯ ದೈವದ ಆಚರಣೆಯಾಗಿ ಕಾಣಲಾಯಿತು. ತತ್ವಪದಕಾರರು ಬಿತ್ತಿದ ಯೋಗದ ಪರಿಕಲ್ಪನೆಯಲ್ಲಿ ಗುರುನಿವೇದನೆ, ಸಂಸಾರವ್ಯಾಮೋಹ, ನೀತಿ, ಜ್ಞಾನ, ಸತಿ-ಪತಿ ಭಾವಗಳು ಕ್ಷೀಣವಾಗಿ, ಉನ್ಮನಿ, ಸಹಸ್ರದಳ, ಮಂಡಲತ್ರಯೆ, ಕುಂಡಿಲಿನಿಯಂತಹ ವಾಮಮಾರ್ಗೀಯ ಚಿಂತನೆಗಳು ಹೆಚ್ಚಾದವು.

"ಬಾರೋ ಹೋಗೋಣ ಪುರಕೆ|
ಎಂಟು ರೊಟ್ಟಿಯ| ಬುತ್ತಿಯ ಕಟ್ಟು
ಗಂಟು ಕಳ್ಳರು| ದಾರಿಲಿ ಉಂಟು
ಸೊಂಟ ಮುರಿದು| ಆ ಕಳ್ಳದಾರಿಗೆ
ತಂಟು ಹಚ್ಚಿ| ನೀ ಬೇಗ ಬೇಗನೆ"[೭೫]

ತತ್ವಪದಕಾರನ ಹೇಳಿಕೆಯಲ್ಲಿ ಅನುಭಾವಿ ಸೊಗಡಿದೆ. ದೇಹವನ್ನು ಪುರಕ್ಕೆ ಹೋಲಿಸಿ, ಮನುಷ್ಯನ ಅಷ್ಟಮದಗಳನ್ನು ರೊಟ್ಟಿಯ ಬುತ್ತಿಗೆ ಹೋಲಿಸುತ್ತಾನೆ. ಈ ಬುತ್ತಿಯನ್ನು ಕದಿಯಲು ಬಂದ ಈ ಜೀವವು ವಂಚಕನಾಗಿರುವನು. ಈ ಕಳ್ಳನು ನಿನ್ನ ತಂಟೆಗೆ ಬರದಂತೆ ನೀ ನೋಡಿಕೋ

ಎನ್ನುವ ಅರ್ಥ ಇಲ್ಲಿದೆ. ಆಡು ಮಾತಿನ ಸ್ವರೂಪಕ್ಕೆ ಪ್ರಾಧಾನ್ಯತೆ ಕೊಡುತ್ತಾ ಶಿಷ್ಟಭಾಷೆಯ ಕಟ್ಟಳೆಯನ್ನು ಮುರಿಯುತ್ತಾನೆ. ಹೆಚ್ಚು ಜ್ಞಾನಿಗಳಲ್ಲದ ಇವರು ಸಂಸ್ಕಾರದಲ್ಲಿ ಅಂತರ್ಗತವಾಗಿರುವ ಸಂಸಾರದ ತಿಳುವಳಿಕೆಯ ತಳಹದಿಯೊಂದಿಗೆ ಹಾಡುತ್ತಾರೆ.

"ಯೋಗ ಮಾರ್ಗದ ಅವಧೂತನಿಗೆ ಧರ್ಮಮೇಘವೆನ್ನುವ ಸಮಾಧಿಸ್ಥಿತಿಯಿರುತ್ತದೆ. ಅವರಿದ್ದಲ್ಲಿಯೇ ಧರ್ಮ ಸುಳಿದಾಡುತ್ತದೆ. ಪ್ರಕೃತಿಯ ಸತ್ವ, ರಜ, ತಮ, ಗುಣಗಳನ್ನು ಪಡೆದು ಸಾತ್ವಿಕನನ್ನಾಗಿ ಮಾಡುವಂಥಾ ಕ್ರಿಯೆ ಈ ಅವಧೂತನಿಗಿರುತ್ತದೆಂದು ಡಾ.ಮಲ್ಲೇಪುರಂ ಜಿ.ವೆಂಕಟೇಶ ಹೇಳುತ್ತಾರೆ."[೨೬]? ಆತ್ಮವಾದಿಗಳಿಗೆ ಮೇಘಯೆನ್ನುವುದು ಉಪಮೆಯಾಗಿ ಕಂಡುಬರುವುದರಿಂದ ಲೌಕಿಕ ಧರ್ಮಗಳ ಕ್ಲಿಷ್ಟತೆಯನ್ನು ನಿರಾಕರಿಸಿ ಅವಧೂತವೆಂಬ ಧರ್ಮವನ್ನು ಸ್ವೀಕರಿಸುತ್ತಾನೆ. ಕಾರಣ ಆರೂಢ ಅವಧೂತ ಮಾರ್ಗಗಳು ಕಾಣಿಸಿದ ಸಂದರ್ಭ ಹದಿಮೂರು, ಹದಿನಾಲ್ಕನೇ ಶತಮಾನದಲ್ಲಿದ್ದರಿಂದ ಭಕ್ತಿಪಂಥಗಳು ರೂಪಿಸಿದ್ದ ಅಂದಿನ ವೈಶಿಷ್ಟ್ಯಗಳು ತತ್ವಪದಕಾರರಿಗೆ ಪ್ರಧಾನವಾಗಿ ಕಂಡುಬರುವುದರಿಂದ

> "ಆಸತ್ತು ಬ್ಯಾಸತ್ತು ದೇಶವ ತಿರುಗಿದೆ
> ಕೋಶವ ನೋಡಲು ಆಶಿಸಿ ನಾ ಬಂದೆ
> ಕಾಶಿ ಲಿಂಗನ ದರುಶನ ಪಡೆದೆ"[೨೭]

ತತ್ವಪದಕಾರರಲ್ಲಿ ಕಂಡುಬರುವ ಕಾಶಿಲಿಂಗನ ಪರಿಕಲ್ಪನೆಯು ಶಿವವರ್ತುಲದ ನಾಥರ ಕುರಿತು ಹೇಳುತ್ತಾನೆ. ವಿಶ್ವನಾಥ, ಸೋಮನಾಥ ಎಂಬ ಧಾರ್ಮಿಕ ಪರಿಕಲ್ಪನೆಯನ್ನು ಹೀಗೆ ಗ್ರಹಿಸಬಹುದು. ಯೋಗಪರವಾದ ಶಿವನು ನಾಥನಾಗಿ ಘೋರಖ್‌ನಾಥ್, ಮತ್ಸ್ಯೇಂದ್ರನಾಥ್ ಘೋರಕ್ಷನಾಥ, ನಾಥ ಸಂಬಂಧಗಳಿಂದ ಬಂದವುಗಳಾದ್ದರಿಂದ ಇವರಿಗೆ ಕಾಶ್ಮೀರ ಶೈವ ಪಂಥದೊಂದಿಗೆ ಒಲವಿರಬೇಕೆಂದೆನಿಸುತ್ತದೆ. ಉತ್ತರ ಭಾರತದ ಸೋಮನಾಥ ದೇವಾಲಯವನ್ನು ಘಜನಿ ಮಹಮ್ಮದ್ ಕೊಳ್ಳೆ ಹೊಡೆದಾಗ ಅನೇಕ ಶೈವ ಅವಧೂತರು ಉತ್ತರದಿಂದ ದಕ್ಷಿಣಕ್ಕೆ ಬಂದಿರಬೇಕು. "ಸೋಮನಾಥದ ಪಾಶುಪತರು ಬಳ್ಳಿಗಾವೆಯ ಕಾಳಾಮುಖರ ನಡುವೆ ಲಕುಲೀಶರ ಸಂಬಂಧಗಳಷ್ಟೇ ಅಲ್ಲದೆ ಅದೆಷ್ಟೋ ಕುತೂಹಲಕರವಾದ ಹೋಲಿಕೆಗಳಿವೆ. ತ್ರಿಪುರಾಂತಕನೆಂಬ ಯತಿಯಿಂದ ಸೋಮನಾಥದ ಐದು ಲಿಂಗಗಳ ಪ್ರತಿಷ್ಠಾಪನೆ ನಡೆದಿತ್ತು."[೨೮] ಕಾಶ್ಮೀರ ಶೈವ ವಚಕಾರನಾದ ಮೋಳಿಗೆ ಮಾರಯ್ಯನು ಶಿವನೊಳಗೆ ಕೂಟಸ್ಥನಾಗಬೇಕೆಂಬ ಹಂಬಲವನ್ನು ವ್ಯಕ್ತಪಡಿಸಿದ್ದನ್ನು ನೋಡಿದರೆ ಅವಧೂತರ ಒಟ್ಟು ಸಂಬಂಧಗಳು ಶೈವತ್ವದ ಮೂಲಕ ವಿಕಾಸವಾಗಿದೆಯೆಂದು ಒಪ್ಪಿಕೊಳ್ಳಬೇಕು. ಇವು ತತ್ವಪದಕಾರರಲ್ಲಿ ಒಳವಿನ್ಯಾಸಗಳಾಗಿ ರೂಪುಪಡೆದಿವೆಯೆಂದು ಅದಕ್ಕಾಗಿಯೇ ತತ್ವಪದಕಾರರ 'ಆಸತ್ತು ಬ್ಯಾಸತ್ತು ದೇಶವ ತಿರುಗಿದೆ' ಎಂದು ಹೇಳುತ್ತಾನೆ.

ಉದಾ : ಗಧಾರ ಗ್ರಾಮದ ಜನರು ರೋಗದಿಂದ ಸಾಯುತ್ತಿರುವಾಗ ಖದರಸಾಬನು ಕಾಶಿಯಿಂದ ಲಿಂಗ ತಂದು ಸ್ಥಾಪಿಸಿ ಶಿವಲಿಂಗ ಪೂಜೆಯನ್ನು ಮಾಡಿ ಶಿವನನ್ನು ಬೇಡಿಕೊಂಡು ಅವನ ಪ್ರಾಣ ಉಳಿಸಿದನೆಂದು ಮಗನಾದ ದಾದಾಪೀರ ಹೇಳುತ್ತಾನೆ.

ರಾಂಪೂರ ಲಕ್ಷ್ಮಣದಾಸನು ಶಿವನ ಇನ್ನೊಂದು ರೂಪವನ್ನು ಹೇಳುತ್ತಾನೆ. "ಶಂಭು ಮನವನವೆ| ಕುಂಭಿನಿಯೊಳು ಸಂಭ್ರಮ ಪಡಿ ಮನವೆ | ಈಶನ ನೆನೆಯಬಾರದೆ ಶಿವತತ್ವವನ್ನು ಬಿಂಬಿಸುವ ಭಕ್ತಿಯ ನಂಬಿಕೆಗಳು ಅವಧೂತ ಪ್ರಜ್ಞೆಯ ಮೂಲಕ ತತ್ವಪದಕಾರನ ಜೀವನದಲ್ಲಿ ಪ್ರವೇಶ ಪಡೆದಿವೆ ಎಂದೆನಿಸುತ್ತದೆ.

ಅವಧೂತರು ಇಚ್ಛಾಮರಣವನ್ನು ಸ್ವೀಕರಿಸುತ್ತಿದ್ದು ಅದನ್ನು Challange ಆಗಿ ತೆಗೆದುಕೊಳ್ಳುತ್ತಿದ್ದರು. ಈ ಹಂತದ ಪ್ರಯೋಗ ಮಾಡಬೇಕಾದರೆ ತಮ್ಮ ಇಚ್ಛೆಯ ಬಗ್ಗೆ ಜಾಗೃತ ಮನೋಭಾವ ಇದ್ದಾಗ ಮಾತ್ರ ಸಾಧ್ಯವಾಗುವುದು. ಈ ಹಂತದ ಪ್ರಯೋಗವು, ಸೂಕ್ಷ್ಮಮನಸ್ಸಿನ ಮಾನಸಿಕ ಸ್ವರ್ಗವಾಗಿದ್ದು ಇದನ್ನೇ ಆತ್ಮಾರ್ಪಣೆಯ ಹಂತವೆಂದು ಹೇಳಬಹುದು. ತತ್ವಪದಕಾರರಾದ ಘನಮಠ ನಾಗಭೂಷಣರಿಗೂ, ನಾರದಗಡ್ಡೆಯ ಚೆನ್ನಬಸವಸ್ವಾಮಿಗಳಿಗೂ ಶಂಕರಪ್ಪ ಗೌಡರ ಮನೆಯಲ್ಲಿ ಕರುಣ ಪ್ರಸಾದ ಪಡೆದುಕೊಳ್ಳುವ ಸಮಯದಲ್ಲಿ ವಾದ ನಡೆಯುತ್ತದೆ. ಘನಮಠರು ಕೊನೆಗೆ ವಾದದ ನಿರ್ಣಯವು ಕೈಲಾಸದಲ್ಲಿಯೇ ಆಗಲಿ ಎಂದು ಶಂಕರಪ್ಪಗೌಡರು ಸಾಕ್ಷಿ ಹೇಳಲೆಂದು ಹೇಳಿದಾಗ ಚೆನ್ನಬಸವಸ್ವಾಮಿಗಳು ಒಡನೆಯೇ ಇಚ್ಛಾಮರಣವನ್ನು ಹೊಂದಿದರಂತೆ. ಘನಮಠ ನಾಗಭೂಷಣರು ನಾನೂ ಕೈಲಾಸಕ್ಕೆ ಹೋಗುವೆನೆಂದು ಒಡನೆಯೇ ಆತ್ಮಾರ್ಪಣೆ ಮಾಡಿಕೊಂಡರಂತೆ ಇಂಥ ಪವಾಡ ಕಥೆಗಳಿಗೆ ಹಿರಿಯಸ್ಥಾನವಿದೆ.

ಈ ರೀತಿಯ ಅವಧೂತರು ತಮ್ಮ ಇಚ್ಛಾಮರಣದ ಬಗ್ಗೆ ಎಚ್ಚರಿಕೆಯನ್ನು ಕೊಡುವುದರೊಂದಿಗೆ ದೇವರ ಧೂತನಾಗಿ ಕಂಡುಬರುವರು. ಪಾರಮಾರ್ಥಿಕ ವ್ಯಕ್ತಿತ್ವದಲ್ಲಿ ದೈವ ಪ್ರತಿನಿಧಿಯಾಗುವರು. ಅವಧೂತ ಮಾರ್ಗದಲ್ಲಿ ಎರಡು ಭಾಗಗಳಿರುತ್ತವೆ. ೧. ಜೀವನದಲ್ಲಿ ತತ್ವವನ್ನು ಅಳವಡಿಸಿಕೊಂಡು ಭಕ್ತಿಯೊಂದಿಗೆ ನಡೆಯುವ ಮಾರ್ಗ ಒಂದಾದರೆ. ೨. ಜನಪರ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಆಯುರ್ವೇದ ಚಿಕಿತ್ಸೆಯನ್ನು ನೀಡುವುದು. ಯಂತ್ರ ಮಂತ್ರ ಮತ್ತು ತಂತ್ರಗಳಂಥ ಗುಪ್ತವಿದ್ಯೆಗಳ ಸಾಧನೆಯಿಂದ ಜನರ ಕಷ್ಟಗಳಿಗೆ ಪರಿಹಾರ ನೀಡುವಂಥವರು. ಮತ್ತು ಭವಿಷ್ಯವನ್ನು ನುಡಿಯುವಂಥವರು. ಈ ಎರಡೂ ವಿರುದ್ಧವಾದ ತಾತ್ವಿಕ ವಿಚಾರವನ್ನು ಹೀಗೆ ಗ್ರಹಿಸಬಹುದು.

ತತ್ವಪದ ಪರಂಪರೆಯ ಅವಧೂತರು ಮೌಖಿಕ ಸಂಪ್ರದಾಯದೊಂದಿಗೆ ತಮ್ಮಗುಪ್ತವಿದ್ಯೆಗಳಲ್ಲಿ ಪರಿಣಿತಿ ಹೊಂದಿದವರಾಗಿದ್ದರು. ಇಂತಹ ಸಿದ್ಧಿಗಳನ್ನು ಸಾಧಿಸಲು ಛಲದೊಂದಿಗೆ ಸಾಧನೆ ಮಾಡಿದಂಥ

ಸಂತರೂ ಉಂಟು. ಡಾ. ವೀರೇಶ ಬಡಿಗೇರ ಅವರು ಹೇಳುವಂತೆ ಇದು ಲೌಕಿಕ ಸಾಹಿತ್ಯ ಅಥವಾ ಲಘು ಸಾಹಿತ್ಯವೆಂದು ಗುರುತಿಸಿಕೊಂಡಿದೆ.

ಇಂತಹ ಹಲವಾರು ವಿದ್ಯೆಗಳನ್ನು ತಿಳಿದಿದ್ದ ತತ್ವಪದಕಾರರು ಜನಪದರಲ್ಲಿ ಅನುಭಾವಿಯಾಗಿ ಕಂಡುಬರುವರು. ತಮ್ಮ ಸಾಧಕ ಪ್ರತಿಭೆಯ ಮೂಲಕ ವೈದ್ಯಕೀಯ ಸೇವೆಯನ್ನು ಮಾಡಿ ಹಣವನ್ನು ಪಡೆಯದೇ ಪ್ರಚಾರವನ್ನು ಬಯಸದೇ ನಿಸ್ವಾರ್ಥ ಸೇವೆಯಿಂದ ಶುಶ್ರೂಷೆ ಮಾಡುತ್ತಿದ್ದರು.

ತತ್ವಪದಕರನಾದ ಮಾಣಿಕಪ್ಪನು ಯಂತ್ರ, ಮಂತ್ರ, ತಂತ್ರಗಳ ಪುಸ್ತಕಗಳನ್ನು ಬರೆದಿರುವನು. ಆತನ ವನಸ್ಪತಿ ನಿಘಂಟು ಚಿತ್ರಸಹಿತ ಬಾಲ ನಿಘಂಟು ಆಗಿದೆ. ಮನೆಯಲ್ಲಿಯೇ ಆಯುರ್ವೇದ ಔಷಧಿಯನ್ನು ಕೊಡುತ್ತಿದ್ದು ಇವರ ಖ್ಯಾತಿ ಕೇಳಿ ಬೇರೆ ಬೇರೆ ರಾಜ್ಯದ ಜನರು ಔಷಧಿಯನ್ನು ತೆಗೆದುಕೊಳ್ಳಲು ಬರುತ್ತಿದ್ದರು. "ಮಂತ್ರಗಳು ತಾಂತ್ರಿಕನ ಆತ್ಮಶಕ್ತಿ ಮತ್ತು ಆತ್ಮಶುದ್ಧತೆಯ ಪರಿಕರಗಳಾಗಿ ಚಾಲ್ತಿಯಲ್ಲಿರುವುದು ವಿಶೇಷ. ಮಂತ್ರಸಿದ್ಧಿ ದೇಹವನ್ನು ದಿವ್ಯವಾಗಿಸುತ್ತದೆ. ತಂತ್ರ-ಮಂತ್ರಗಳು ಕುಂಡಿಲಿನಿ ಶಕ್ತಿಯನ್ನು ಜಾಗೃತಗೊಳಿಸುವ ದೇಹ ಮತ್ತು ಮನಸ್ಸನ್ನು ಸದಾ ಕ್ರಿಯಾಶೀಲವಾಗಿಡುತ್ತದೆ."[೭೯]

"ಆರೂಢಾಚಾರಿಗೆ ಇರುವುದೆಂದು| ಮನಬಂದ ಹಾಗೆ ಕಂಡ
ಕಂಡವರ ಮೆನೆಯಲುಂಡು| ಕೈಯೊಡ್ಡಿತಿಂದು ಮಧ್ಯ
ಮಾಂಸವ ತಿಂದು ತಿಂದು| ಬಿಡದೆ ಗಾಂಜಿ ಸೇದಿ
ತಿರುಗುವುದು| ದಾರಿಗೆಟ್ಟು ಬಿದ್ದುಕೊಂಡು ನೆಲದ ಮೇಲೆ
ಉರುಳಾಡೋ ಜನರಿಗೆ"[೮೦]

ಇಲ್ಲಿಯ ವಿಚಾರಗಳು ನೇರವಾಗಿ ಆರೂಢತ್ವವನ್ನು ಒಪ್ಪಿಕೊಳ್ಳದೇ ಅದರ ಸತ್ವಹೀನತೆಯನ್ನು ಪ್ರಶ್ನಿಸುವ ನೆಲೆ ಇಲ್ಲಿ ಕಾಣುತ್ತದೆ. ತತ್ವಪದಕಾರನಿಗೆ ಕಾಡಿರುವ ಸಮಸ್ಯೆಯೆಂದರೆ ಕಾಪಾಲಿಕ, ಕಾಳಾಮುಖ, ಮತ್ತು ಶಾಕ್ತರ ಚಾರಿತ್ರಿಕ ಗುಣಗಳನ್ನು ದೂಷಿಸುವ ಮತ್ತು ಸ್ವೀಕರಿಸುವ ಸಮಸ್ಯೆ. ಕಾಪಾಲಿಕರು ಸುರೆಯನ್ನು ಕುಡಿದು, ಮಾಂಸವನ್ನು ತಿನ್ನುವವರಾಗಿದ್ದರು ಇಂಥ ಗುಣಗಳನ್ನು ತತ್ವಪದಕಾರರು ನಿರಾಕರಿಸುತ್ತಾರೆ.

ಇಡೀ ತತ್ವಪದಕಾರರ ಬದುಕನ್ನು ಕಂಡಾಗ ಆರೂಢ ಅವಧೂತದ ಸ್ಥಾನದ ಪರಿಕಲ್ಪನೆ ಏನೆಂದು ಗೊತ್ತಾಗುತ್ತದೆ. ಇವನ ಸ್ಥಾನಮಾನಗಳು ವಿಶೇಷ ಶಕ್ತಿಯಾಗಿ ಬೆಳೆದು ಸನ್ಯಾಸತ್ವಕ್ಕೆ ಮಾನ್ಯತೆಯನ್ನು ಪಡೆದುಕೊಂಡನೆಂದು ಹೇಳಬಹುದು. ಇವನು ಜನಪದ ಹಾಡುಗಾರನಾಗಿದ್ದರಿಂದ ಮಾನವ ಧರ್ಮದ ಜಿಜ್ಞಾಸೆಯ ಚೌಕಟ್ಟಿನೊಳಗೆ ಹೊಸದೃಷ್ಟಿಕೋನ ಶೋಧನೆ ಮಾಡುವ ಹಂತಕ್ಕೂ ಹೋಗುತ್ತಾನೆ.

''ಮುಗ್ಧ ಶರಣರ ಹಾಡು| ಸಿದ್ಧಿ ಮಂತ್ರವ ನೋಡು ಸಿದ್ಧಾಗೋ ಹಾಡು ಹಾಡುದಕೆ| ಎಲೆ ಜೀವ ಶುದ್ಧಾಗಿ ಶುದ್ಧಾಗಿ ಹೊಂದು ಶಿವಪದ|''[೮೧] ಸಿದ್ಧಿಮಂತ್ರವ ನೋಡು ಎನ್ನುವ ರೂಪಕದ ಮಾಹಿತಿಯು, ದೇವರ ಸ್ತುತಿಯೇ ಆಗಿದ್ದು ಅವಧೂತ ತತ್ವಕ್ಕೆ ಶಿವಪದವು ಮಾಹಿತಿಯೊದಗಿಸುತ್ತದೆ. ಜನಪದ ಮನಸ್ಸುಳ್ಳ ತತ್ವಪದಕಾರನು ದೈವಾನುಗ್ರಹವೆಂಬ ನೀತಿಯನ್ನು ಎಚ್ಚರಿಸುತ್ತಾ ಭವಿಷ್ಯ ನುಡಿಯುವನು.

ಕೃಷಿಬದುಕನ್ನು ಯಾರು ಪ್ರೀತಿಸುವರೋ ಅವರು ಭುವಿಯ ಜೊತೆ ಮಾತನಾಡುವರು. ಪ್ರಕೃತಿಯಲ್ಲಿದ್ದ ಸಸ್ಯ, ಖನಿಜಸಂಪತ್ತನ್ನು ನೋಡಿ ಭೂತಾಯಿಗೆ ಕೃತಜ್ಞತೆ ಅರ್ಪಿಸುವರು. ಇಂತಹ ಮೂಲಭೂತವಾದ ಸಂಬಂಧಗಳು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾದರೂ ಕೃಷಿ ಜೀವನದ ಆರಾಧನೆಯ ಬಗ್ಗೆ ಪೂಜ್ಯನೀಯ ಭಾವ ತಳೆದಿದ್ದನೆಂಬುದು ಸ್ಪಷ್ಟವಾಗಿದೆ. ''ಅಶ್ವಿನಿ ಮಳೆಗೆ ಹರಗಬೇಕು. ಬಿತ್ತಬಾರದು. ಭರಣಿ ಮಳೆ ಬಂದರೆ ಬಿತ್ತನೆಗೆ ಶ್ರೇಷ್ಟ. ಭರಣಿ ಮಳೆ ಬಂದರೆ ಧರೆಯೆಲ್ಲಾ ಬೆಳೆ. ಭರಣಿಗೆ ಭತ್ತ ಭಿತ್ತಬೇಕು. ಭರಣಿಗೆ ಬರ ಇಲ್ಲ. ಕೃತ್ತಿಕೆಗೆ ನೆಲ ಕೆದಕಬಾರದು. ಬೀಜಬಿತ್ತಬಾರದು. ರೋಹಿಣಿ ಜೋಳದ ಬಿತ್ತನೆಗೆ ಮತ್ತು ಬೆಳೆಗೆ ಶ್ರೇಷ್ಠ. ರೋಹಿಣಿ ಬಂದರೆ ಓಣೆಲ್ಲಾ ಜೋಳ. ಮುಂಗಾರು ಮಳೆಯಲ್ಲಿ ರೋಹಿಣಿ ಮಳೆ ಅತ್ಯವಶ್ಯಕ ಎಂಬುದನ್ನು ಈ ಮಾತು ಸಿದ್ಧಪಡಿಸುತ್ತದೆ. ಆರಿದ್ರಾ ಮಳೆ ಬಂದರೆ ದರಿದ್ರ ಪರಿಹಾರ ಹಿಂಗಾರು ಮಳೆಯಲ್ಲಿ ಉತ್ತರ, ಸ್ವಾತಿ, ಹಸ್ತ ಬಹು ಪ್ರಧಾನವಾದವುಗಳು.''[೮೨] ಇಂತಹ ಸ್ವಭಾವಗಳುಳ್ಳ ತತ್ವಪದಕಾರರು ಪ್ರಕೃತಿಯನ್ನು ಜೀವಂತವಾಗಿರಿಸುವುದರ ಜೊತೆಗೆ ಅದರ ನಿಗೂಢತೆಯನ್ನು ಶೋಧಿಸಿ ಒಲಿಸಿಕೊಳ್ಳುವವರಾಗಿದ್ದರು. ಹೀಗಾಗಿ ಗುಡಿ-ಗುಂಡಾರ ಮಠಗಳಿಗಿಂತ ನಿಸರ್ಗವೇ ಅವರ ವಾಸದ ನೆಲೆಯಾಗಿತ್ತು.

ಬೇವು, ಮಾವು, ಹಾಲ, ಅರಳಿ, ಬನ್ನಿ, ಬಿಲ್ವಪತ್ರಿ ಗಿಡಗಳಲ್ಲಿದ್ದ ಔಷಧಿಯನ್ನು ಮನಗಂಡು ಅದರ ಸೃಷ್ಟಿ ಶೀಲತೆಯನ್ನು ಸಮುದಾಯದತ್ತ ಹೊರಳಿಸಿದರು.

''ಹದ ನೋಡಿ ಹರಗಬೇಕು ಮಾನ್ಯದ ಹೊಲಾ
ಬೆದೆ ನೋಡಿ ಬಿತ್ತಬೇಕು ಮಳಿಗಾಲ
ವ್ಯರ್ಥವಾಗಿ ಕಳಿಯಬೇಡ ನೀನು ಕಾಲ
ಹದತಪ್ಪಿ ಹೋದ ಮೇಲೆ ಬಂದೀತೇನು ಫಲ''[೮೩]

ಭೂಮಿಯ ಗುಣಧರ್ಮವನ್ನು ಗಮನಿಸಿ ಕೃಷಿ ಮಾಡಬೇಕೆಂದು ಕೃಷಿ ಶ್ರಮಿಕರಿಗೆ ತಿಳಿಹೇಳುತ್ತಾರೆ. ಭೂಮಿಯ ಬಗ್ಗೆ ರೈತನ ಬದುಕಿನ ಬಗ್ಗೆ ಅಪಾರ ಜ್ಞಾನ ಹೊಂದಿದ ಘನಮಠ ನಾಗಭೂಷಣ ಅವಧೂತರು ರೈತರಿಗೆ ಕೃಷಿ ಮಾಡುವಲ್ಲಿ ಜಲಮೂಲಗಳನ್ನು ಶೋಧಿಸುವ ಸಾವಯವ ಕೃಷಿಯಲ್ಲಿ ಸೂಕ್ತ ಸಲಹೆಯನ್ನಿತ್ತಿದ್ದಾರೆ.

"ಒಮ್ಮೆ ಬಳ್ಳಾರಿಯ ಸಕ್ಕರೆ ಕರಡೆಪ್ಪನವರ ಸತ್ಕಾರವನ್ನು ಸ್ವೀಕರಿಸಲು ಕುಂಟೋಜಿಯ ಗ್ರಾಮದ ಕಡೆಗೆ ಹೊರಟಾಗ ಇಂದ್ರಾಳೆಂಬ ಗ್ರಾಮ ಬರುತ್ತದೆ. ಅಲ್ಲಿ ಸುತ್ತಲೂ ಸವಳು ಭೂಮಿ. ಆ ಊರಿನಲ್ಲಿ ಸಿಹಿ ನೀರು ಇರದ ಕಾರಣ ಬಡ ಭಕ್ತರ ಮೊರೆಯನ್ನು ಕೇಳಿ ಕರುಣೆಯಿಂದ ಘನಮಠರು ಆ ಊರ ಸುತ್ತಲೆಲ್ಲಾ ತಿರುಗಾಡಿ ಸಿಹಿ ನೀರು ಬರುವ ಸ್ಥಳ ತೋರಿಸಿದರು. ಅಲ್ಲಿ ಭಾವಿ ತೋಡಲು ಸಿಹಿ ನೀರಿನ ಸೆಲೆ ಚಿಮ್ಮಿತು."[೮೪] ಅದೇ ರೀತಿ ಘನ ಮಠರು ಕುಂಟೋಜಿಯಲ್ಲಿ ಒಣ ನೆಲದಲ್ಲಿಯೇ ಬೀಜಗಳನ್ನು ಬಿತ್ತಿಸಿ ಬೆಳೆಯುವಂತೆ ಮಾಡಿದಂಥವರು.

"ಕಾಗೆ ಕರೆಯುತಾದೋ | ಆಕಾಶದ ಕಾಗೆ ಕರೆಯುತಾದೋ
ಕಾಗೆ ಕರೆಯುತಾದೋ | ಬೇಗನೆ ಬಾರೆಂದು
ನಾಗಭೂಷಣನ ಯೋಗಾಭ್ಯಾಸಕೆ | ಕಾಗೆ ಕರೆಯುತಾದೊ"[೮೫]

ಸಮಾಜದಲ್ಲಿ ಕಾಗೆ ಅಪಶಕುನ ಸಂಕೇತವಾಗಿದ್ದು. ತತ್ವಪದಕಾರರಲ್ಲಿ ಅದು ಅರಿವಿನ ಸಂಕೇತವಾಗಿ ಬಳಕೆಯಾಗುತ್ತದೆ. ಯೋಗಾಭ್ಯಾಸದ ಪ್ರೇರಣೆಯಾಗಿ ಅದಕ್ಕೊಂದು ಘನತೆಯನ್ನು ತಂದುಕೊಟ್ಟರು. ಇಡೀ ಪ್ರಕೃತಿಯ ಅನುಭವವನ್ನು ಲೋಕಾನುಭವವಾಗಿ ಆತ್ಮಾನುಭವವಾಗಿ ಸ್ವೀಕರಿಸಿದರು. ಸಮಾಜ ವಿಮುಖಿಯಾಗಿ ಬದುಕದೇ ತತ್ವಪದಕಾರರು ಸಮಾಜಮುಖಿಯಾಗಿ ನಿಸರ್ಗಮುಖಿಯಾಗಿ ಬದುಕಿದರು. ಸಾಧನೆ ಎನ್ನುವುದನ್ನು ಬರೀ ಕಾಡು ಮೇಡುಗಳಂಥಹ ಜನವಿಧುರ ನೆಲೆಗಳಲ್ಲಿ ಮಾಡದೆ ಭೂಮಿ, ಕೃಷಿ, ದನ-ಕರ, ಹಕ್ಕಿ-ಪಕ್ಷಿ, ವ್ಯಾಪಾರವಹಿವಾಟುಗಳಂತಹ ದಿನನಿತ್ಯದ ಜಂಜಾಟಗಳ ಮೂಲಕವೇ ಅವರು ಅವಧೂತರಾಗಿದ್ದು, ಆರೂಢರಾಗಿದ್ದು.

**ಸ್ತ್ರೀ ಅವಧೂತೆಯರು :** ಸ್ತ್ರೀ ಎಂದಾಗ ಅವಳ ವ್ಯಕ್ತಿತ್ವದ ಅವಳ ಮಾನಸಿಕ ಅಸ್ತಿತ್ವದ ಶಕ್ತಿಯನ್ನು ಗುರುತಿಸುವ ಪ್ರಶ್ನೆಗಳು ಎದುರಾಗುತ್ತವೆ. ಅವಧೂತ ಸ್ತ್ರೀಯ ವ್ಯಕ್ತಿತ್ವದ ವಿಕಾಸವನ್ನು ಈ ರೀತಿಯಾಗಿ ಗುರುತಿಸಬಹುದು.

೧. ಬೌದ್ಧಿಕ ಕ್ರಿಯೆಯಲ್ಲಿ ಪುರುಷ ಸಂತರಿಗಿಂತ ಕನಿಷ್ಟಳು ಎನ್ನುವ ವಿಷಯ ಒಂದೆಡೆಯಾದರೆ

೨. ಪಾರಮಾರ್ಥ ಪಥದಲ್ಲಿ ಅವಳ ಸ್ಥಾನ ಕಿರಿದು ಎನ್ನುವ ಸವಾಲಿನ ಪ್ರಶ್ನೆಯನ್ನು ಎದುರಿಸಬೇಕಾಗುತ್ತದೆ.

೩. ಸ್ತ್ರೀ ಸಂಸ್ಕೃತಿಯ ಅವಧೂತದ ಶೋಧವು ಪುರುಷಕೇಂದ್ರಿತ ಪ್ರಜ್ಞೆಗೆ ಸವಾಲಾದರೂ, ಇಲ್ಲಿಯ ಭಿನ್ನ ವೈಶಿಷ್ಟ್ಯಗಳು ಸ್ವತಂತ್ರತೆಯನ್ನು ಬಿಂಬಿಸುತ್ತವೆ ಎಂಬುದು ಅಷ್ಟೇ ಸತ್ಯವಾಗಿದೆ. ಅವಧೂತೆಯಾದ ಹನುಮಂತವ್ವನನ್ನು ಕೇಂದ್ರವಾಗಿರಿಸಿಕೊಂಡು ಇಲ್ಲಿ ಚರ್ಚಿಸಲಾಗುತ್ತದೆ.

ಸ್ತ್ರೀಯನ್ನು ಯೋಗಿನಿಯೆಂದು ಗುರುತಿಸಲಾಗಿದೆ. ಕಾರಣ ಅಕ್ಕಮಹಾದೇವಿಯು ಯೋಗಿನಿಯಾಗಲು ಪುರುಷನಂತೆ ಬೆಟ್ಟ, ಗುಡ್ಡ, ಕಾಡನ್ನು ತಿರುಗಿ ಶ್ರೀಶೈಲ ಸೇರಿದ ನಂತರ ಪುರುಷ ಶರಣರಷ್ಟೇ

ಪ್ರತಿಭಾನ್ವಿತಳಾಗಿ ಹೊರಹೊಮ್ಮಿದ್ದನ್ನು ಇಲ್ಲಿ ಗಮನಿಸಬಹುದು. ಮುಖ್ಯವಾಗಿ ದೈವತ್ವದ ಸಾಧನೆಗಾಗಿ ಇವರಿಗೆ ಭದ್ರವಾದ ಸ್ಥಾನ ದೊರಕಬೇಕಾದರೆ ಅವಳು ಯೋಗಿನಿಯಾಗಿರಬೇಕು. ಲೋಕದಲ್ಲಿ ಅನ್ಯಾಯ, ಅನೀತಿ ಹೆಚ್ಚಾದಾಗ ಲೋಕೋದ್ಧಾರಕ್ಕಾಗಿ ಸಿದ್ಧಳಾಗಬೇಕು. ತನ್ನ ಬದುಕಿನ ಅನುಭವವನ್ನು ಸ್ತ್ರೀಯಂತೆ ನೋಡದ ಸೈದ್ಧಾಂತಿಕ ಅವಧೂತೆಯಾಗಿ ಪರಶಕ್ತಿಯಂತೆ ನಿರೂಪಿಸಬೇಕು. ಸ್ತ್ರೀ ಅಸ್ಪೃಶ್ಯಳೆಂಬ ಅಂಶ ದಟ್ಟವಾಗಿರುವದು ಅವಳ ಋತುಚಕ್ರ ಕ್ರಿಯೆಯಿಂದಾಗಿ ಋತುಚಕ್ರ ಕ್ರಿಯೆ ನಿಂತ ನಂತರದ ಸ್ತ್ರೀಯರು ಯೋಗದಲ್ಲಿ ಬಲಿಷ್ಟರಾದ ಸಂದರ್ಭಗಳುಂಟು. ಇದಕ್ಕೆ ಸಜ್ಜಲ ಗುಡ್ಡದ ಶರಣಮ್ಮ, ಹನುಮಂತವ್ವರ ಜೀವನವು ಒಳ್ಳೆಯ ಉದಾಹರಣೆಯಾಗಿದೆ.

ಸಜ್ಜಲ ಗುಡ್ಡದ ಶರಣಮ್ಮ ಕನ್ಯೆಯಾಗಿಯೇ ವಿರಾಗಿ ಜೀವನವನ್ನು ಸ್ವೀಕರಿಸಿ ನಂತರ ಅವಧೂತೆಯಾಗಿ ಕೊನೆಯಾದರು. ಹನುಮಂತವ್ವ ವಿವಾಹವಾದರೂ, ಪತಿಯನ್ನು ತ್ಯಜಿಸಿ ನಂತರ ಅವಧೂತೆ ಎನಿಸಿಕೊಂಡಳು. ಮುಂದೆ ಭೀಮಾವಧೂತರ ಶಿಷ್ಯಳಾಗಿ ಹನುಮಂತಾವಧೂತೆಯೆಂದು ಗುರುತಿಸಿಕೊಂಡಳು.

ಹನುಮಂತವ್ವನ ಹಾಡುಗಳು ತುಂಬಾ ವಿಚಾರಪೂರ್ಣ ಸಂಗತಿಗಳನ್ನು ಹೇಳುತ್ತವೆ. 'ತಾಳಿಹರಕೊಂಡ ಎನಗಂಡ ಅತ್ತಿಗೆ, ಭಾವ ಮೈದುನರು ಮುಂದೆ ಏನಂಥ ಬರಲಿ ಈ ಊರಿಗೆ' ಎಂದು 'ವರಗಳ ಬೇಡಿ ಮಕ್ಕಳಿರಾ', ಎನ್ನುವ ಮಾತುಗಳು ಗಮನಿಸುವಂಥವು.

"೧೯ನೇ ಶತಮಾನದ ಕೊನೆಯ ಭಾಗದಲ್ಲಿ ಮದುವೆಗೆ ಸಂಬಂಧಪಟ್ಟ ಸಂಪ್ರದಾಯಗಳು ಅತ್ಯಂತ ಬಿಗಿಯಾಗಿದ್ದು ಸ್ತ್ರೀ ಪುರುಷರ ನಡುವೆ ಸಾಮಾಜಿಕ ಒಡನಾಟವು ಮೇಲ್ಜಾತಿಯವರಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ. ಹೆಣ್ಣು ಮಕ್ಕಳನ್ನು ಮೈನೆರೆಯುವುದಕ್ಕೆ ಮುಂಚೆಯೇ ಮದುವೆ ಮಾಡುತ್ತಿದ್ದರಿಂದ"[೧೯] ಸ್ವತಂತ್ರ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಅಸಮರ್ಥಳಾಗಿರುತ್ತಿದ್ದಳು.

"ಮಡದಿ ಮಕ್ಕಳಿಗಾಗಿ | ಕಡೆ ತನಕ ದುಡಿದು
ಮುದಿಕೋಣನಂದದಿ | ಪರಿತಪಿಸುತ
ಪಾಮರ ತನದಿಂದ | ಪರತತ್ವವನ್ನು ಮರೆತು
ಶ್ವಾಂತೆನಂರ ಬಳಲುತ ನೀನು|"[೨೦]

ಅಜ್ಞಾನಿಯಾದ ಈ ಜೀವವು ಮುದಿಕೋಣವಾಗಿದೆ. ಆದ್ದರಿಂದ ನಾಯಿಯಂತೆ ಬದುಕುತ್ತಿದೆ. ಅದುಬಿಟ್ಟು ಪಾರಮಾರ್ಥಿಕ ಚಿಂತನೆಗೆ ಓಗೊಡು ಪರತತ್ವವನ್ನು ತಿಳಿದು ಪರಿಪಕ್ವವಾಗಬೇಕು ಎನ್ನುವ ಮಾತನ್ನು ನೋಡಬಹುದು.

**ಗದ್ದುಗೆ ಪೂಜೆ :** ೧. ಅವಧೂತರ ಗದ್ದುಗೆ ಪೂಜೆಗೆ ಪಾರಮಾರ್ಥಿಕ ಕ್ಷೇತ್ರದಲ್ಲಿ ಪ್ರಮುಖ ಸ್ಥಾನ ಉಂಟು. ೨. ಕಾರಣೀಕ ಪುರುಷರ ಗದ್ದುಗೆಯನ್ನು ಪೂಜಿಸಿದಾಗ ಮಳೆ ಬರುವುದೆಂಬ ನಂಬಿಕೆ ಜನಪದರಲ್ಲಿದೆ.

ಈ ಎರಡು ವಿಚಾರಗಳು ಪ್ರಾದೇಶಿಕ ವೈಶಿಷ್ಟ್ಯದಿಂದ ಕೂಡಿದ್ದಾಗಿವೆ. ಭಕ್ತರು ಶ್ರದ್ಧೆಯಿಂದ ಅವಧೂತರ ಗದ್ದುಗೆಗೆ ನಡೆದುಕೊಳ್ಳುವುದು ಅವರ ಅಸ್ಪಷ್ಟ ಮನಸ್ಸಿಗೆ ಪರಿಹಾರ ಕಾಣುವುದಾಗಿದೆ. ತತ್ವಪದಕಾರನು ಕಂಡ ಗದ್ದುಗೆ ಪೂಜೆ ಈ ತೆರನಾಗಿದೆ.

> "ದೇಹದ ಗುಡಿ ತಂಗಿ | ಭಾವದ ಗದ್ದುಗೆ
> ಸೋಹಂ ಎನಿಪ ದೇವರಲ್ಲಿ | ತೋರಿದ ಸತ್ಯದೇವರ
> ಕುರುಹ ಎನ್ನೊಳಗೆ ದೇಹದೆಚ್ಚರವು ಇನಿತಿಲ್ಲವಾಗಿ
> ದೇಹ ನಾನೆಂಬ ಅರಿಕೆಯಿಲ್ಲದೆ ಹೋಗಿ | ಸೋಹಂ
> ಇಂತೆಂಬ ಸುಖದೊಳುದ್ಯೋಗಿ | ದೇಹ ತೂಗುತಲಿರ್ಪ
> ಭೋಗಿ"[೮೭]

ವಚನಕಾರರು ದೇಹದ ಕ್ರಿಯೆಗೆ ಮೌಲಿಕ ನೆಲೆಯನ್ನು ರೂಪಿಸಿದರು. ಶರಣರೊಂದಿಗಿದ್ದ ಆತ್ಮೀಯ ಸಂಬಂಧವನ್ನು ದೇಹದ ಗುಡಿ, ಭಾವದ ಗದ್ದುಗೆ ಎಂದು ಹೇಳುತ್ತಾ ಪ್ರತಿಮೆಯ ಮೂಲಕ ವಿಸ್ತರಿಸುತ್ತಾನೆ. 'ಅರಗಿನ ದೇಗುಲದಲ್ಲಿ ಒಂದು ಉರಿಯ ಲಿಂಗವ ಕಂಡೆ' ಎಂಬ ಅಲ್ಲಮ ಪ್ರಭುವಿನ ಮಾತು ಇದೇ ಅರ್ಥವನ್ನು ಕೊಡುತ್ತದೆ. ನನ್ನದೆಂಬ ಈ ದೇಹದ ವ್ಯಾಮೋಹ ಬಿಡಬೇಕೆಂದು ಸ್ಪಷ್ಟಪಡಿಸುತ್ತಾನೆ. ಗುರುಕರುಣಿಸಿದ ಮೋಕ್ಷದ ನಿದ್ದೆಯಲ್ಲಿ ಈ ದೇಹ ತೂಗುತ್ತಿದೆ. ಪಂಚಭೂತಗಳಲ್ಲಿ ಲೀನವಾದ ಈ ದೇಹಕ್ಕೆ ಗದ್ದುಗೆಯೆಂಬ ಕೃತಕತೆ ಏಕೆ ಬೇಕೆಂದು ಗದ್ದುಗೆಯ ವ್ಯವಸ್ಥೆಯನ್ನು ಧಿಕ್ಕರಿಸುತ್ತಾನೆ. ಇಂದು ಮರಣ ಹೊಂದಿದ ಅವಧೂತರ ಗದ್ದುಗೆಯನ್ನು ಶಾಸ್ತ್ರೋಕ್ತವಾಗಿ ಪೂಜೆ ಮಾಡುತ್ತಾರೆ. ಏಕೆಂದರೆ ಮಣ್ಣಿನಲ್ಲಿ ಹೂಳಿದ ದೇಹವು ಮತ್ತೆ ಚೈತನ್ಯ ಪಡೆಯುತ್ತದೆಂಬ ನಂಬಿಕೆ ನಮ್ಮ ಸಮಾಜದಲ್ಲಿದೆ. ಭೂಮಿಗೆ ಫಲಕೊಡುವ ಶಕ್ತಿಯಿರುವುದರಿಂದ ಜೀವಿಯು ಮತ್ತೆ ಹುಟ್ಟುವ ನಂಬಿಕೆ ಗದ್ದುಗೆ ಪೂಜೆಯ ಹಿಂದಿನ ಉದ್ದೇಶವಾಗಿದೆ. ಘನಮಠಾರ್ಯರಂಥ ಅವಧೂತರನ್ನು ಜನರು ಅವರು ಬದುಕಿರುವಾಗಲೇ ದೈವೀಶ್ರದ್ಧೆಯಿಂದ ಪೂಜಿಸಿದರು. ಘನಮಠಾರ್ಯರು ನಾನು ಸತ್ತನಂತರ ನನ್ನ ಗದ್ದುಗೆಯನ್ನು ಕಟ್ಟಬೇಡಿ ಎಂದು ಹೇಳಿದರೂ ಭಕ್ತರು ಗದ್ದುಗೆ ನಿರ್ಮಾಣ ಮಾಡಿದರು.

ಗದ್ದುಗೆಯ ಕುರುಹಿನ ನಿರ್ಮಾಣಕ್ಕೆ ತತ್ವಪದಕಾರರು ಪ್ರತಿರೋಧ ಒಡ್ಡಿದ ಸಂಗತಿಗಳನ್ನು ಅವರ ಜೀವನದಲ್ಲಿ ಕಾಣುತ್ತೇವೆ. "ಕೂಡಲೂರು ಬಸವಲಿಂಗಪ್ಪ ತನ್ನ ಶಿಷ್ಯರಲ್ಲಿ ಅರಿಕೆ ಮಾಡಿಕೊಳ್ಳುತ್ತಾನೆ. ನಾನು ತೀರಿಕೊಂಡ ಮೇಲೆ ಈ ದೇಹವನ್ನು ಮಣ್ಣಲ್ಲಿ ಹೂಳಬೇಡಿರಿ. ನನ್ನ ದೇಹ ಇತರರಿಗೂ

ಉಪಯೋಗವಾಗಲಿ ಅದಕ್ಕಾಗಿ ಈ ದೇಹವನ್ನು ಕಡಿದು ಊರಿನ ಸುತ್ತ ಚೆಲ್ಲಿರಿ, ನಾಯಿ, ನರಿ, ಹದ್ದುಗಳು ನನ್ನ ದೇಹವನ್ನು ತಿನ್ನಲಿ ಎಂದು ತಮ್ಮ ಭಕ್ತರಿಗೆ ಹೇಳಿದರು. ಅನಂತರ ಬಸವಲಿಂಗಪ್ಪನವರು ತೀರಿಕೊಂಡ ಮೇಲೆ ಊರ ಜನರು ಸೇರಿ ಇಷ್ಟು ದೊಡ್ಡ ಶರಣನನ್ನು ಹೇಗೆ ಕಡಿಯಬೇಕೆಂದು ಮಣ್ಣಲ್ಲಿ ಹೂಳಿಬಿಡುತ್ತಾರೆ. ಜನ ಊರಿಗೆ ಹೋದ ನಂತರ ಬಸವಲಿಂಗಪ್ಪನ ದೇಹ ಸಮಾಧಿಯ ಮೇಲೆ ಕುಳಿತಿತ್ತಂತೆ. ಇದನ್ನು ಒಬ್ಬ ದಲಿತನು ನೋಡಿ ಕೂಡಲೂರು ಬಸವಲಿಂಗಪ್ಪನವರ ದೇಹವನ್ನು ಕಡಿದು ಊರಿನ ನಾಲ್ಕು ದಿಕ್ಕಿಗೂ ಚೆಲ್ಲಿದನಂತೆ. ಅಂದರೆ ತತ್ವಪದಕಾರರು ಸಮಾಧಿ ವ್ಯವಸ್ಥೆಯನ್ನು ವಿರೋಧಿಸಿದ್ದರೆಂದು ಗುರುತಿಸಬಹುದು. ಇದಕ್ಕೆ ಕಾರಣವನ್ನು ಈ ರೀತಿಯಾಗಿ ಗುರುತಿಸಬಹುದು.''[೮೮]

ಕ್ರಿ.ಶ.೧೭ನೇ ಶತಮಾನದ ಸಂದರ್ಭದಲ್ಲಿ ಕಾಪಾಲಿಕರ ಆಚರಣೆಗಳು ಗುಪ್ತವಾಗಿ ನಡೆಯುತ್ತಿದ್ದಿರಬೇಕು. ಏಕೆಂದರೆ ಕಾಪಲಿಕರು ಶವಗಳ ನೆರವಿನಿಂದ ಪೂಜೆ ಸಲ್ಲಿಸಿ ತಮ್ಮ ತಂತ್ರವನ್ನು ಸಿದ್ಧಿಸಿಕೊಳ್ಳುತ್ತಿದ್ದಿರಬೇಕು. ಈ ದೇಹ ಒಬ್ಬ ಮಾಂತ್ರಿಕನ ಕೈಗೆ ಸಿಕ್ಕು ಸೂತ್ರದ ಗೊಂಬೆಯಾಗದೇ ನಾಯಿ, ನರಿಗಳ ಪಾಲಾಗಲಿ ಎಂಬ ಆಶೋತ್ತರ ಈ ತತ್ವಪದಕಾರನಲ್ಲಿದೆ. ತತ್ವಪದಕಾರ ತಾನು ಏನೆಂದು ಹೇಳುವುದಿಲ್ಲ. ತಾನು ತಾನಾಗಿಯೇ ಇರುವನು. ಏಕೆಂದರೆ ಖಾನಾಪುರದಲ್ಲಿ ಬಸವಲಿಂಗರ ಗದ್ದುಗೆಯ ಹಿಂದೆ ದೊಡ್ಡದಾದ ಕನ್ನಡಿಯನ್ನು ತೂಗು ಹಾಕಿದೆ. ಭಕ್ತರು ಗದ್ದುಗೆ ಪೂಜೆಗೆ ಹೋದಾಗ ಅವರ ಪ್ರತಿಬಿಂಬ ಕಾಣುವುದು. ಅಂದರೆ ತತ್ವಪದಕಾರ ಹೇಳುವ ಭಾವ ಪ್ರಧಾನ ಮುಗ್ಧ ಮನಸ್ಸಿನ ಗದ್ದುಗೆ ಇದೇ ಆಗಿರಬೇಕು.

.ಕಾರಣೀಕ ಪುರುಷರ ಗದ್ದುಗೆ ಪೂಜೆಯು ಹೈದ್ರಾಬಾದ್ ಕರ್ನಾಟಕದಲ್ಲಿ ಬಹು ಪ್ರಚಲಿತವಾದದ್ದು. ''ಮಳೆ, ಬೆಳೆಗಳನ್ನು ಕೇಳುವ ಹಲ ಕೆಲವು ಮಠಗಳುಂಟು. ಮಳೆ ಹೋದರೆ ಈ ಮಠಗಳಿಗೆ ನಡೆದುಕೊಳ್ಳುತ್ತಾರೆ. ಈ ಮಠದ ಸ್ವಾಮಿಗಳು ಮಳೆಯನ್ನು ತರುವೆವೆಂದು ಕರೆಗಂಬಳಿಯ ಕುಂಚಿಗೆ ಹೊತ್ತು, ಆವಿಗೆ ಮೆಟ್ಟಿ, ಕೈಯಲ್ಲಿ ಬೆತ್ತವನ್ನು ಹಿಡಿದು, ಕಣೆ, ದಿಮ್ಮ, ಮೊದಲಾದ ವಾದ್ಯಗಳನ್ನು ನುಡಿಸುತ್ತಾ ಮಳೆಯ ಭವಿಷ್ಯವನ್ನು ಜನಪದರಲ್ಲಿ ಸಾರುವುದನ್ನು ಮನಗಾಣಬಹುದು. ಬಬಲಾದಿ ಹಾಗೂ ಕೊಡೇಕಲ್ಲ ಮಠದ ಸ್ವಾಮಿಗಳು ಈಗಲೂ ಈ ರೀತಿಯಲ್ಲಿ ಮಳೆ, ಬೆಳೆಗಳನ್ನು ಸಾರುತ್ತಾರೆ. ಕರೆಕಂಬಳಿ ಗುರುಸಿದ್ದರೆಂದು ಈ ಸ್ವಾಮಿಗಳಿಗೆ ಕರೆಯುತ್ತಾರೆ.[೮೯]

''ಸತ್ತಮಾಂತ್ರಿಕ ವ್ಯಕ್ತಿ ಸಮಾದಿಯೊಳಗಿನಿಂದಲೇ ಮಳೆ ಬರದಂತೆ ಮಾಡುವ ಶಕ್ತಿಹೊಂದಿರುತ್ತಾನಂತೆ. ಅಂತಹ ಸಂದರ್ಭಗಳಲ್ಲಿ ಅವರ ಸಮಾಧಿ ಮೇಲಿರುವ ಕಲ್ಲನ್ನೋ ಅಥವಾ ತ್ರಿಶೂಲವನ್ನೋ ಸಾಮೂಹಿಕವಾಗಿ ಪೂಜಿಸಿದರೆ ಅವನ ಕಟ್ಟು ಸಡಿಲಿ ಮಳೆ ಬರುವುದಂತೆ ಇಂತಹ ಆಚರಣೆಗಳು ಜನಪದರಲ್ಲಿವೆ''[೯೦]

ರಾಯಚೂರಿನ ನಾರದಗಡ್ಡೆ ಕ್ಷೇತ್ರವು ಇಪ್ಪತ್ತು ಮೈಲಿ ದೂರದಲ್ಲಿದೆ. ಕೃಷ್ಣಾನದಿಯನ್ನು ದಾಟಿ ಹರಿಗೋಲಿನಲ್ಲಿ ಈ ನಡುಗಡ್ಡೆಗೆ ಹೋಗಬೇಕು. ಅಲ್ಲಿ ವೈರಾಗ್ಯರೂ, ಅವಧೂತರೂ ಆದಂಥ ಚೆನ್ನಬಸವಶಿವಯೋಗಿಗಳು ತಪಸ್ಸು ಮಾಡಿದ ಸ್ಥಳವಿದಾಗಿದ್ದು; ಅವರ ಗದ್ದುಗೆಯನ್ನು ಈಗಲೂ ಅಲ್ಲಿ ಕಾಣಬಹುದು. ಅನೇಕ ಭಕ್ತರು ಈ ಗದ್ದುಗೆಯ ಪೂಜೆಯನ್ನು ಭಯಭಕ್ತಿಯಿಂದ ಮಾಡುವರು. ಈ ನಡುಗಡ್ಡೆಗೆ ಗೆಡ್ಡೆತಾತ, ಗೆಡ್ಡೆ ಸ್ವಾಮಿಯೆಂದು ಜನರು ಕರೆಯುವರು. ಡಾ.ಜ.ಚ.ನಿ.ಯವರು, ನಾರದಗಡ್ಡೆಯ ಕ್ಷೇತ್ರವನ್ನು ಕುರಿತಾಗಿ ಹೀಗೆ ಹೇಳುತ್ತಾರೆ.

"ನಡೆ ತಂದು ನಾರದಗಡ್ಡೆ | ತಪೋಭೂಮಿಗೆ
ನಾರದ ಮುನೀಶ್ವರ | ಲಿಂಗವಿರುವ ತಾಣಕೆ
ಅಲ್ಲಿ ಮಂದಿರ ಮಂಟಪಗಳ | ನಿರ್ಮಿಸಿ
ನೆಲೆನಿಂತು | ಹೆಸರಾಂತ ಗಡ್ಡೆತಾತನೆನಿಸಿ"[೯]

ಇಂತಹ ಪ್ರಚಲಿತವಾದ ನಂಬಿಕೆಯನ್ನು ಕಂಡ ಈ ಭಾಗದ ಜನರು, ಧರ್ಮ ಕ್ಷೇತ್ರವೆಂದರೆ ನಾರದಗಡ್ಡೆ ಕ್ಷೇತ್ರವೆಂದು ತಿಳಿದಿದ್ದಾರೆ. ಈ ಕ್ಷೇತ್ರವನ್ನು ಅವಲೋಕಿಸಿದಾಗ ಅನೇಕ ಸಾಧು ಸಂತರು, ಸಿದ್ಧರು, ನಾಥ ಪರಂಪರೆಯವರು, ಇಲ್ಲಿ ಬಂದು ಯೋಗ ಮತ್ತು ಧ್ಯಾನ ಮಾಡುತ್ತಿದ್ದರೆಂಬ ಅಂಶಗಳನ್ನು ಈ ಮಠದ ಸ್ವಾಮಿಗಳು ಹೇಳುವರು. ಈ ಕುರಿತಾಗಿ ಇನ್ನೂ ಸಮಗ್ರವಾದ ಸಂಶೋಧನೆಯ ಅಗತ್ಯವಿದೆ.

ರಾಯಚೂರಿನಿಂದ ಮನ್ಸಲಾಪುರ ಐದು ಕಿ.ಮೀ ಅಂತರದಲ್ಲಿರುವ ಚಿಕ್ಕ ಗ್ರಾಮವಾಗಿದ್ದು. ಇಲ್ಲಿ ಸಿದ್ದಲಿಂಗೇಶ್ವರನ ಬೆಟ್ಟವಿದೆ. ಇಲ್ಲಿಯೇ ಸಿದ್ದಲಿಂಗೇಶ್ವರನ ದೇವಸ್ಥಾನವಿದೆ. ಈ ಬೆಟ್ಟವು ಹಿಂದೆ ಸಿದ್ದರ ವಾಸಸ್ಥಾನವಾಗಿತ್ತೆಂದು ಹಲವು ಆಧಾರಗಳ ಮೂಲಕ ಮಾಹಿತಿ ದೊರಕುತ್ತದೆ. "ರಾಯಚೂರು ನಗರದ ಸುತ್ತಮುತ್ತಲೂ ಜೈನ ಹಾಗೂ ಪಾಶುಪತಪಂಥದ ಸನ್ಯಾಸಿಗಳು ತಮ್ಮ ಯೋಗ ಸಾಧನೆಯ ಸಿದ್ಧಿಗಾಗಿ ಇಲ್ಲಿ ತಂಗಿದ್ದರು ಎನ್ನುವ ಮಾಹಿತಿಗೆ ಅನುಗುಣವಾಗಿ ಸಿದ್ದಲಿಂಗೇಶ್ವರ ದೇವಸ್ಥಾನದ ಬೆಟ್ಟದಲ್ಲಿ ಸಿದ್ದರು ವಾಸವಾಗಿ ಯೋಗಸಾಧನೆ ಮತ್ತು ರಸವಿದ್ಯೆಗಳನ್ನು ಬಲ್ಲವರಾಗಿದ್ದರೆಂಬುದನ್ನು ನಂಬಬಹುದಾಗಿದೆ. ಇದಕ್ಕೆ ಆಧಾರ ಈ ಪದ್ಯವು

"ಸಿದ್ದಸಾಧ್ಯರು ಮತ್ತೆ ಬುದ್ಧಿ ಜೀವಿಗಳೆಲ್ಲಾ
ಸದ್ದಿಲ್ಲದೆ ಬಂದು ನಿಂದಿಹರು ಏಳು
ಮಲ್ಲಯ್ಯನ ಗವಿಯ ಮುಂಬಾಗದೆಡೆ
ಬಲದ ಭಿಕ್ಷುಕ ಗಣ ಸಾಲಾಗಿ ಬಂದಿಹರು."[೨]

ರಾಯಚೂರಿನ ಮಂಚಾಲಿ ಗ್ರಾಮದ ರಾಘವೇಂದ್ರಸ್ವಾಮಿಯು ಜೀವಂತ ಸಮಾಧಿಯಾದ ಘಟನೆಯನ್ನು ಗುರುತಿಸಬಹುದು. ಮಂತ್ರಾಲಯದ ರಾಘವೇಂದ್ರಸ್ವಾಮಿಯೆಂದು ಹೇಳುವ ಹಿನ್ನೆಲೆಗೆ ಈ ಗ್ರಾಮದ ಸುತ್ತಮುತ್ತಲೂ ತುಳಸಿಯ ವೃಂದಾವನಗಳಿವೆ. ಈ ದಡದ ಮೇಲೆ ಅನೇಕ ದಾಸರು ತಂಗಿದ್ದರೆಂಬ ಮಾಹಿತಿ ದೊರಕುವುದರಿಂದ ಇಲ್ಲಿ ಅವಧೂತರು ವಾಸವಾಗಿದ್ದು ಧ್ಯಾನ ಮಾಡುತ್ತಿದ್ದರೆಂಬ ಹೇಳಿಕೆಗಳಿವೆ. ರಾಘವೇಂದ್ರ ಸ್ವಾಮಿಯ ವೃಂದಾವನವು ರಾಯರ ಗದ್ದುಗೆಯೇ ಆಗಿದೆ. ಭಾರತದ ಮೂಲೆ ಮೂಲೆಯಿಂದ ರಾಘವೇಂದ್ರಾವಧೂತರ ದರ್ಶನಕ್ಕೆ ಬರುವರು.

ಅನುಭಾವಿ ಪರಂಪರೆಯಲ್ಲಿ ದತ್ತಾತ್ರೇಯನ ಪರಿಪಾಲಕರಾದ ತತ್ವಪದಕಾರರು ದತ್ತಪಂಥದ ಅರ್ಥವನ್ನು ಹಿರಿದಾಗಿಸಿದ್ದಾರೆ. ಕಲ್ಲೂರು ಅಡಿವೇಂದ್ರರು, ವೆಂಕಟಾಪುರ ಖೇಮಣ್ಣ, ಗಬ್ಬೂರು ಮಾರ್ತಂಡಪ್ಪ, ಮಂಜರ್ಲ-ಖಾದರ ಸಾಬ್‌ರು ದತ್ತ ಪಂಥದ ಅನುಯಾಯಿಗಳಾಗಿದ್ದಾರೆ. ಭಾಗವತದ ಪ್ರಕಾರ ದತ್ತಾತ್ರೇಯನು ವಿಷ್ಣುವಿನ ಅವತಾರಗಳಲ್ಲಿ ಒಂದು. ಆದ್ದರಿಂದ ದತ್ತ ಸಂಘಟನೆಯನ್ನು ವಿಸ್ತರಿಸಿಕೊಳ್ಳುವಾಗ ಒಂದೆಡೆ ದ್ವೈತಸಿದ್ಧಾಂತದ ನಿರ್ಣಯವನ್ನು ಬಿತ್ತರಿಸುತ್ತದೆ. ಇನ್ನೊಂದೆಡೆ ಅದ್ವೈತ ನೆಲೆಯ ವಿಚಾರವನ್ನು ಅರಹುತ್ತದೆ.

ನಾಥಪಂಥದ ಇನ್ನೊಂದು ಶಾಖೆ ದತ್ತಪಂಥವಾಗಿದ್ದು ದತ್ತಾತ್ರೇಯನ ಅವತಾರಿಗಳು ರಾಯಚೂರನ್ನು ಕೇಂದ್ರಸ್ಥಾನವನ್ನಾಗಿ ಮಾಡಿಕೊಂಡು ಅವಧೂತರಾಗಿದ್ದರೆಂಬುದು ಅಷ್ಟೇ ಗಮನಾರ್ಹವಾದದ್ದು. ಬೀದರ ಜಿಲ್ಲೆಯ ಹುಮನಾಬಾದಿನ ಮಾಣಿಕಪ್ರಭು ಮುಖ್ಯರು. ಇವರು ರಾಯಚೂರು ಭಾಗದಲ್ಲಿ ಅವಧೂತ ಪರಂಪರೆಯನ್ನು ಸ್ವತಂತ್ರವಾಗಿ ಬೆಳೆಸಲು ಶ್ರಮಿಸಿದವರು.

ರಾಯಚೂರಿನಲ್ಲಿ ದತ್ತಪಂಥದ ಮಾಣಿಕ ಪ್ರಭುವಿನ ದೇವಸ್ಥಾನವು ಬಹುಪುರಾತನವಾಗಿದ್ದು, ನಾಗರಿಕ ಜನರ ಸಂಪರ್ಕದಿಂದ ಊರ ಹೊರಗಿದೆ. ದೇವಾಲಯದ ಹಿಂದೆ ಬೆಟ್ಟಗುಡ್ಡಗಳಿದ್ದು, ಅನೇಕ ಸಾಧು ಸಂತರು ಇಲ್ಲಿ ತಂಗುತ್ತಿದ್ದರು. ಇವರು ಯೋಗ ಮತ್ತು ಧ್ಯಾನದಲ್ಲಿ ಸ್ವತಂತ್ರ ಜೀವನ ಕಳೆದರೆಂಬುದಕ್ಕೆ ಮಾಣಿಕಪ್ರಭುವಿನ ಗದ್ದುಗೆಯ ಸುತ್ತಲೂ ಹಲವಾರು ನಿದರ್ಶನಗಳು ದೊರಕುತ್ತವೆ.

ಕೃಷ್ಣಾನದಿಯ ದಂಡೆಯ ಮೇಲೆ ಕುರುಮ ಗಡ್ಡೆಗ್ರಾಮದಲ್ಲಿ ದತ್ತಾತ್ರೇಯನ ದೇವಸ್ಥಾನವಿದೆ. ಇದು ದತ್ತ ಸಂಸ್ಕೃತಿಗೆ ತನ್ನದೇ ಆದ ವಿಶಿಷ್ಟ ಕೊಡುಗೆ ನೀಡಿದೆ. ದತ್ತಾತ್ರೇಯನ ಅವತಾರಿಗಳು ಇಲ್ಲಿದ್ದರೆಂಬುದಕ್ಕೆ ನಿತ್ಯ ಪೂಜೆಗೊಳ್ಳುತ್ತಿರುವ ದತ್ತಾತ್ರೇಯನ ದೇವಸ್ಥಾನ ವೈದಿಕ ಧರ್ಮದ ಅಂಶವನ್ನು ಬಿಂಬಿಸುತ್ತದೆ. ನದಿ ದಡದ ಮೇಲಿರುವ ಈ ತಾಣವು ಪರಿಸರ ಆರಾಧಕರಿಗೆ ಕೈಬೀಸಿ ಕರೆಯುತ್ತದೆ. ಅವಧೂತರ ಭಕ್ತಿಯನ್ನು ಮುಂದು ಮಾಡುತ್ತದೆ. ಈ ಪ್ರಶಸ್ತವಾದ ಸ್ಥಳ ದತ್ತ ಶಾಖೆಯಾಗಿ ಪಾರಮಾರ್ಥಿಕತೆಯ ಅನನ್ಯತೆಯನ್ನು ಮುಂದು ಮಾಡುತ್ತದೆ.

ಜಿಲ್ಲೆಯ ಗೊಬ್ಬೂರಿನ ಗೂಗಲ್ಲು ಗ್ರಾಮದಲ್ಲಿ ಅಲ್ಲಮಪ್ರಭುವಿನ ದಾರ್ಶನಿಕ ಚಿಂತನೆಗಳು ನೆನಪಾಗುತ್ತವೆ. ಪ್ರಭುಯೋಗ ಮಾಡಿದ್ದರೆಂಬ ಕುರುಹು ಇಲ್ಲಿ ಕಂಡುಬರುತ್ತದೆ. ಕೃಷ್ಣಾನದಿಯ ದಂಡೆಯ ಮೇಲೆ ಪ್ರಭುವಿನ ಗುಹೆಯಿದ್ದು ಈಗಲೂ ಈ ಭಾಗದ ಭಕ್ತರು ಯೋಗದ ಗುಹೆಗೆ ಭಕ್ತಿಯಿಂದ ನಡೆದುಕೊಳ್ಳುತ್ತಾರೆ.

ಈ ಮೇಲಿನ ಘಟನೆಯಿಂದ ತಿಳಿಯುವುದೇನೆಂದರೆ ಅಲ್ಲಮಪ್ರಭು ಈ ಪ್ರದೇಶದಲ್ಲಿ ತನ್ನ ಆಧ್ಯಾತ್ಮಿಕ ಸಂಘಟನೆಯನ್ನು ವಿಸ್ತರಿಸಿದನೆಂದು ಹೇಳಬೇಕಾಗುತ್ತದೆ. ಮತ್ತು ಈ ಭಾಗದ ಅವಧೂತರು ಪವಾಡಗಳಿಂದ ಯೋಗದಿಂದ ಖ್ಯಾತರಾಗಿ ಜನಪರ ನಂಬಿಕೆ ಮತ್ತು ಆಚರಣೆಗಳಿಗೆ ಸ್ಪಂಧಿಸಿದ್ದಾರೆ.

## ಕೊಡೇಕಲ್ ಪರಂಪರೆ ಮತ್ತು ತತ್ವಪದಕಾರರು

ತತ್ವಪದ ಸಂಪ್ರದಾಯದಲ್ಲಿ ಕೊಡೆಕಲ್ಲು ಸಂಪ್ರದಾಯಕ್ಕೆ ವಿಶೇಷ ಮೆರಗು ಇದೆ. ಇವರ ಪ್ರಭಾವ ರಾಯಚೂರು ಜಿಲ್ಲಾ ತತ್ವಪದಕಾರರ ಮೇಲಾಗಿದೆ. ಡಾ.ರಹಮತ್ ತರೀಕೇರಿಯವರು ಹೇಳುವಂತೆ "ಕೊಡೇಕಲ್ ಸಂಪ್ರದಾಯದವರು ಲಿಂಗವಿಲ್ಲದ ಬೋಳು ಜಂಗಮರೆಂದು ಹೇಳುತ್ತಾರೆ."[೯೩] ಕಾರಣ ಈ ನೆಲದ ಸಂಸ್ಕೃತಿಯ ಪ್ರಭಾವ ಮತ್ತು ಹಿಂದೂ ಮುಸ್ಲಿಂ ಜನಾಂಗದ ಒತ್ತಾಸೆಯೂ ಇದರ ಮೇಲೆ ಆಗಿದೆಯೆಂದು ಹೇಳಬಹುದು. ಮುಖ್ಯವಾಗಿ ಇವರು ಸೂಫಿ ಪರಂಪರೆಯನ್ನು ಮೈಗೂಡಿಸಿಕೊಂಡು, ಇಸ್ಲಾಂ ಧಾರ್ಮಿಕ ಸಂಪ್ರದಾಯದ ಅನುಭವಗಳಿಗೆ ತಮ್ಮನ್ನು ತೆರೆದುಕೊಂಡಿದ್ದಾರೆ. ಕೊಡೇಕಲ್ ಸಂಪ್ರದಾಯವು ಜನಮನದಲ್ಲಿ ಬೇರೂರಿದಷ್ಟು ಮತ್ತಾವ ಸಂಪ್ರದಾಯಗಳೂ ಬೀರಲಿಲ್ಲ.

"ಶಿಲೆಯ ಶೂಲರು ಆಕಾರವನೆ ಜರಿದ ಅದ್ವೈತರು" ಕೊಡೇಕಲ್‌ರವರ ಇಂಥ ಮಾತುಗಳು"[೯೪] ಆರೂಢ ಮಾರ್ಗಕ್ಕೆ ಸಂಬಂಧಿಸಿದ ಆಶಯಗಳಾಗಿವೆ ಎಂದು ಹೇಳಬಹುದು. ಯೋಗ ಮಾರ್ಗಕ್ಕೆ ನೇರವಾಗಿ ಅನ್ವಯವಾಗುತ್ತವೆ.

"ದ್ವೈತದ ಶಿವ ಜೀವರು | ಬೇರೆಂಬ
ಭಾವದ ಮಾತು | ಮಾತು ಮಾತಿಗೂ
ಶಬ್ದ ಸೂತಕವೆಂಬೋ | ಪಾತಕದೊಳು
ಮುಳುಗಿ ನಾ ಕೆಟ್ಟೆನೋ|" [೯೫]

ಇಂಥ ದಾರ್ಶನಿಕ ವ್ಯಾಖ್ಯೆಗಳು ತತ್ವಪದಕಾರರ, ದ್ವೈತ, ಅದ್ವೈತದ ಅರ್ಥಪೂರ್ಣವಾದಗಳನ್ನು ಮಂಡಿಸುತ್ತವೆ. ಶಬ್ದಸೂಚಕವೆಂಬ ಮಾತು ಅಲ್ಲಮನ ಭಾಷೆಯ ನೆನೆಪು ತರುತ್ತದೆ. ಶಬ್ದ ಸೂತಕವೆನ್ನುವುದು ನಡತೆಯಲ್ಲಿನ ನಿರುಪಯುಕ್ತತೆಯನ್ನು ತೋರಿಸುವಂಥದ್ದು ನಡೆ-ನುಡಿ ಸೂತಕ ರಹಿತವಾಗಿರಬೇಕು. ಮಾತು ಮುತ್ತಾಗಬೇಕು. ಬದುಕು ನಿರರ್ಥಕವಾಗಬಾರದೆನ್ನುವ ಭಾನ ಇಲ್ಲಿದೆ.

ಕೊಡೇಕಲ್ ಪರಂಪರೆಯವರು ಇಷ್ಟಲಿಂಗವನ್ನು ತೊರೆದು ಪ್ರಾಣಲಿಂಗ ಸ್ಥಾಪನೆ ಮಾಡಿದಂಥವರು. ಅಂದರೆ ಅಂದಿನ ಕಾಲಘಟ್ಟದಲ್ಲಿ ಸ್ಥಾವರ ಲಿಂಗದ ವಿರುದ್ಧ ದಂಗೆ ಎದ್ದವರೆಂದಾಗುತ್ತದೆ. ಅಂಗದ ಮೇಲೆ ಕಟ್ಟಿದ ಕಲ್ಲು ಲಿಂಗವಾಗುವುದಿಲ್ಲ ಅಂಗವೇ ಲಿಂಗವಾಗಬೇಕು ಕಟೆದು ತಂದ ಕೊಂಡುತಂದ ಲಿಂಗಗಳು ಜಂಗಮ ಕಟ್ಟಿದ ಲಿಂಗಗಳೆಂದೂ ಅರಿಯುಳ್ಳಲಿಂಗಗಳಾಗಲಾರರು ಎಂದು ಗಟ್ಟಿಯಾಗಿ ಹೇಳುತ್ತಾರೆ. ಮಂಟೇಸ್ವಾಮಿ ಕಾವ್ಯದಲ್ಲಿ ಬರುವ ಹಾಗೆ

"ನೋಡಪಾ ಕಲ್ಲು ಸಿಕ್ಕದಂತಹ ಶರಣಮಾತ್ಮರೆ |
ಕಲ್ಲೇಲಿಂಗ ಅಂತ್ವೇಳಿ
ಆ ಬದಿವೊಳಗೆ ಕಲ್ಲುಸಿಕ್ಕವು
ಕಲ್ಲು ಎತ್ಕಂಡು ಲಿಂಗ ಅಂದ್ಕೊಂಡು
ಹೋಯ್ತಾವೊ"

ತಮ್ಮ ತಮ್ಮ ಕಂಡಿಕೆಗಳು ತಮ್ಮ ತಮ್ಮ ಅಂಗೈಗೆ ಬಂದು ಕೂತ್ಕೋಬೇಕು. ಅಂಥಂಥ ಲಿಂಗವಂತರು ಮಾತ್ರ ಆದಿ ಕಲ್ಯಾಣದಲ್ಲಿ ಸ್ಥಿರವಾಗಿ ಉಳಿದುಕೊಂಡರೆಂದು ಮಂಟೇಸ್ವಾಮಿ ಕಾವ್ಯ ಹೇಳುತ್ತದೆ."[೯೫] ಅಂದರೆ ಲಿಂಗವೆನ್ನುವುದು ಜಾತಿ ಸೂಚಕವಲ್ಲ, ಆತ್ಮ ಸಂಗಾತದ ಆರೂಢದ ನಿಷ್ಠೆಯನ್ನು ನೆನಪಿಸುತ್ತದೆ. ಮಂಟೇಸ್ವಾಮಿಯೂ ಕೊಡೇಕಲ್ ಬಸವಣ್ಣನ ಶಿಷ್ಯನೆಂಬುದು ಗಮನಾರ್ಹ.

ಡಾ.ಬಸವಲಿಂಗ ಸೊಪ್ಪಿಮಠರು ಹೇಳುವಂತೆ ಕೊಡೇಕಲ್ ಪೀಠಸ್ಥರು ಲಿಂಗವಿಲ್ಲದ ಜಂಗಮರಾಗಿದ್ದು, ಇವರು ವೀರಶೈವ ಧರ್ಮವನ್ನು ಅನುಕರಣೆ ಮಾಡುತ್ತಿದ್ದರೆಂಬುದಕ್ಕೆ ಈ ಜಂಗಮರಿಗೆ ಐಕ್ಯಸ್ಥಲ ಆರೂಢ ಮಠದವರೆಂಬ ನಾಮ ನಿರ್ದೇಶನವನ್ನು ಗುರುತಿಸಬಹುದು."[೯೬] ಆ ತತ್ವಪದಕಾರರು ಬಹುವಿಧ ಜ್ಞಾನ ಪರಂಪರೆಯ ಬೀಳಲುಗಳನ್ನು ಸಂಪ್ರದಾಯಗಳನ್ನು ಮುಂದು ಮಾಡಿದರು. ದತ್ತ ಮಠಗಳು, ಅಚಲ ಮಠಗಳು, ಇಂದು ಪ್ರತ್ಯೇಕ ಜ್ಞಾನ ಶಾಖೆಗಳಾಗಿ ಗುರುಮಠಗಳಾಗಿ ಸಮಾಜದಲ್ಲಿ ಗುರುಪರಂಪರೆಯನ್ನು ಬಿಂಬಿಸುವ ಮಠಗಳಾಗಿವೆ.

ಕೊಡೇಕಲ್ ಸಂಪ್ರದಾಯದಲ್ಲಿ ಬರುವ "ಖಾದರಲಿಂಗನ ವಂಶಜರು ಈಗಲೂ ಕಾಲಿಗೆ ಲಿಂಗವನ್ನು ಕಟ್ಟಿಕೊಳ್ಳುವ ಸಂಪ್ರದಾಯವಿದೆ. ಖಾದರಲಿಂಗನೆಂದರೆ ಯೋಗದ ಮೂಲಕ ಆತ್ಮಲಿಂಗವನ್ನು ಸಾಕ್ಷಾತ್ಕರಿಸಿಕೊಂಡವನು. ಇವು ಪ್ರಾಣಲಿಂಗಿಗಳಾದ ಅನುಭಾವಿಗಳಿಗೂ ಇಷ್ಟಲಿಂಗ ವಾದಿಗಳಾದ ಭಕ್ತರಿಗೂ ನಡೆದ ಸಂಘರ್ಷದ ಸಂಕೇತಗಳು. ಮುಂದೆ ಯೌಗಿಕ ಪಂಥಗಳಾಗಿ ಮತ್ತೆ ಚೈತನ್ಯ ಪಡೆದವೆಂಬುದು ಅಷ್ಟೇ ಗಮನಾರ್ಹವಾಗಿದೆ."[೯೭] ಈ ಸಂಪ್ರದಾಯದಲ್ಲಿ ಮುಖ್ಯವಾಗಿ ಕೆಳಗಿನ ಈ ಅಂಶಗಳನ್ನು ಕಾಣಬಹುದಾಗಿದೆ.

೧. ಇವರ ಆರೂಢತ್ವದ ಸಂಸ್ಕೃತಿಯಲ್ಲಿ ನಾಥರ ಅಂಶಗಳನ್ನು ಕಾಣಬಹುದಾಗಿದೆ. ಹಾಗೂ ಇವರು ರಸವಿದ್ಯೆಯನ್ನು ಬಲ್ಲಿದವರಾಗಿದ್ದರೆಂಬ ಅಂಶ ನಮ್ಮ ಚಿಂತನೆಗೆ ಹೊಸ ಸೂಕ್ಷ್ಮತೆಯನ್ನು ತಂದುಕೊಡುತ್ತದೆ.

೨. ಕೊಡೇಕಲ್ ಸಂಪ್ರದಾಯದ ವಿಶಿಷ್ಟತೆ ಕಾಲಜ್ಞಾನವನ್ನು ಮೌಖಿಕವಾಗಿ ಹೇಳುವ ಬಿರುದಾವಳಿಯಲ್ಲಿದೆ.

೩. ರಾಯಚೂರು ಜಿಲ್ಲೆಯ ತತ್ವಪದಕಾರರಿಗೆ ಕೊಡೇಕಲ್‌ನವರ ನೇರ ಪ್ರಭಾವ ಆಗಿರುವುದು ಕಾಲಜ್ಞಾನ ಭವಿಷ್ಯ ನುಡಿಯುವಲ್ಲಿ ಮತ್ತು ಕೆಲ ತಾಂತ್ರಿಕತೆಯ ಆಚರಣೆಯಲ್ಲಿ ಎಂದು ಸ್ಪಷ್ಟಪಡಿಸಬಹುದು.

> "ವಿರಕ್ತದ ಅಂಗಿ| ತೊಡಲಿ ಬೇಕೋ
> ತಮ್ಮ | ಗೀರ್ಗಂಧ ಹಚ್ಚಬೇಕೋ |
> ಮುರಗಿಯ ಮುಂಡಾಸು
> ಹುರಿ ಮಾಡಿ | ಸುತ್ತಿ ಗರಿಗರಿ ಚಕ್ರ
> ತಿರಿಗೇಳ ಬೇಕೋ | ಚುಂಗಿಗೆ ಮರುಳಾಗಿ
> ಮಂಗನಾಗ ಬೇಡ | ಲಿಂಗದ ವಿಚಾರ
> ತಿಳಿದಿರ ಬೇಕೋ|"[೯೮]

ಈ ಹಾಡಿನಲ್ಲಿ ಮೂರು ವಿಧದ ಅಂಶಗಳನ್ನು ಗುರುತಿಸಬಹುದು. ೧. ವಿರಕ್ತದ ಅಂಗಿ ೨. ಮುರುಗಿಯ ಮುಂಡಾಸು, ೩. ಗರಿಗರಿ ಚಕ್ರ. ಈ ಶಬ್ದಗಳು ಕೊಡೇಕಲ್ ಪರಂಪರೆಯ ಜೊತೆಗಿರುವ ಸಂಬಂಧವನ್ನು ಗುರುತಿಸಲು, ಆರೂಢತೆಯೊಂದಿಗಿರುವ ಆತ್ಮೀಯತೆಯನ್ನು ಕಾಣಲು ಬಹುಮುಖ್ಯ ಸಾಮಗ್ರಿಗಳಾಗಿವೆ.

ಅರಿತರೆ ಗುರುಕಾಯೆ, ಮರೆತರೆ ನರಕಾಯಗಳಂತಹ ಮಾತುಗಳು ಕೊಡೇಕಲ್ ವಾಕ್ಯದ ವಾಸ್ತವತೆಯನ್ನು ಹೇಳುತ್ತವೆ. ಇಡೀ ನರಕಾಯ ಪರಿಕಲ್ಪನಾತ್ಮಕವಾಗಿ ಬೆಳೆದು ಗುರುಕಾಯಕ್ಕೆ ದಾರಿ ಮಾಡಿಕೊಡುತ್ತದೆ. ಗುರುಕಾಯವು ಹಸ್ತಮಸ್ತಕ ಸಂಯೋಜನೆಯ ಮುಖಾಂತರ ಗುರು-ಶಿಷ್ಯ ಸಂಬಂಧವನ್ನು ಗಟ್ಟಿಗೊಳಿಸುವ ತತ್ವವಾಗುತ್ತದೆ. ಸ್ಥಿರ ಕಾಯವು ನಾಥರು ಹೇಳುವ ದೇಹಕ್ಕೆ ಸಂಬಂಧಿಸಿದ್ದಾಗಿದೆ. ಯೋಗದಲ್ಲಿ ದೇಹವನ್ನು ವಜ್ರವಾಗಿಸಿ ಸ್ಥಿರತ್ವ ಹೊಂದುವುದಾಗಿದೆ. ತತ್ವಪದಕಾರರಲ್ಲಿ ಈ ತೆರನಾದ ಸಂಗತಿಗಳನ್ನು ಕಾಣಬಹುದು.

> "ಘಟಮಠವಳಿಯಲು | ಒಂದೆ ಬಯಲದು
> ದಿಟವಾಗಿರುವುದೆಂದು | ಘಟಿಸಿರುವ
> ಘಟಭಾವವನಳಿಯನಿ | ನಟಿಸುವ ಮಂಗ
> ಪುರವರನಿಟಿಲಾಕ್ಷನು |"[೯೯]

ಹಂಡಿಭಿಕ್ಷೆ ಕೊಡೇಕಲ್ ಸಂಪ್ರದಾಯದಲ್ಲಿದೆ. ಆರೂಢರಿಗೆ ಹಂಡಿಯೆಂದು ಹೇಳಲಾಗುತ್ತದೆ. ಜೋಳಿಗೆಯನ್ನು ಹಿಡಿದು ಭಿಕ್ಷೆ ಬೇಡುವುದೂ ಕೂಡ ಇವರಲ್ಲಿದೆ. ತಮ್ಮ ಸೇವಾ ಮನೋಭಾವವನ್ನು ಸಹಜವೆನ್ನುವಂತೆ ಸ್ವೀಕರಿಸುತ್ತಾರೆ. ಇಂತಹ ಸಾಂಪ್ರದಾಯಿಕ ನೆಲೆಗಳು ಆರೂಢಕ್ಕೆ ಶಕ್ತಿಯೊದಗಿಸುವ ಸಾಂಕೇತಿಕ ನೆಲೆಗಳೆಂದು ಹೇಳಬಹುದು. ಭಿಕ್ಷೆಯಂಥಾ ಅರ್ಥಕ್ಕೆ ತತ್ವಪದಕಾರರಲ್ಲಿ ಒಂದು ಪದ್ಯ ಉಂಟು.

"ಯೋಗಿಗಳಿಗೆ ಲೀಲಾಪಥವಿದು | ಓಂ ಶಿವಾ ಶಿವಾ
ಯೋಗಾನಂದ | ಪಾದ ಸುಖವಿದು"[೧೦೦]

ತತ್ವಪದಕಾರರು ಬಳಸಿದ ಲೀಲಾಪಥಕ್ಕೆ ಭಿಕ್ಷಾ ಸಂಪ್ರದಾಯಕ್ಕೆ ವ್ಯತ್ಯಾಸವನ್ನು ಗುರುತಿಸಬಹುದು. ಇವರ ಹಾಡಿನಲ್ಲಿ ಮಾತಿಗಿಂತ ಕಾರ್ಯಲೇಸೆನ್ನುವುದನ್ನು ಕಾಣಬಹುದು. ಇಂತಹ ಧಾರ್ಮಿಕ ಪರಿಕಲ್ಪನೆಗಳು ಪ್ರಾದೇಶಿಕ ಸಂಸ್ಕೃತಿಯಡಿಯಲ್ಲಿ ಭಿನ್ನವಾಗಿವೆ. ಜಾತ್ರೆ ಮತ್ತು ಉತ್ಸವಗಳು ಕೊಡೇಕಲ್ ಸಂಸ್ಕೃತಿಯಲ್ಲಿ ಆರಾಧನಾ ಸಂಸ್ಕೃತಿಯಾಗಿ ಬೆಳೆದಿದೆ. ಇವು ಜನಸಮುದಾಯವನ್ನು ಭಕ್ತಿಯ ಬದುಕಿನೆಡೆಗೆ ಉತ್ಸಾಹಿತರನ್ನಾಗಿ ಕೊಂಡೊಯ್ಯುವಂತೆ ಮಾಡುತ್ತವೆ.

ನಮ್ಮ ಆರೂಢ ನಿಷ್ಠ ಗ್ರಹಿಕೆಗಳು ಧಾರ್ಮಿಕ ಸಂಸ್ಕೃತಿಯಿಂದ ಬಂದವುಗಳಾಗಿದ್ದರಿಂದ ಕೊಡೇಕಲ್ ಸಂಸ್ಕೃತಿಗಿಂತ ಭಿನ್ನವಾಗಿ ವಿಶಿಷ್ಟಾಂಶಗಳನ್ನು ಪ್ರಕಟಿಸುತ್ತವೆ.

೧. ಆಧ್ಯಾತ್ಮಿಕ ಸಾಹಿತ್ಯದಲ್ಲಿ ಆರೂಢ ಅವಧೂತ ಧ್ವನಿಗಳು, ಇದೀಗ ವಿಮರ್ಶೆಗೆ ಒಳಗಾಗುತ್ತಿವೆ. ಸಾಧಕ ಸಾಮೂಹಿಕ ಆಚರಣೆಯು ಇಂದು ಮುಕ್ತ ಅವಕಾಶಗಳನ್ನು ಬಯಸುತ್ತದೆ.

೨. ನಾಥರನ್ನು ಕೇಂದ್ರವಾಗಿರಿಸಿಕೊಂಡು ಕರ್ನಾಟಕದ ಎಲ್ಲಾ ಅವಧೂತರ ಪರಿಕಲ್ಪನೆಯನ್ನು ಆರೂಢರ ಸ್ವಭಾವಗಳನ್ನು ತತ್ವಪದಕಾರರ ಜೊತೆಗೆ ತೌಲನಿಕವಾಗಿ ಕಾಣುವ ಕಿರು ಪ್ರಯತ್ನವಿದಾಗಿದೆ.

**ಅಡಿಟಿಪ್ಪಣಿಗಳು**

೧. ಕುಮಾರ ಡಿ.ಎಸ್.(ಸಂ), ೧೯೯೪, **ಕೂಡಲೂರು ಬಸವಲಿಂಗರ ತತ್ವಪದಗಳು,** ಪದ್ಯ ೪, ಭಾಗ ೨, ಪು.೭

೨. ಅದೇ,

೩. ವೀರೇಶ ಬಡಿಗೇರ, ೨೦೦೧, **ಬಾಚಿಕಾಯಕದ ಬಸವಯ್ಯ ವೃತ್ತಿ ಮತ್ತು ತತ್ವ ಮೀಮಾಂಸೆ,** ಪು.೩೫

೪. ತಪಸ್ವಿಯೋಗಿ ರಾಜೇಂದ್ರ ಶಿವಾಚಾರ್ಯ ಹಿರೇಮಠ, ೧೯೮೨, **ಕೈವಲ್ಯ ಕೈದೀವಿಗೆ**

೫. ಅಮರೇಶ ನುಗಡೋಣಿ, ೧೯೯೯, **ನುಡಿವ ಬೆಡಗು,** ಪು.೩೨

೬. ವಡಿಕೆ ತಾತಪ್ಪಯ್ಯ, ೧೯೫೭, **ಅಮೃತಶಿಖಾಮಣಿ,** ಪು.೧೪

೭. ಲಕ್ಷ್ಮಣದಾಸರ ಪದಗಳ ಸಂಗ್ರಹ ಅಪ್ರಕಟಿತ

೮. ಮಂದಕಲ್ ಭೀಮಲಿಂಗಪ್ಪನವರ ಪದಗಳ ಸಂಗ್ರಹ, ಅಪ್ರಕಟಿತ

೯. ವೀರೇಶ ಬಡಿಗೇರ, ೨೦೦೧, ಭಕ್ತಿ, ಭಜನೆ ಮತ್ತು ಕೆಳವರ್ಗ, ಪು.೭೭

೧೦. ಜಯಶ್ರೀ ಸಬರದ, ೧೯೯೭, ಗುರುಶಿಷ್ಯರ ತತ್ವಪದಗಳು, ಪದ್ಯ ೩, ಪು.೩

೧೧. ಪಾಂಪೂರ ಭೀಮಣ್ಣನವರ ಪದಗಳ ಸಂಗ್ರಹ, ಅಪ್ರಕಟಿತ

೧೨. ಬಂಡೆಪ್ಪನವರು ಶಾಂತಮೂರ್ತಿ(ಸಂ), ೧೯೯೨, ವಿದೇಹ್ಯ ಕೈವಲ್ಯ ಸಾರಾಮೃತ, ಪ.೧೨, ಪು.೧೫

೧೩. ಅಮರೇಶ ನುಗುಡೋಣಿ, ೧೯೯೯, ಪೂರ್ವೋಕ್ತ, ಪು.೩೪

೧೪. ಜಯಶ್ರೀ ಸಬರದ(ಸಂ), ೧೯೯೭, ಪೂರ್ವೋಕ್ತ, ಪದ್ಯ ೫, ಪು.೬

೧೫. ವೀರೇಶ ಬಡಿಗೇರ, ೨೦೦೭, ಬಾಚಿಕಾಯಕದ ಬಸವಯ್ಯ, ವೃತ್ತಿ ಹಾಗೂ ತತ್ವ ಮೀಮಾಂಸೆ, ಪು.೩೫

೧೬. ಆದಿ ಅಮಾತ್ಯಪ್ಪ, ೧೯೨೩, ಕೈವಲ್ಯ ನವನೀತ, ಪು.೨೩

೧೭. ಬಸವಲಿಂಗ ಸೊಪ್ಪಿಮಠ, ೧೯೯೭, ನೀರಲಕೇರಿ ಬಸವಲಿಂಗ ಶಿವಯೋಗಿಗಳ ಸ್ವರವಚನಗಳು, ಪದ್ಯ ೯೪, ಪು.೫೨

೧೮. ವೆಂಕಟೇಶ ಇಂದ್ವಾಡಿ, ೧೯೯೯, ಮಂಟೇಸ್ವಾಮಿ ಪರಂಪರೆ, ಪು.೨೭

೧೯. ಕುಮಾರ ಡಿ.ಎಸ್.(ಸಂ), ೧೯೯೪, ಕೂಡಲೂರ ಬಸವಲಿಂಗರ ತತ್ವಪದಗಳು, ಪ.೨೫, ಪು.೨೩

೨೦. ಅದೇ, ಪು.೩೫

೨೧. ರಾಂಪೂರು ಲಕ್ಷ್ಮಣದಾಸ, ಅಪ್ರಕಟಿತ

೨೨. ಬಸವಲಿಂಗ ಸೊಪ್ಪಿಮಠ(ಸಂ), ೨೦೦೧, ಗೂಗಲ್ಲ ಪರಪ್ಪಯ್ಯನ ತತ್ವಪದಗಳು, ಪ.೪೦, ಪು.೩೭

೨೩. ಕುಮಾರ ಡಿ.ಎಸ್.(ಸಂ), ೧೯೯೪, ಪೂರ್ವೋಕ್ತ, ಪ.೪೫, ಪು.೩೯

೨೪. ಲೇಖಕ, ೧೯೭೦, ಘುನಮಠೇಶ್ವರ ತತ್ವಪದಗಳು, ಪ.೫೩, ಪು.೭೬

೨೫. ಅದೇ,

೨೬. ಹಿರೇಮಲ್ಲೂರು ಈಶ್ವರನ್, ೧೯೯೬, ಪೂರ್ವೋಕ್ತ, ಪು.೨೨

೨೭. ರಹಮತ್ ತರೀಕೆರೆ(ಸಂ), ೨೦೦೦, ಧರ್ಮ, ಪು.೪೯೬

೨೮. ಹಿರೇಮಠ ಆರ್.ಸಿ., ಶಿವಶರಣರ ವಚನಗಳು, ಪ.೨೮೩, ಪು.೧೧೯

೨೯. ಕುಮಾರ ಡಿ.ಎಸ್.(ಸಂ), ೧೯೯೪, ಪೂರ್ವೋಕ್ತ, ಪ.೪೧, ಪು.೩೬

೩೦. ರಹಮತ್ ತರೀಕೆರೆ(ಸಂ), ೨೦೦೦, ಪೂರ್ವೋಕ್ತ, ಪು.೪೯೪

೩೧. ಅದೇ,

೩೨. ಬಸವಲಿಂಗ ಸೊಪ್ಪಿಮಠ(ಸಂ), ೨೦೦೧, ಪೂರ್ವೋಕ್ತ, ಪ.೫೫, ಪು.೫೪

೩೩. ಬಸವರಾಜ ಸಬರದ, ೧೯೯೫ ರಾಯಚೂರು ಜಿಲ್ಲೆಯ ಅನುಭಾವಿ ಕವಿಗಳು

೩೪. ಬಸವಲಿಂಗ ಸೊಪ್ಪಿಮಠ(ಸಂ), ೧೯೯೯, ನೀಲಕೇರಿ ಬಸವಲಿಂಗ ಶಿವಯೋಗಿಗಳ ಸ್ವರವಚನಗಳು, ಪು.೧೨೧, ಪು.೬೫

೩೫. ಬಸವಲಿಂಗ ಸೊಪ್ಪಿಮಠ(ಸಂ), ೨೦೦೧, ಪೂರ್ವೋಕ್ತ, ಪ.೬೭, ಪು.೬೬

೩೬. ರಹಮತ್ ತರೀಕೆರೆ(ಸಂ), ೨೦೦೦, ಪೂರ್ವೋಕ್ತ, ಪು.೪೯೪

೩೭. ಜಯಶ್ರೀ ಸಬರದ, ೧೯೯೭, ಗುರು ಶಿಷ್ಯರ ತತ್ವಪದಗಳು, ಪ.೯, ಪು.೩೪

೩೮. ಬಸವಲಿಂಗ ಸೊಪ್ಪಿಮಠ(ಸಂ), ೨೦೦೧, ಪೂರ್ವೋಕ್ತ, ಪ.೩೩, ಪು.೩೦

೩೯. ರಹಮತ್ ತರೀಕೆರೆ(ಸಂ), ೨೦೦೦, ಪೂರ್ವೋಕ್ತ, ಪು.೯

೪೦. ಬಂಡೆಪ್ಪನವರು ಶಾಂತಮೂರ್ತಿ(ಸಂ), ೧೯೯೨, ಫಲಚಿಂತೆ ಕೈವಲ್ಯ ಸಾರಾಮೃತ, ಪ.೯, ಪು.೫೯

೪೧. ಅದೇ,

೪೨. ಬಸವಲಿಂಗ ಸೊಪ್ಪಿಮಠ(ಸಂ), ೧೯೯೯, ಪೂರ್ವೋಕ್ತ, ಪು.

೪೩. ದಾದಪೀರ(ಸಂ) ಮಂಜರ್ಲಾ ಖಾದರ ಸಾಬನ ತತ್ವಪದಗಳು, ಅಪ್ರಕಟಿತ

೪೪. ವಿದ್ಯಾಶಂಕರ್ ಎಸ್., ೧೯೯೩, ವಚನ ಪರಿಭಾಷಾ ಕೋಶ, ಪು.೭

೪೫. ವೀರೇಶ ಬಡಿಗೇರ, ಬಾಚಿಕಾಯಕದತ ಬಸವಯ್ಯ ವೃತ್ತಿ ಮತ್ತು ತತ್ತ್ವೀಯ ಮೀಮಾಂಸೆ, ಅಪ್ರಕಟಿತ

೪೬. ಬಸವಲಿಂಗ ಸೊಪ್ಪಿಮಠ(ಸಂ), ೨೦೦೧, ಪೂರ್ವೋಕ್ತ, ಪ.೧೦, ಪು.೮

೪೭. ಬಸವಲಿಂಗ ಸೊಪ್ಪಿಮಠ(ಸಂ), ೧೯೯೯, ಪೂರ್ವೋಕ್ತ, ಪ.೯೪, ಪು.೫೮

೪೮. ರಹಮತ್ ತರೀಕೆರೆ(ಸಂ), ೨೦೦೦, ಪೂರ್ವೋಕ್ತ, ಪು.೪

೪೯. ಕುಮಾರ ಡಿ.ಎಸ್.(ಸಂ), ೧೯೯೪, ಪೂರ್ವೋಕ್ತ, ಪ.೨೬, ಪು.೨೪

೫೦. ಅಮರೇಶ ನುಗುಡೋಣಿ, ೧೯೯೯, ನುಡಿವ ಬೆಡಗು, ಪು.೪೨

೫೧. ವಡಿಕೆ ತಾತಪ್ಪಯ್ಯ, ೧೯೫೭, ಅಮೃತ ಶಿಖಾಮಣಿ, ಪ.೧೦೩, ಪು.೯

೫೨. ಸ್ವಾಮಿ ಎಸ್.ಜಿ. ೧೯೯೬, ಕೂಡಲೂರ ಬಸವಲಿಂಗಪ್ಪ ಮುತ್ತಿನ ಹಾರ, ಪು.

೫೩. ಅದೇ,

೫೪. ಅಮರೇಶ ನುಗುಡೋಣಿ, ೧೯೯೯, ಪೂರ್ವೋಕ್ತ ಪು.೪೭

೫೫. ಗುರುಬಸವಯ್ಯ ಅಮ್ಮಾಪುರ, ೧೯೯೭, ನೀರಲಕೇರಿ ಬಸವಲಿಂಗ ಮುತ್ತಿನ ಹಾರ, ಪು.

೫೬. ಮಂದಕಲ ಭೀಮಲಿಂಗಪ್ಪ, ಮಂದಿಕಲ, ಅಪ್ರಕಟಿತ

೫೭. ವಡಿಕೆ ತಾತಪ್ಪಯ್ಯ, ೧೯೫೭, ಪೂರ್ವೋಕ್ತ, ಪ.೧೦೬, ಪು.೧೦೦

೫೮. ಅಮರೇಶ ನುಗುಡೋಣಿ, ೧೯೯೯, **ಪೂರ್ವೋಕ್ತ** ಪು.೬೧

೫೯. ಅದೇ,

೬೦. ಬಂಡೆಪ್ಪನವರು ಶಾಂತಮೂರ್ತಿ(ಸಂ), ೧೯೯೨, **ಪೂರ್ವೋಕ್ತ**, ಪ.೨೫, ಪು.೩೯

೬೧. ಅದೇ,

೬೨. ನಾವಡ ಎ.ವಿ.(ಸಂ) ೨೦೦೫, **ಕನ್ನಡ ಅಧ್ಯಯನ**, ಸಂಪುಟ ೧೧, ಸಂಚಿಕೆ ೧, ಪು.೧೨೦

೬೩. ಬಸವಲಿಂಗ ಸೊಪ್ಪಿಮಠ(ಸಂ), ೧೯೯೮, **ಕೊಡೇಕಲ್ಲ ವಚನವಾಕ್ಯ**, ಪ್ರಸ್ತಾವನೆ

೬೪. ಮಂದಕಲ ಭೀಮಲಿಂಗಪ್ಪ, ಊರು ಮಂದಕಲ್ಲ, ಅಪ್ರಕಟಿತ

೬೫. ಸಿದ್ಧಯ್ಯ ಪುರಾಣಿಕ, **ಶರಣ ಚರಿತಾಮೃತ**, ಪು.೩೧೩

೬೬. ತೋಟಪ್ಪಯ್ಯಶಾಸ್ತ್ರೀ ಹಿರೇಮಠ ಗದಗ, **ಕೈವಲ್ಯ ನವನೀತ**, ಪ.೧೦, ಪು.೭

೬೭. ವಡಿಕೆ ತಾತಪ್ಪಯ್ಯ, ೧೯೫೭, **ಪೂರ್ವೋಕ್ತ**, ಪ.೭೬, ಪು.೭೧

೬೮. ರಮಾನಂದ ಸರ್ತಿಕೇರಿ ಇವರ ತತ್ವಪದಗಳು, ಅಪ್ರಕಟಿತ

೬೯. ಗಬ್ಬೂರ ಮಾರ್ತಾಂಡಪ್ಪನ ತತ್ವಪದಗಳು, ಅಪ್ರಕಟಿತ

೭೦. ಕಾಳೇಗೌಡ ನಾಗವಾರ, ೨೦೦೦, **ಹಲವು ತೋಟದ ಹೂಗಳು**, ಪು.೧೫೮

೭೧. ಸ್ವಾಮಿ ಆದಿ ದೇವಾನಂದ, ೧೯೯೮, **ಪಾತಂಜಲಿ ಯೋಗದರ್ಶನ**, ಪ್ರಸ್ತಾವನೆ

೭೨. ಉದ್ಧೃತ, ವೀರೇಶ ಬಡಿಗೇರ, ೨೦೦೫, **ಹಲಗೆ ಬಳಪ**, ಪು.೮೭

೭೩. ಹಾಡಿದವರು ಚಂದ್ರಕಾಂತ ಕಾಡ್ಲೂರು, ಲಿಂಗಸೂಗೂರು

೭೪. ಬಸವಲಿಂಗ ಸೊಪ್ಪಿಮಠ(ಸಂ), ೧೯೯೯, **ಪೂರ್ವೋಕ್ತ**, ಪ.೯೪, ಪು.೧೨೬

೭೫. ಹಾಡಿದವರು ಹುಲ್ಲೂರು ಶಿವಣ್ಣ, ಹುಲ್ಲೂರು, ಸಿಂಧನೂರು ತಾಲ್ಲೂಕು

೭೬. ನಾವಡ ಎ.ವಿ.(ಸಂ) ೨೦೦೫, **ಪೂರ್ವೋಕ್ತ**, ಸಂಪುಟ ೧೧, ಸಂಚಿಕೆ ೧, ಪು.೧೨೦

೭೭. ಜಯಶ್ರೀ ಸಬರದ, ೧೯೯೭, **ಗುರು ಶಿಷ್ಯರ ತತ್ವಪದಗಳು**, ಪ.೧೯, ಪು.೪೫

೭೮. ವಿರೂಪಾಕ್ಷ ಕುಲಕರ್ಣಿ(ಅನು), ೨೦೦೫, **ಕಾಪಾಲಿಕರು ಮತ್ತು ಕಾಳಾಮುಖರರು**, ಪು.೧೪೬

೭೯. ವೀರೇಶ ಬಡಿಗೇರ, ೨೦೦೫, **ಹಲಗೆ ಬಳಪ**,

೮೦. ತೋಟಪ್ಪಯ್ಯ ಶಾಸ್ತ್ರೀ ಹಿರೇಮಠ(ಸಂ), **ಪೂರ್ವೋಕ್ತ**, ಪು.೯೪

೮೧. ಗದ್ದಿಗಿಮಠ ಬಿಎಸ್., ೧೯೬೯, **ಕನ್ನಡ ಜಾನಪದ ಗೀತೆಗಳು**, ಪು.೨೩

೮೨. ಮಂಜುನಾಥ ಬೇವಿನಕಟ್ಟಿ, ೨೦೦೩, **ಜಾನಪದ ಕರ್ನಾಟಕ**, ಪು.೮೦

೮೩. ಮಂದಕಲ ಭೀಮಲಿಂಗಪ್ಪನ ತತ್ವಪದಗಳು, ಅಪ್ರಕಟಿತ

೮೪. ಸಿದ್ಧಯ್ಯ ಪುರಾಣಿಕ, ೧೯೯೨, ಶರಣ ಚರಿತಾಮೃತ, ಪು.೯೦೩

೮೫. ಶಶಿಕಾಂತ ಕೆ., ೨೦೦೬, ಘನಮಠೇಶ್ವರ ಸ್ವರವಚನಗಳು, ಪ.೬೦, ಪು.೧೦೨

೮೬. ಹನುಮಂತವ್ವನ ತತ್ವಪದಗಳು, ಅಪ್ರಕಟಿತ

೮೭. ಬಸವಲಿಂಗ ಸೊಪ್ಪಿಮಠ(ಸಂ), ೧೯೯೯, ಪೂರ್ವೋಕ್ತ, ಪ.೨೩, ಪು.೪೦

೮೮. ಸ್ವಾಮಿ ಎಸ್.ಜಿ. ೧೯೯೬, ಪೂರ್ವೋಕ್ತ, ಪು.

೮೯. ಗದ್ದಿಗಿಮಠ ಬಿಎಸ್., ೧೯೬೮, ಪೂರ್ವೋಕ್ತ, ಪು.೧೬೩

೯೦. ಮಂಜುನಾಥ ಬೇವಿನಕಟ್ಟಿ, ೨೦೦೩, ಪೂರ್ವೋಕ್ತ, ಪು.೮೦

೯೧. ಶ್ರೀ ಮಹಾಂತಪ್ರಿಯ, ೧೯೮೧, ಸುಕ್ಷೇತ್ರ ನಾರದ ಗಡ್ಡೆ, ಪ್ರಸ್ತಾವನೆ

೯೨. ಅಯ್ಯಪ್ಪಯ್ಯ ಹುಡ, ೨೦೦೧, ಶ್ರೀ ಸಿದ್ಧಲಿಂಗೇಶ್ವರ ದರ್ಶನ

೯೩. ತಾರನಾಥ ಎನ್.ಎಸ್., ೨೦೦೧, ಶತಮಾನದ ಸಂಶೋಧನೆ, ಪು.೧೯೪

೯೪. ಬಸವಲಿಂಗ ಸೊಪ್ಪಿಮಠ, ೧೯೯೮, ಕೊಡೇಕಲ್ಲ ವಚನ ವಾಕ್ಯ, ಪ್ರಸ್ತಾವನೆ

೯೫. ನಾಗರಾಜ ಡಿ.ಆರ್., ಅಲ್ಲಮ ಪ್ರಭು ಮತ್ತು ಶೈವ ಪ್ರತಿಭೆ, ಪು.೧೬೭

೯೬. ಬಸವಲಿಂಗ ಸೊಪ್ಪಿಮಠ, ೧೯೯೮, ಪೂರ್ವೋಕ್ತ, ಪ್ರಸ್ತಾವನೆ

೯೭. ತಾರನಾಥ ಎನ್.ಎಸ್., ೨೦೦೧, ಪೂರ್ವೋಕ್ತ, ಪು.೨೨೨

೯೮. ವಡಿಕೆ ತಾತಪ್ಪಯ್ಯ, ೧೯೫೭, ಪೂರ್ವೋಕ್ತ, ಪ.೮೫, ಪು.೮೧

೯೯. ರಾಜೇಂದ್ರ ಶಿವಾಚಾರ್ಯ ಹಿರೇಮಠ(ಸಂ), ೧೯೮೨, ಕೈವಲ್ಯ ಕೈದೀವಿಗೆ, ಪು.೧೯

೧೦೦. ಅದೇ,

# ಅಧ್ಯಾಯ ೫

# ಸಾಹಿತ್ಯಿಕ ಆಯಾಮ

೫.೧. ತೋಂಡಿ ಸಂಪ್ರದಾಯ ಮತ್ತು ತತ್ವಪದ ಪರಂಪರೆ

೫.೨. ಕಾಲಜ್ಞಾನ ಸಾಹಿತ್ಯ, ಖಂಡಜ್ಞಾನ ಸಾಹಿತ್ಯ, ಡಂಗುರ ಪದಗಳು, ಪರಾಕುಗಳು

೫.೩. ತತ್ವಪದಗಳು ಮತ್ತು ಬೆಡಗಿನ ಪರಂಪರೆ

# ೫

# ಸಾಹಿತ್ಯಿಕ ಆಯಾಮ

## ೫.೧. ತೋಂಡಿ ಸಂಪ್ರದಾಯ ಮತ್ತು ತತ್ವಪದ ಪರಂಪರೆ

ತತ್ವಪದಕಾರರ ತೋಂಡಿಯು ಸೃಜನಶೀಲತೆ ಕಥಾಮಾದರಿಯಾಗಿ, ಹಾಡುಗಳಲ್ಲಿ ಕಟ್ಟಿಕೊಡುವ ಸಾಹಿತ್ಯಾನುಭವವಾಗಿದೆ ಎಂದು ಹೇಳಬೇಕಾಗುತ್ತದೆ. ಅದು ಹೀಗಿದೆ. ೧. ಜನಪದ ತೋಂಡಿಯ ಅನ್ವೇಷಿತ ಮಾರ್ಗದಲ್ಲಿ ತತ್ವಪದ ಹಾಗೂ ತೋಂಡಿಯ ನಡುವಿನ ಸೃಜನಶೀಲತೆಯ ಮುಖಾಮುಖಿಯನ್ನು ಗುರುತಿಸುವುದು. ೨. ತತ್ವಪದಗಳಲ್ಲಿ ಕಂಡುಬರುವ ಹೇಳುವ ಮತ್ತು ಕೇಳುವ ಸಂಸ್ಕೃತಿಯನ್ನು ಅದನ್ನು ಆಧ್ಯಾತ್ಮದ ಅರ್ಥ ಸಂಬಂಧದೊಂದಿಗೆ ತೌಲನಿಕವಾಗಿ ಗ್ರಹಿಸುವುದು ಇಂತಹ ವಿಭಜನಾತ್ಮಕವಾದ ಸಾಹಿತ್ಯಿಕ ಗುಣಗಳು ಒಂದು ಪರಂಪರೆಯಲ್ಲಿ, ಹೇಗೆ ತನ್ನ ಅನನ್ಯತೆಯನ್ನು ಪಡೆದುಕೊಳ್ಳುತ್ತವೆ ಮತ್ತು ಅವು ಇನ್ನೊಂದು ಪರಂಪರೆಗೆ ಹೇಗೆ ದಾರಿ ಮಾಡಿಕೊಡುತ್ತದೆಂಬ ಸಮರ್ಥನೆಯ ಅಗತ್ಯತೆಯಿದೆ. ಜನಪದರ ಸಾಂಸ್ಕೃತಿಕ ಪ್ರೇರಣೆಗಳು ಮೌಖಿಕ ಸಂಬಂಧಗಳೊಂದಿಗೆ ಬಿಚ್ಚುತ್ತಾ ಸಾಗುತ್ತದೆ. ಇವುಗಳನ್ನು ಅನುಭಾವದ ಹಾಡುಗಳೆಂದು ಹೇಳದೇ ದೇಸೀ ಪರಂಪರೆಯ ನಾಡು ನುಡಿಯ ಬೆಸುಗೆಯ ಹಾಡೆಂದು ಗುರುತಿಸುವುದು ಮುಖ್ಯವಾಗಿದೆ.

> "ಗಂಟಲದ ದನಿಕೇಳ ಗಂಟೆ ಬಾರಿಸಿದ್ಹಂಗ
> ಎಂಟು ಕಿನ್ನೂರಿ ನುಡಿದ್ಹಂಗ | ನನಗೆಣತಿ
> ಪಂತ ನಿನಗ್ಯಾಕ ದನಿಗೋಡ"[೧]

ಒಬ್ಬ ಗೆಳತಿ ಮತ್ತೊಬ್ಬ ಗೆಳತಿಗೆ ನಿನ್ನ ಧ್ವನಿಯೇ ಗಂಟೆ ಬಾರಿಸಿದಂತಿದೆ. ಅದು ಎಂಟು ಕಿನ್ನರಿ ವಾದ್ಯದಷ್ಟು ಶಕ್ತಿಯುತ ಧ್ವನಿ ನಿನ್ನದಾಗಿದೆ. ನನ್ನ ಜೊತೆ ಪಂಥ ಯಾಕೆ ಕಟ್ಟುವೆ ಎಂದು ಪ್ರಶ್ನಿಸುವ ಧ್ವನಿ ಈ ಪದ್ಯದಲ್ಲಿ ಇರುವುದನ್ನು ಕಾಣಬಹುದಾಗಿದೆ. ಇಲ್ಲಿ ನಾದವಿದೆ, ಲಯವಿದೆ, ಧ್ವನಿಯ ಎಚ್ಚರಿಕೆಯಿದೆ. ಇಂತಹ ದೇಸೀ ಸೊಬಗಿನ ಹಾಡನ್ನು ಗ್ರಹಿಸುವಾಗ ಕೇಳುವ ಗತಿ ಪ್ರಥಮಸ್ಥಾನದಲ್ಲಿ ನಿರೂಪಿತವಾಗುತ್ತದೆ. ಈ ನಿಟ್ಟಿನಲ್ಲಿ ತತ್ವಪದಕಾರರು ಜನಪದರ ಅಂತಃಸತ್ವಗಳನ್ನು ಸ್ವೀಕರಿಸಿ, ತೋಂಡಿಯನ್ನು ಪುನರ್ ರಚಿಸುವಲ್ಲಿ ಶಕ್ತರಾಗಿದ್ದಾರೆ. ಇಲ್ಲಿ ತತ್ವಪದಕಾರರ, "ಜನಪದರ ಭಾಷೆ ಒಂದೇ

ನೆಲೆಗಟ್ಟಿನಲ್ಲಿ ಪ್ರಕಟವಾಗುತ್ತದೆ. ಜನಪದರಲ್ಲಿ ಬುದ್ಧಿಪೂರ್ವಕವಾದ ಕಸರತ್ತುಗಳಿರುವುದಿಲ್ಲ. ಅದೇನಿದ್ದರೂ ಸಹಜವಾಗಿ ಉತ್ಸಾಹದ ಸ್ಥಿತಿಯಲ್ಲಿ ನಿರ್ಮಾಣವಾಗುತ್ತದೆ.[೨]

ತತ್ವಪದಕಾರರಲ್ಲಿ ಒಬ್ಬ ವ್ಯಕ್ತಿ, ಎರಡು ಪಾತ್ರವಹಿಸುವನು, ಒಬ್ಬ ಜನಪದ ಹಾಡುಗಾರ, ಇನ್ನೊಬ್ಬ ತತ್ವವನ್ನು ಹೇಳುವವ. ಸೂಕ್ಷ್ಮ ಸಂವೇದನೆಯ ಆತ್ಮತತ್ವಗಳನ್ನು ಭಕ್ತಿಪೂರ್ವಕವಾಗಿ ಹಾಡುವವ. ಇವರು ಸಮುದಾಯದ ಒಡಲಿನ ಅನುಭವಗಳನ್ನು ಶೋಧಿಸುತ್ತಾ ಹೋಗುತ್ತಾರೆ. ಈ ಶೋಧನೆಯ ತೀವ್ರತೆ ಹೆಚ್ಚಾದಂತೆಲ್ಲಾ, ಜೀವನದ ತತ್ವಕ್ಕೆ ಸ್ವತಂತ್ರವಾದ ಜ್ಞಾನವನ್ನು ವಿಸ್ತರಿಸುವವನು ತತ್ವಪದಕಾರನೆಂದು ಕರೆಯಲ್ಪಡುತ್ತಾನೆ. ಇಂತಹ ಅನಂತ ಪ್ರತಿಭೆಯ ಮೂಲ ಜ್ಞಾನದ ನೆಲೆಯನ್ನು ಶೋಧಿಸಿಕೊಟ್ಟವನನ್ನು ಪಂಡಿತನೆನ್ನದೆ ಪಾಮರನೆಂಬುದು ಅಷ್ಟೇ ಗಮನಾರ್ಹವಾಗಿದೆ. "ಪಾಮರರು ಅನಕ್ಷರಸ್ಥರಾಗಿದ್ದರೂ ಅಜ್ಞಾನಿಗಳಾಗಿರಲಿಲ್ಲ. ಅಸಂಸ್ಕೃತರಂತೂ ಆಗಿರಲೇ ಇಲ್ಲ. ಅಕ್ಷರ ಸಂಸ್ಕಾರ ಹೊಂದಿದ ನಿಷ್ಕಲ್ಮಷ ಮನಸ್ಸುಳ್ಳ ಕ್ರಿಯಾಶೀಲ ಗುಣವುಳ್ಳವರಾಗಿದ್ದರು."[೩] ಒಂದು ನಿರ್ದಿಷ್ಟ ಸ್ಥಳದಲ್ಲಿ ವೇದಾಂತ ಚರ್ಚೆಯನ್ನು ಕೇಳುತ್ತಾ ತತ್ವಗಳನ್ನು ಹಾಡಾಗಿಸುತ್ತಾ ಬದುಕಿನ ಲಯದ ಸಂಬಂಧಕ್ಕೆ ಧ್ವನಿಯಾದರೆಂದು ಗುರುತಿಸಬಹುದು.

"ಕೇಳೌಡಿ ತಮ್ಮಾ ಕೇಳೌಡಿ | ಕೇಳಿ ತಾಳಿ ಬಾಳು ತಮ್ಮಾ
ಕೇಳೌಡಿ ಬೀಳಬ್ಯಾಡಯ | ಮನವಾದಿಗೆ ಬೇದ ಮಾಡಿ
ನೀ ಚೌಳು ಜನರ ಸಂಘದೂರ ಮಾಡಿ | ಮಾಯದ
ಮನೆಯೊಳು ನೀ ಕುಳಿತಿ | ಬಲ್ ಆಯಾಸಬಟ್ಟು ಕೆಟ್ಟು
ಹೋಗುತಿ | ವುಟ್ಟುಂಡು ತೊಟ್ಟುದು ನಿನ್ನದೋ |
ಮುಟ್ಟಿ ಕೊಟ್ಟಂಥಾ | ದಾನಧರ್ಮ ಕಾಯ್ವುದೋ"[೪]

ಅಡಿವೇಂದ್ರ ಮಠಕ್ಕೆ ಕಾಶಿಯಿಂದ ಒಬ್ಬ ಸಂತನು ಬಂದಿದ್ದನು. ಎಲ್ಲಾ ಭಕ್ತರು ಕಾಶಿಯ ಸಂತನ ಪಾದಮುಟ್ಟಿ ನಮಸ್ಕರಿಸಿ ಆಧ್ಯಾತ್ಮಿಕ ಗೋಷ್ಠಿಯನ್ನು ಕೇಳಲು ಕಾತರದಿಂದಿದ್ದರು. ಒಬ್ಬ ಖೇಮಣ್ಣನಿಗೆ, ಗುರುವಿಗೆ ನೀನು ನಮಸ್ಕರಿಸುವುದಿಲ್ಲವೇ ಎಂದಾಗ ಗುರುವೇ ಖೇಮಣ್ಣ ನಮಸ್ಕರಿಸಿದನೆನ್ನುವರು. ಇವರು ಹೇಳುವ ಮಾತು ಕೇಳುವ ಗೌರವವನ್ನು ಆತ್ಮದ ಮೂಲಕ ಅರ್ಪಿಸಿಕೊಂಡಿದ್ದರು. ಅಂದರೆ ಇವರ ಭಕ್ತಿಯ ಅಭಿವ್ಯಕ್ತಿ ಬಹಿರಂಗವಾದುದಾಗಿರದೆ, ಅಂತರ್‌ಮುಖಿಯಾದದ್ದಾಗಿದ್ದಿತು ಎಂಬುದು ಇದರಿಂದ ತಿಳಿದುಬರುತ್ತದೆ. ಖೇಮಣ್ಣನ ಮೂಲಕ ನಿಜ ಭಕ್ತನ ಸ್ವರೂಪವನ್ನು ಇಲ್ಲಿ ಅನಾವರಣಗೊಳಿಸಲಾಗಿದೆ.

ಕೇ ಎಂದರೆ ಕೇವಲ - ಕೈವಲ್ಯ ಜ್ಞಾನ. ಆಡು ನುಡಿಯ ಭಾಷೆಯಲ್ಲಿ 'ಕೇಳೌಡಿ' ಎಂದು ಹೇಳುವುದು ಕೇಳುವಿಕೆಗೆ ಪ್ರಥಮ ಸ್ಥಾನವಿದೆ ಎಂಬುದನ್ನು ಸೂಚಿಸುತ್ತದೆ. ಅಸ್ಥಿರ ಬದುಕಿನ ವ್ಯವಸ್ಥೆಗೆ

ತತ್ವಪದಕಾರ ಕೇವಲ ಜ್ಞಾನ ನೀಡುತ್ತಾನೆ. ಮಾಯದ ಮನೆಯೊಳಗೆ ದುಷ್ಟಶಕ್ತಿಯಿದೆ. ಅಂದರೆ ಮಾನವನ ಮನಸ್ಸು ತುಂಬಾ ಚಂಚಲವಾದುದು. ಅದನ್ನು ಹತೋಟಿಯಲ್ಲಿಟ್ಟುಕೊಳ್ಳದೆ ಹೋದರೆ, ಅನೇಕ ಗಂಡಾಂತರಗಳಿಗೆ ತಂದು ನಿಲ್ಲಿಸುತ್ತದೆ. ಆದ್ದರಿಂದ ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡು ಸನ್ಮಾರ್ಗದಲ್ಲಿ ನಡೆಯಬೇಕು. ದಾನಧರ್ಮದಂತಹ ಕಾರ್ಯಗಳನ್ನು ಮಾಡುವುದರಿಂದ ಮನುಷ್ಯನ ಮನಸ್ಸಿಗೆ ಆನಂದವಾಗುತ್ತದೆ ಎಂದು ಹೇಳುವುದರ ಮೂಲಕ ಸತ್ಕಾರ್ಯಗಳನ್ನು ಮಾಡುವುದರಿಂದ ಜೀವನವನ್ನು ಸಾರ್ಥಕ ಮಾಡಿಕೊಳ್ಳಬೇಕು ಎಂಬ ಆಶಯವನ್ನು ಇಲ್ಲಿ ಗುರುತಿಸಬಹುದು.

ಕೇಳು ಎನ್ನುವಲ್ಲಿ ಮನುಷ್ಯನ ಶ್ರವಣ ಭಕ್ತಿಯ ಪಾಲುಂಟು. ಹೇಳುವುದಕ್ಕೆ ದೈತ್ಯ ಶಕ್ತಿಯ ಸಂಬಂಧವನ್ನು ಕಟ್ಟುತ್ತಾನೆ. ನಾನು "ಹೇಳುತ್ತೇನೆ" ಎಂದು ತತ್ವಪದಕಾರ ಹೆಚ್ಚಾಗಿ ಬಳಸಿಲ್ಲ. ಹೇಳುತ್ತೇನೆ ಎನ್ನುವ ಸತ್ಯದಲ್ಲಿ ಅಹಂಕಾರ ತ್ಯಜಿಸಿ, ಕೇಳುವಿಕೆಯಲ್ಲಿ ತತ್ವಪದಕಾರ ತನ್ನ ಅನುಭಾವವನ್ನು ಸಮಾಜವೆಂಬ ಆತ್ಮದ ಜೊತೆಗೆ ವಿಸ್ತಾರಗೊಳಿಸುತ್ತಾನೆ.

"ತಿಳಿದು ನೋಡೋ | ಮಾತನಾಲಿಸೋ | ಕಳವಳಿಸದೆ ನೆನಸೋ"[೫]

ಎಂಬ ತತ್ವಪದಕಾರನ ಈ ಮಾತಿಗೆ ಹಲವು ಬಗೆಯ ಧ್ವನಿಗಳಿವೆ. ತನುವಿನಲ್ಲಿ ತಿಳಿದು ನೋಡು, ಮಾತಿನಿಂದ ಮನವನಾಲಿಸು, ಧನವಿಲ್ಲವೆಂದು ಕಳವಳಿಸಬೇಡ ಎಂಬ ಮಾತಿನಲ್ಲಿ ಆತ್ಮಾಭಿಮಾನ ಹಾಗೂ ಕ್ರಿಯಾಶೀಲ ನೆಲೆಗಳನ್ನು ಕಾಣಬಹುದು. ಜನಪದರ ಹೇಳ್ತೀನಿ ಎನ್ನುವ ಪದ್ಯವು

"ಹೆಣ್ಣು ಮಕ್ಕಳಿಗೆಲ್ಲಾ ನಾನು ಸಣ್ಣವನಾಗಿ ಹೇಳ್ತೀನಿ
ಮುತ್ತಿನಂಥಾ ಮಾತೊಂದು ಕೇಳಿರೆವ್ವಾ
ನೀತಿ ಮಾರ್ಗ ಮುಂದಿನ ಹಾದಿಗೆ
ವಯಸ್ಸಿನ ಬೆನ್ನ ಹತ್ತಿ ನೀವು ಬಡಿಯಾರ
ಮಾಡಕ ಹ್ವಾದರಿ ಹೋಗಿ ಬೀಳ್ತೀರಿ
ತರುಗದ ಬಾವಿಯೊಳಗೆ"[೬]

ಸ್ತ್ರೀ ಬದುಕಿನ ಬಗೆಗಿನ ಗಂಭೀರ ಚಿಂತನೆಯನ್ನು ಈ ಹಾಡಿನಲ್ಲಿ ನೋಡುತ್ತೇವೆ. ಗಂಡಿಗೆ ನೀತಿ ಹೇಳುವ ಸ್ವಭಾವ ನಮ್ಮ ಸಮಾಜದಲ್ಲಿ ಮೊದಲಿನಿಂದಲೂ ಬೆಳೆದು ಬಂದಿರುವಂತಹದ್ದು. ತತ್ವಪದಕಾರರಲ್ಲಿ ಸಾಮಾನ್ಯವಾಗಿ ಕೇಳಿ ಎನ್ನುವ ರೂಢಿಯಿದ್ದರೆ ಜನಪದರಲ್ಲಿ ಹೇಳ್ತೀನಿ ಎಂಬ ಸಂಪ್ರದಾಯವನ್ನು ಕಾಣುತ್ತೇವೆ. ಜನಪದರಿಗೆ ಲೌಕಿಕ ಜೀವನದ ಕಥನ ಮಾದರಿಯ ಅಂಶಗಳು ಲಿಖಿತ ಪರಂಪರೆಗೆ ದಾರಿ ಮಾಡಿಕೊಡುತ್ತವೆ. ಹಾಡುಗಾರನ ಮನಸ್ಸಿನ ಸೂತ್ರಗಳು ಸ್ವರ ಪ್ರಧಾನತೆಯಲ್ಲಿ ಮುಖ್ಯವಾಗಿದ್ದ, ಲಯ ಮತ್ತು ನಾದದ ಮೂಲಕ ಪ್ರವೇಶ ಪಡೆಯುತ್ತವೆ ಎಂಬುದು ಗಮನಾರ್ಹ ಸಂಗತಿ.

ಭಜನೆ ಹಾಡಾಗಲೀ ಜನಪದ ಹಾಡಾಗಲೀ ಲಿಖಿತತೆಗಿಂತ ಅದರ ಮೌಖಿಕತೆಗೆ ಹೆಚ್ಚು ಪ್ರಾಧಾನ್ಯತೆಯಿದೆ. ಹೆಚ್ಚಿನ ಭಕ್ತಿ ಹಾಡುಗಳು, ತೋಂಡಿಯಾಗಿಯೇ ಬೆಳೆದಿವೆ. ನಿಜಗುಣ ಶಿವಯೋಗಿ, ಮುಪ್ಪಿನ ಷಡಕ್ಷರಿ, ಶಿಶುನಾಳ ಶರೀಫ್‌ರ ಹಾಡುಗಳು ಇತ್ತೀಚಿಗೆ ಬರವಣಿಗೆಯಲ್ಲಿ ಲಭ್ಯವಾಗಿವೆ. ಗ್ರಾಮೀಣ ಪರಿಸರದ ಹಾಡುಗಾರನು ಇವುಗಳನ್ನು ಲಿಖಿತ ಹಾಡುಗಳೆಂದು ತಿಳಿಯದೇ ಮೌಖಿಕವಾಗಿಯೇ ಕಂಠಪಾಠ ಮಾಡುತ್ತಾನೆ. ಇಂತಹ ಹಾಡುಗಳು ಬಾಯಿಂದ ಬಾಯಿಗೆ ಹರಿದು ಬಂದಾಗ ಇವುಗಳನ್ನು ತೋಂಡಿ ವ್ಯವಸ್ಥೆಯಲ್ಲಿ ರೂಪಗೊಂಡ ಹಾಡುಗಳೆಂದೇ ಗುರುತಿಸಬೇಕಾಗುತ್ತದೆ.

ಜನಪದರ ಜೀವನದ ಆಚರಣೆಗಳು ಸಾಂಸ್ಕೃತಿಕ ರೂಪದ ತೋಂಡಿಯೊಂದಿಗೆ ಗುರುತಿಸಿಕೊಳ್ಳುತ್ತದೆ. ತತ್ವಪದಕಾರರಲ್ಲಿ ಸೂಕ್ಷ್ಮರೂಪದ ಗತಿಶೀಲ ಗುಣವುಳ್ಳ ಪುನರ್‌ಸೃಷ್ಟಿಶಕ್ತಿಯು ಗಟ್ಟಿತೋಂಡಿಯೆಂದು ಗುರುತಿಸಿಕೊಂಡಿದೆ. ಡಾ.ವೀರೇಶ ಬಡಿಗೇರ ಹೇಳುವಂತೆ "ಸ್ಥಳೀಯ ಭಾಷಿಕ ಸಂವೇದನೆಗಳನ್ನು, ತನ್ನ ಬರವಣಿಗೆಯ ಭಾಷೆಯಾಗಿಸಿಕೊಳ್ಳುವುದು ವಿಶೇಷವಾಗಿ ಕಾಣುತ್ತದೆ. ನಮ್ಮ ಪ್ರಾಚೀನ ಪರಂಪರೆಯ ಆಡುಮಾತಿನ ಕಾಕು ಹಾಗೂ ಉದ್ಗಾರಗಳೊಂದಿಗೆ ಭಾಷೆಯನ್ನು ಸಶಕ್ತೀಕರಣಗೊಳಿಸುತ್ತಾನೆ."[೭] ಈ ಹಿನ್ನೆಲೆಯಲ್ಲಿ ತತ್ವಪದಕಾರರ ತೋಂಡಿಯನ್ನು ಹೀಗೆ ಗ್ರಹಿಸಲು ಸಾಧ್ಯ. ತತ್ವಪದಕಾರ ಹೇಳುವ ಕ್ರಿಯೆಯಲ್ಲಿ ಹೊಯ್ದಾಡುತ್ತಾನೆ. ಈ ಕ್ರಿಯೆ ಅವನ ಮನಸ್ಸಿಗೆ ಸಂಬಂಧವಿರುವುದರಿಂದ ಮನದ ಜಾಗೃತ ಶಕ್ತಿಯೊಂದಿಗೆ ಮಾತನಾಡುತ್ತಾನೆ. ಇವರ ಪ್ರಕಾರ ಶಕ್ತಿ ಕೇಳಿಸಿಕೊಳ್ಳುತ್ತಾಳೆ. ಶಕ್ತಿಯೆಂದರೆ ಬಾಲೆ ಆತ್ಮಸಿದ್ಧಿಗಾಗಿ ಆಹ್ವಾನಿಸುವ ದೇವಿ, ಪೂಜಿನಿ, "ಬಾಲೆ ಕೇಳು ಒಂದು ಮಾತು| ಹೇಳುವೆನು ತಿಳಿಯಬಾರದೇನು."[೮]

ಇಂಥ ಸೂಕ್ಷ್ಮ ಮನಸ್ಸಿನ ನಿವೇದನೆಯಲ್ಲಿ ತತ್ವಪದಕಾರ ಮನಸ್ಸಿನ ಕಟ್ಟಡದ ಜೊತೆಗೆ ಭಾಷೆಯ ಕಟ್ಟಡ ಕಟ್ಟುತ್ತಾನೆ. ಹಾಡಿನ ಕ್ರಮವೇ ಇದಾಗಿದ್ದರಿಂದ ಶಬ್ದದ ಧ್ವನಿ ಮತ್ತು ಅರ್ಥಗಳೆರಡೂ ಬದ್ಧವಾಗಿರುವುದು ದೃಶ್ಯವಾದ ಅಕ್ಷರಗಳಲ್ಲಿ. ಆದರೆ ಶಬ್ದದಲ್ಲಿಯೆ ಅರ್ಥ ಮತ್ತು ಧ್ವನಿಗಳು ಅಕ್ಷರಗಳಿಂದ ಪ್ರತ್ಯೇಕವಾಗಿರುತ್ತವೆ. ಅರ್ಥ ಮತ್ತು ಧ್ವನಿಗಳು ನಡುವಿನ ಅವಿಭಾಜ್ಯ ಸಂಬಂಧ ಅಕ್ಷರದ ಶಬ್ದಾರ್ಥವನ್ನು ನೆನಪಿಗೆ ತಂದುಕೊಡುವ ಚಿಹ್ನೆಗಳಾಗಿವೆ."[೯]

"ಏನೆಂದು ಹೇಳಲಿ ಮಾನಿನಿ ಕೇಳಲೇ | ಶಬ್ದವ ನಿಶ್ಯಬ್ದ
ಬ್ರಹ್ಮಸುಖವಬ್ದಿ | ಸ್ತಬ್ಧದೊಳು ಲುಬ್ದವಾದುದ ಏನೆಂದು
ಹೇಳಲಿ | ಸೊಲ್ಲಿಸೆನಲು ಇಲ್ಲದ ತೊಡುಕು ನೀ | ಬಲ್ಲವಲ್ಲಾ
ಇಲ್ಲವಲ್ಲಾ ಎರದಿಲ್ಲವೆಂದು ತಿಳಿಯೇ ನೀನೊಂದು |"[೧೦]

ಇಲ್ಲಿಯೆ ಭಾಷೆಯ ಲಯಗಳು ಶಬ್ದ. ಸ್ತಬ್ಧ, ನಿಶ್ಯಬ್ದ ಬ್ರಹ್ಮವೆಂಬ ಸಾಂಕೇತಿಕ ಪದವನ್ನು ಮುಂದು ಮಾಡುತ್ತವೆ. ಶಿವಶಕ್ತಿಯರು ಪ್ರಕೃತಿಯ ಒಡೆಯರು, ಪ್ರಕೃತಿಯ ತತ್ವಗಳು ಶಬ್ದ, ಸ್ಪರ್ಶ,

ರೂಪ, ರಸ, ಗಂಧಗಳನ್ನು ತತ್ವಪದಕಾರರು ತಮ್ಮ ಆಧ್ಯಾತ್ಮಿಕ ವಿಸ್ತಾರಗಳನ್ನಾಗಿ ಬಳಸಿಕೊಂಡದ್ದು ಬಹು ವಿಶೇಷವಾಗಿದೆ.

"ನಿಶ್ಯಬ್ದ ಬ್ರಹ್ಮಸುಖವಬ್ಧಿ" ತನ್ನ ಮಾನಿನಿಗೆ (ಶಕ್ತಿಗೆ) ಹೇಳುತ್ತಾನೆ. ಬ್ರಹ್ಮಸುಖವೆನ್ನುವುದು ವಿಶಾಲವಾದ ಸಮುದ್ರವಿದ್ದಂತೆ. ಬ್ರಹ್ಮನು ಹೇಳುವ, ಕೇಳುವ, ಓದುವ ಮತ್ತು ಗ್ರಹಿಸಿಕೊಳ್ಳುವ ಸಾಮರ್ಥ್ಯ ಹೊಂದಿದ ಜ್ಞಾನಿಯವನು. ಆದ್ದರಿಂದ ಬ್ರಹ್ಮವೆಂಬ ಸೂಕ್ಷ್ಮ ಮನಸ್ಸಿಗೆ ಸ್ಪರ್ಶ ಜ್ಞಾನವಾದಾಗ ಹಾಡುಗಳಲ್ಲಿ ಶಬ್ದನಿರ್ಮಾಣವಾಗುತ್ತದೆ. ವಿಷಯ ವ್ಯಾಪ್ತಿಯಲ್ಲಿ ರೂಪವಾಗುತ್ತದೆ. ಏನೆಂದು ಹೇಳಲಿ ಮಾನಿನಿ ಕೇಳಲೆ ತತ್ವಪದಕಾರನ ಕೇಳು ಎನ್ನುವುದು ಮನುಷ್ಯ ಸಂಬಂಧದ ಉದ್ದೀಪನದ ವಾಹಕವಾಗುತ್ತದೆ. ಒಂದು ಕಡೆ ದಂಡಿಯು ಕಾವ್ಯಮೀಮಾಂಸೆಯಲ್ಲಿ "ಶಬ್ದಾರ್ಥ ಸಹಿತೌ ಕಾವ್ಯಂ" ಎಂದು ಹೇಳಿದ್ದನ್ನು ಗಮನಿಸಬಹುದು. ಅಲ್ಲಮ ಪ್ರಭು ಹೀಗೆ ಹೇಳುತ್ತಾನೆ. "ಹೃದಯ ಕಮಲದಲ್ಲಿ ಶಿವ ಶಿವ ಶಬ್ದ. ಅದು ಅದ್ವೈತ ಕಾಣಿರೋ" ಎನ್ನುವ ಮಾತು ಗಮನಾರ್ಹ. ಇಂತಹ ತೋಂಡಿ ಪ್ರಕ್ರಿಯೆಗಳು ತತ್ವಪದ ಸಾಹಿತ್ಯವನ್ನ ಶ್ರೀಮಂತಗೊಳಿಸಿದವಲ್ಲದೆ ತೀಕ್ಷ್ಣಗೊಳಿಸಿದವು. ಕಾಲದ ಸೂಕ್ಷ್ಮಗಳನ್ನು ಭವಿಷ್ಯದ ನಿರ್ಧಾರಗಳನ್ನು ಮಾನವನ ಸಂಬಂಧದೊಂದಿಗೆ ತತ್ವಪದಕಾರ ಕೆಳಗಿನಂತೆ ವಿಸ್ತರಿಸಿದ್ದಾನೆ.

"ಕೇಳಿರಿ ಜಾಹೀರದುತ್ತರ | ಕಾಲೋಚಿಸಿದ ಪದ
ತಾಳಿ ಕೇಳಿ ಬಾಳಿ | ನೀವು ಯಾರಿಗೆ ಹೇಳಿ
ಖೂಳ ಕುಹಕರ ನೋಡು | ಗಾಳಿಗಾಕಾಶ ಬೆದರಿ
ಬೀಳಲಹುದೆ | ತಿಳಿದು ನೋಡಿರಿ "[೧೧]

ತತ್ವಪದಕಾರರು ತನ್ನ ಅನುಭವ ಆಲೋಚನೆಗೆ ನಿಲುಕಿದ ರೀತಿಯಲ್ಲಿ ಲೋಕವನ್ನು ಗ್ರಹಿಸಿದ್ದಾರೆ. ಎಲ್ಲಾ ತತ್ವಪದಕಾರರು ಹೇಳುವ ತತ್ವದ ಮೂಲ ಉದ್ದೇಶ ಒಂದೇ ಆಗಿದ್ದರೂ ಅಭಿವ್ಯಕ್ತಿ ಸಂದರ್ಭದಲ್ಲಿ ಬಳಸಿದ ಉಪಮೆ ರೂಪಕಗಳ ಸ್ವರೂಪಗಳಲ್ಲಿ ಭಿನ್ನವಾಗಿವೆ. ವೈವಿಧ್ಯತೆಯಿದೆ. ಲೋಕದ ಗ್ರಹಿಕೆಯಲ್ಲಿ ತನಗೆ ಸ್ವಾತಂತ್ರ್ಯವಿದೆಯೆಂದು ಉತ್ಸುಕತೆಯನ್ನು ತೋರಿ ಹೇಳಿದ ಜಾಹೀರದುತ್ತರವು ಲೋಕಸಂಬಂಧದ ಹಾಡಾಗಿದೆ. ಕಾಲದ ಅತೀಂದ್ರಿಯ ಶಕ್ತಿಯನ್ನು ಬೇರೆ ಬೇರೆ ಶಬ್ದಗಳಿಂದ ಮತ್ತೆ ಮತ್ತೆ ಹೇಳು, ಕೇಳು, ತಾಳುವುದು, ಎನ್ನುವ ಪರಿಕಲ್ಪನೆಗಳು ಮನುಷ್ಯನಲ್ಲಿ ಬದುಕಿನ ಬಗ್ಗೆ ಧನಾತ್ಮಕವಾದ ತಿಳುವಳಿಕೆಯನ್ನು ರೂಪಿಸುವಂಥವಾಗಿವೆ.

"ಖೂಳ ಕುಹಕರ ನೋಡಿ ಗಾಳಿಗಾಕಾಶ ಬೆದರಿ" ಎನ್ನುವಲ್ಲಿ ಸ್ಥಿತ್ಯಂತರದ ಬಹುದೊಡ್ಡ ಸೂಚನೆಗಳನ್ನು ನೀಡುತ್ತಾನೆ. ಸಂಭವ ಅಸಂಭವಗಳನ್ನು ಒಂದೇ ತುದಿಯಲ್ಲಿ ಕಟ್ಟಿನಿಲ್ಲಿಸುತ್ತಾನೆ. "ಪ್ರತಿ ಪದ್ಯದಲ್ಲಿ ವ್ಯಕ್ತಿನೆಲೆಯಿದ್ದು ಅದನ್ನು ಮೀರುವ ಮತ್ತೆ ಸಮಾಜ ಮುಖಿಯಾಗಿ ಮರುಹುಟ್ಟು ಪಡೆಯುವ

ಪ್ರಕ್ರಿಯೆ ಸಾಮಾಜಿಕ ಕ್ರಿಯೆಯಾಗಿದೆ. ಹಿಂದಿನಿಂದ ಬಂದ ತತ್ವವನ್ನು ಬಾಯಿಪಾಠ ಮಾಡಿ ಒಪ್ಪಿಸುವುದು ತತ್ವಪದಕಾರನ ಕೆಲಸವಲ್ಲ. ಕಾಲದಿಂದ ಕಲಿತ ಹೊಸ ಪಾಠಗಳನ್ನು ಮರು ನಿರ್ಮಿಸುತ್ತಾನೆ."[೧೨]

### ೫.೨. ಕಾಲಜ್ಞಾನ ಸಾಹಿತ್ಯ, ಖಂಡಜ್ಞಾನ ಸಾಹಿತ್ಯ, ಡಂಗುರ ಪದಗಳು, ಫರಾಕುಗಳು

ಕಾಲಜ್ಞಾನವೆಂಬ ಪರಿಕಲ್ಪನೆಯೇ ಮನುಷ್ಯನು ಗ್ರಹಿಸಿದ ಕಾಲ ಮತ್ತು ಜ್ಞಾನದ ವಿಶಾಲತೆಯನ್ನು ಪುನರಾಲೋಚಿಸುವಂತೆ ಮಾಡುತ್ತದೆ. ಪ್ರತಿಯೊಬ್ಬ ಮನುಷ್ಯನಿಗೆ ತನ್ನ ಮುಂದಿನ ಭವಿಷ್ಯದ ವಿವರವನ್ನು ತಿಳಿಯಬೇಕೆನ್ನುವ ಕುತೂಹಲ ಸಹಜವಾದದ್ದೆ. ಆದರೆ ವರ್ತಮಾನ ಕಾಲದಲ್ಲಿ ನಿಂತು ನುಡಿಯುವ ಕಾಲ ಮತ್ತು ನಡೆಯುವ ಕಾಲದ ಸೂಚನೆಗಳನ್ನು ಗುರುತಿಸುವುದು ಬಹು ಕುತೂಹಲಕಾರಿಯಾದದ್ದು. ಕಾಲಜ್ಞಾನ ಸಾಹಿತ್ಯ ಬರೀ ಭವಿಷತ್ತಿನ ಭರವಸೆಗಳ ಹೊರೆಯಲ್ಲ. ವರ್ತಮಾನದ ತಲ್ಲಳಗಳನ್ನು ಭೂತದ ಬೀಳಲುಗಳನ್ನು ಭವಿಷ್ಯದ ನಿರೀಕ್ಷೆಗಳನ್ನು ಹಾಸಿಹೊಯ್ದ ಕ್ರಿಯಾಶೀಲ ಜಾಡಿಗಳು. ಈ "ಸಾಹಿತ್ಯದಲ್ಲಿ ವರ್ತಮಾನ ಕಾಲದ ಸನ್ನಿವೇಶಗಳ ತುರ್ತುಸ್ಪಂದನವಿದೆ. ರಚನೆಗಿಂತ ರಚನೆಯ ಕಲಾತ್ಮತೆಗಿಂತ ಮೌಖಿಕ ಪ್ರಸಾರ ಹಾಗೂ ಚರಿತ್ರೆಯ ದಾಖಲಾತಿ ಇದರ ಪ್ರಧಾನ ಕಾಳಜಿಯಾಗಿದೆ.[೧೩] ಹೀಗಾಗಿ ಜನಸಮುದಾಯದಲ್ಲಿ ಒದಗಿದ ದುರಂತಗಳು, ಸಾಮಾಜಿಕ ಮತ್ತು ಧಾರ್ಮಿಕತೆಯ ಏಳುಬೀಳುಗಳ ಪ್ರಕೃತಿಯಲ್ಲಿನ ಅತಿವೃಷ್ಟಿ ಅನಾವೃಷ್ಟಿಗಳ ಕುರಿತಾದ ಸ್ಪಷ್ಟಚಿತ್ರಣಗಳು ಕಾಲಜ್ಞಾನ ಸಾಹಿತ್ಯದಲ್ಲಿ ಕಾಣಿಸುತ್ತವೆ.

ಕಾಲಜ್ಞಾನದ ವ್ಯಾಪ್ತಿಯನ್ನು ವ್ಯಾಖ್ಯಾನಿಸುವಾಗ ಅಭ್ಯಾಸದ ಅನುಕೂಲಕ್ಕಾಗಿ ಮೂರು ರೀತಿಯ ಮಾದರಿಗಳನ್ನು ಗುರುತಿಸಬಹುದು.

೧. ವಿಜಯನಗರ ಸಾಮ್ರಾಜ್ಯದ ಪ್ರೌಢದೇವರಾಯನ ಕಾಲದಲ್ಲಿ ಎಮ್ಮೆಬಸವಣ್ಣ, ಕರಸ್ಥಲದ ನಾಗಿದೇವ, ಕಾಲಜ್ಞಾನದ ನೀಲಾಂಬಿಕೆ, ವಿರೂಪಾಕ್ಷ ಪಂಡಿತರು ಕಾಲಜ್ಞಾನ ಸಾಹಿತ್ಯಕ್ಕೆ ಅನುಪಮ ಸೇವೆ ಸಲ್ಲಿಸಿದ್ದಾರೆ. ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣದಲ್ಲಿ ಕಾಲಜ್ಞಾನ ಭಾಗದಲ್ಲಿ "ಕಲಿಯುಗದ ೪೬೮೩ ನೇಯ ಸ್ವಭಾನು ಸಂವತ್ಸರದಲ್ಲಿ ವೀರವಸಂತರಾಯನು ಹುಟ್ಟಿ ಬಸವನಾಮಾಂಕಿತ ಪಟ್ಟಣದಲ್ಲಿ ರಾಜ್ಯವಾಳುವನು. ಆದರೆ ಅವನು ವೈಷ್ಣವ ಚೆನ್ನಬಸವಣ್ಣನ ಪ್ರಭಾವದಿಂದ ವೀರಶೈವನಾಗುವನು. ಆಗ ಬಸವಣ್ಣ ಮತ್ತೆ ಹುಟ್ಟಿ ಕಲ್ಯಾಣದ ಪುನರೋದಯಕ್ಕೆ ಕಾರಣನಾಗುವನು."[೧೪] ಇಂಥಾ ಕಾಲಜ್ಞಾನದ ಮಾತುಗಳ ಅಭ್ಯಾಸಾರ್ಹವಾದಂಥವು.

೨. ಆರೂಢ ಸಂಗಮನಾಥನಿಂದ ದೀಕ್ಷೆ ಪಡೆದ ಕೊಡೇಕಲ್ಲ ಬಸವಣ್ಣನು ತನ್ನ ನೆಲೆಯಾದ ವಿಜಯನಗರವನ್ನು ಬಿಟ್ಟು ಕಲ್ಯಾಣ ಮಾರ್ಗವಾಗಿ ಕೃಷ್ಣಾನದಿ ತೀರದಲ್ಲಿ ಬರುವ (ಕಡೆಯಕಲ್ಲು) ಕೊಡೆಯಕಲ್ಲಿಗೆ ಬಂದನೆಂದು ತಿಳಿದುಬರುತ್ತದೆ. ಮಂಟೇಸ್ವಾಮಿ ತಿಂಥಿಣಿ ಮೋನಪ್ಪಯ್ಯನಂಥಾ ಶಿಷ್ಯರೊಂದಿಗೆ ಕಾಲಜ್ಞಾನದ ಪರಂಪರೆಯನ್ನು ಕಟ್ಟಿ ಬೆಳೆಸಿದ ನಿದರ್ಶನಗಳನ್ನು ಕಾಣುತ್ತೇವೆ.

೩. ತಿಂಥಿಣಿ ಮೋನಪ್ಪಯ್ಯ ಮಡಿವಾಳಪ್ಪನ ಶಿಷ್ಯ ಪರಿವಾರದಲ್ಲಿ ಮೊದಲಿಗನಾದ ಈತನ ತ್ರಿಪದಿ ರೂಪದ ಕಾಲಜ್ಞಾನಗಳು ಖ್ಯಾತವಾದವುಗಳು. ಕಾಲ ಜ್ಞಾನದಂಥಾ ಸಾಹಿತ್ಯವನ್ನು ಬೆಡಗಿನ ಭಾಷೆಯಲ್ಲಿ ರಚಿಸಿದರು. ಹೈದ್ರಾಬಾದ್ ಕರ್ನಾಟಕ ಪ್ರದೇಶದ ತುಂಬಾ ಕಾಲಜ್ಞಾನದಂಥ ಬೆಂಕಿ ನುಡಿಯ ಹಾಡುಗಳನ್ನು ತತ್ವಗಳಾಗಿ, ಅನುಭಾವಿಗಳ ಆಶಯಗಳಾಗಿ ತತ್ವಪದಕಾರರಲ್ಲಿ ಮರುರೂಪದೊಂದಿಗೆ ಪ್ರತಿಪಾದಿತವಾಗಿವೆ.

ಈ ನಿಟ್ಟಿನಿಂದ ಕಾಲಜ್ಞಾನದಂಥಾ ಸಾಹಿತ್ಯಿಕ ಪರಂಪರೆಯನ್ನು ತತ್ವಪದಕಾರರು ಶ್ರದ್ಧಾಪೂರ್ವಕವಾಗಿ ಬೆಳೆಸಿದರು. ಅಂದು ನಡೆದ ಹಿಂದು ಮುಸ್ಲಿಂ ಸಂಘರ್ಷದ ದಾರುಣ ಸಂಗತಿಗಳನ್ನು ಬಹುಹತ್ತಿರದಿಂದ ಕಂಡಂಥಾ ಶಿಶುನಾಳ ಶರೀಫ್, ಕಡಕೋಳು ಮಡಿವಾಳಪ್ಪ, ಕೂಡ್ಲೂರು ಬಸವಲಿಂಗ, ಗಬ್ಬೂರು ಹಂಪಣ್ಣನಂಥಾ ತತ್ವಪದಕಾರರು ಕಾಲಜ್ಞಾನದಂಥಾ ಅನುಭವದ ವಿಸ್ತಾರಗಳನ್ನು ಗರ್ಭೀಕರಿಸಿಕೊಂಡು, ತತ್ವಪದ ಹಾಡುಗಾರಿಕೆಯಲ್ಲಿ ತಮ್ಮ ಸಂಯೋಜಿತ ಜ್ಞಾನವನ್ನು ತೀಕ್ಷ್ಣಗೊಳಿಸಿದರೆಂದು ಭಾಸವಾಗುತ್ತದೆ.

"ತಿಳಿಯದೋ ಮೂಲ ಕಲಿಯುಗ ಜನಕ್ಕೆ ಸದ್ಗುರು ಕೀಲ"[೧೫]

ತತ್ವಪದಕಾರ ಇಂಥಾ ಮಾತುಗಳನ್ನು ಆಡಬೇಕಾದರೆ, ಈ ಜನ ಗುರುವಿನ ದೂರದೃಷ್ಟಿಯ ಜ್ಞಾನವನ್ನು ಅರಿತಿಲ್ಲವೆಂಬ ಸೂಕ್ಷ್ಮತೆ ಕಾಲಜ್ಞಾನದ ಭಾಷೆಯಲ್ಲಿ ದೃಢವಾಗುತ್ತದೆ. ಸಾಮಾನ್ಯವಾಗಿ ತತ್ವಪದಕಾರ

"ವಕ್ಷದೊಳು ಕತ್ತಿಯಿದ್ದ ಹಾಗೆ ಭಿಕ್ಷುಕರನು ಶಿಕ್ಷೆಯೆ
ಮಾಡುವವಗೆ | ಬಂಡತನದಲಿ ಚಾಡಿ ಹೇಳಿದವ
ಹೆಂಡಿಯ ಹುಳುವಾಗಿ ಹುಟ್ಟುವನೋ ಅಣ್ಣಾ"[೧೬]

ಇಂತಾ ಲೋಕೋಕ್ತಿಯೆ ಖಚಿತ ಅನುಭಾವದ ನುಡಿಗಳು ಅಧ್ಯಯನಾಸಕ್ತಿಯನ್ನು ಕೆರಳಿಸುತ್ತವೆ.

ಕೊಡೇಕಲ್ಲ ಕಾಲಜ್ಞಾನ ಸಾಹಿತ್ಯ ಬೌದ್ಧಿಕ ಚಾತುರ್ಯದ ಭಾಷೆಯಾಗಿದೆ. ತನ್ನ ಕಾಲದ ಕಥನ ಮಾದರಿಯ ವಾಕ್ ರೂಪದ ಭಾಷೆಯೆ ಗಾರುಡಿ ಪ್ರಯೋಗ ಹೀಗಿದೆ.

"ಪಟ್ಟಣವು ಆನೆಗೊಂದಿಯೊಳಗೆ
ಅಷ್ಟರೊಳಗೆ ಒಬ್ಬ ದುಷ್ಟ ಬೇಡನು ಅಲ್ಲಿ
ನಿಷ್ಠೆಯೆನು ತೋರಿ ಮದಕರಿಯ
ತಟ್ಟನೆ ಪಾದಕ್ಕೆರಗಿ ನಮೋ ನಮೋ ಎನಲು
ಕೊಟ್ಟಾ ಅರುಹು ಆತಂಗೆ ಭೀಕ್ಷಾ
ಭೀಕ್ಷೆ ಅಷ್ಟಷ್ಟಕ್ಕೆ ಮುಂದೆ ದೃಷ್ಟವು ಜಗದೊಳು ಭೀಕ್ಷಾ"[೧೭]

ಮೂರು ರಾಜರುಗಳ ನಡುವೆ ಕದನ ನಡೆದಿರುವಾಗ ಪಟ್ಟದ ಮದಕರಿಯೊಂದು ಮಧ್ಯೆ ಪ್ರವೇಶಿಸುತ್ತದೆ. ಈ ಮೂವರನ್ನೂ ಯುದ್ಧದಲ್ಲಿ ಹಿಮ್ಮೆಟ್ಟಿಸುತ್ತದೆ. ಅಷ್ಟರಲ್ಲಿ ಆನೆಗೊಂದಿಯ ಬೇಡನೊಬ್ಬ ಓಡಿ ಬಂದು ಪಟ್ಟದ ಮದಕರಿಗೆ ನಮೋ ನಮೋ ಎನ್ನುತ್ತಲೇ ಮದಕರಿಯ ದಳವನ್ನು ಉತ್ತರದ ಕಡೆಗೆ ಓಡಿಸುತ್ತಾನೆ.

ತತ್ವಪದಕಾರರು ಕೊಡೇಕಲ್ ಕಾಲಜ್ಞಾನದ ವಿಶಿಷ್ಟ ಸಾಹಿತ್ಯಿಕ ಅಂಶಗಳನ್ನು ಸ್ವೀಕರಿಸಲು ಕಾರಣ, ಆ ಸಾಹಿತ್ಯಕ್ಕಿರುವ ಆತ್ಮೀಯ ಸಂಬಂಧ ಮತ್ತು ಆಕರ್ಷಣೆ ಒಂದಾದರೆ, ನಮ್ಮ ಇತಿಹಾಸದಲ್ಲಿ ಹಿಂದೆ ನಡೆದ ಅವಮಾನ ಅನ್ಯಾಯಗಳಿಗೆ ಪರಿಹಾರ ಹುಡುಕುವ ಶೋಧದ ಪ್ರಯತ್ನವು ಒಂದೆಂದು ಹೇಳಬಹುದು.

ಈ ಹಾಡಿನಲ್ಲಿ ಮದಕರಿಯೆಂದರೆ ಮುಸ್ಲಿಂ ಅರಸನಾಗಿದ್ದಾನೆ. ಭಿಕ್ಷಾ ಎನ್ನುವ ಸಾಂಕೇತಿಕ ಪದ, 'ಹಂಡಿ' ಭಿಕ್ಷೆಯಾಗಿದೆ. "ಹಂಡಿ ಅರ್ಥಾತ್ ಗಡಿಗೆಯು ಕೊಡೇಕಲ್ ಬಸವಣ್ಣನ ಭಿಕ್ಷಾ ಪಾತ್ರಯಾಗಿದ್ದು, ಇದನ್ನು ಹಿಡಿದು ಮನೆಮನೆಯಲ್ಲಿ ಭಿಕ್ಷೆಯನ್ನು ನೀಡಿಸಿಕೊಳ್ಳುವ ಸಂಪ್ರದಾಯ ಇಲ್ಲಿದೆ. "ಗಡಿಗೆಯಲ್ಲಿ ತಿರಿದುಂಡು ಅಗಡಿದರು ಭುವನದೊಳು" ಎಂದು ಕೊಡೇಕಲ್ ಬಿರುದಾವಳಿಯಲ್ಲಿ ಬರುವ ಈ ಸಾಲು ತಿರಿದುಣ್ಣುವುದು ಕೊಡೇಕಲ್ ಬಸವನ ಧಾರ್ಮಿಕ ಆಚರಣೆಯಾಗಿತ್ತೆಂದು ತಿಳಿದುಬರುತ್ತದೆ."[೧೮]

ಇಲ್ಲಿ ಭಿಕ್ಷೆಯೆಂದರೆ ಲೌಕಿಕ ಬದುಕಿನ ಭೋಗದ ಶ್ರೀಮಂತಿಕೆಯನ್ನು ನಿರಾಕರಿಸಿ, ಆಧ್ಯಾತ್ಮದ ಭಿಕ್ಷೆಯನ್ನು ಕೊಡೇಕಲ್ಲ ಜ್ಞಾನದ ಮೂಲಕ ನೀಡುವುದು. ಈ ಸಂಪ್ರದಾಯದಲ್ಲಿ ಭಿಕ್ಷೆ ಒಂದು ಪ್ರತೀಕ. ನೆಪವಾಗಿ ಕಾರ್ಯನಿರ್ವಹಿಸುವುದರಿಂದ ಕಾಲವೇ ಮೂಕ ಸಾಕ್ಷಿಯಾಗಿ ಉತ್ತರ ಕೊಡುತ್ತದೆ. ಮುಖ್ಯವಾಗಿ ಭಿಕ್ಷೆಗೆ ಬಂದ ಸಾರುವಯ್ಯನವರು ಅಗೌರವದ ಕೆಲಸವಿದೆಂದು ಅರಿಯದ ಜನರನ್ನು ಬಡಿದೆಬ್ಬಿಸುವ, ಕ್ರಾಂತಿಕಾರಿಕ ಧೋರಣೆ ಪ್ರಧಾನವಾಗಿದೆ. ವರ್ತಮಾನಕಾಲದ ಜನರಿಗೆ, ವಸ್ತುನಿಷ್ಠ ಮನದೊಂದಿಗೆ ಎಚ್ಚರಿಕೆ ಕೊಡುವುದಾಗಿದೆ. "ಇದೊಂದು ಸಿದ್ಧಿಯಾಗಿದ್ದು ಅಂತಃಸ್ಫುರಣದಿಂದ ತಿಳಿಯುವ ತ್ರಿಕಾಲ ಜ್ಞಾನವಾಗಿದೆ. ಜೈನರಲ್ಲಿ ಇದನ್ನು 'ಅವಧಿಜ್ಞಾನ'ವೆನ್ನುತ್ತಾರೆ. ಅವಧಿಯೆಂದರೆ ಕಾಲ, 'ಅವಧಿ ಜ್ಞಾನ'ವೆಂದರೆ ಕಾಲಜ್ಞಾನವಾಗಿದೆ."[೧೯]

ಈ ಹಿನ್ನೆಲೆಯಲ್ಲಿ ತತ್ವಪದಕಾರರು ಕಾಲದ ಅಧ್ಯಯನದ ಸನ್ನಿವೇಶದಲ್ಲಿ ಬಹುಕುತೂಹಲಕಾರಿ ಮನಸ್ಸುಳ್ಳಂಥವರು. ಇವರ ಆಧ್ಯಾತ್ಮದಲ್ಲಿ ಕಾಲನೆಂದರೆ ಬ್ರಹ್ಮ, ಲೌಕಿಕಾರ್ಥದಲ್ಲಿ ಸೂರ್ಯ, ಚಂದ್ರ, ಗ್ರಹ, ನಕ್ಷತ್ರಗಳ ಸಮೂಹವೇ ಕಾಲ. ಲೌಕಿಕ ಮತ್ತು ಆಧ್ಯಾತ್ಮದ ಮೊತ್ತವನ್ನು ಅರಿತವನು ಕಾಲಜ್ಞಾನಿ. ಇವನೇ ಬ್ರಹ್ಮಜ್ಞಾನಿಯೆಂಬ ಕಲ್ಪನೆ ಇವರಿಗಿರುವುದರಿಂದ ತಮ್ಮ ಸೃಜನ ಕ್ರಿಯಾ ಶಕ್ತಿಯಿಂದ

ಕಾಲಗರ್ಭದ ಹುಡುಕಾಟವನ್ನು ತೀಕ್ಷ್ಣಗೊಳಿಸಿದರೆಂದು ಗುರುತಿಸಬೇಕಾಗುತ್ತದೆ. ಇವರು ಕಂಡ ಕಾಲಜ್ಞಾನದ ವಾಸ್ತವತೆಯನ್ನು ಈ ರೀತಿ ವಿಶ್ಲೇಷಿಸಿದ್ದಾರೆ.

೧. ನಿಶ್ಚಿತಕಾಲಜ್ಞಾನ ೨. ವ್ಯವಹಾರ ಕಾಲಜ್ಞಾನ

೧. ನಿಶ್ಚಿತ ಕಾಲಜ್ಞಾನವೆಂದರೆ ಈ ಮೊದಲೇ ನಮ್ಮ ಪೂರ್ವಿಕರು ನಿಶ್ಚಯಿಸಿರುವಂಥಾ ಕಾಲಜ್ಞಾನದ ಸ್ಥಾನವನ್ನು ಗುರುತಿಸಿಕೊಳ್ಳುವ ಸಮಸ್ಯೆಗಳು ಮತ್ತು ಪರಿಹಾರಗಳು.

ಉದಾ : ಬೆಳಗಿನ ಸಮಯದಲ್ಲಿ ರೈತನು ಹೊಲಕ್ಕೆ ಹೋಗಬೇಕಾದಂಥಾ ಸಂದರ್ಭದಲ್ಲಿ

'ಬೆಳ್ಳಿಚುಕ್ಕೆ ಮೂಡೋ ಹೊತ್ತು'

ಸಾಯಂಕಾಲವಾದರೆ 'ದೀಪ ಹಚ್ಚೋಹೊತ್ತು'

ಹಡೆದವರೇನು ಹಣೆಬರಹ ಬರೆದರೆ?

ತಲೆಯಿದ್ದಲ್ಲಿ ಕಾಲ ಎಳಿಸಿತು.

ಮೊದಲಾದ ಅರ್ಥಗರ್ಭಿತ ಮಾತುಗಳನ್ನು ಮುರಿದು ಸುಮ್ಮನಾಗುತ್ತಾರೆ. ಆದರೆ ತತ್ವಪದಕಾರರು ಜನಪದರ ಕಾಲದ ಸಂಪ್ರದಾಯದೊಂದಿಗೆ ಮುಖಾಮುಖಿಯಾಗಿ ಯಶಸ್ವಿಯಾಗುತ್ತಾರೆಂಬುದು ಅಷ್ಟೇ ಗಮನಾರ್ಹವಾಗಿದೆ.

ಶಿಷ್ಟರ ಕಾಲಜ್ಞಾನವೆಂಬ ವಾಸ್ತವತೆಯ ಚೌಕಟ್ಟಿನಲ್ಲಿ ತತ್ವಪದಕಾರರ ಸಾಹಿತ್ಯವನ್ನು ವಿವರಿಸಲು ಒಂದು ಹೆಜ್ಜೆ ಹಿಂದಿಡಬೇಕಾದರೂ ಶಿಷ್ಟರ ಹೋಲಿಕೆಯ ಅಂಶವಿದೆಯೆಂದು ಖಚಿತತೆಯಿಂದ ಗುರುತಿಸಬಹುದು.

"ಎಂಥ ಹುಚ್ಚ ಹಿಡಿದೀತಿವಗ | ಯಾರು ಕಲಿಸಿ ಬಿಟ್ಟಾರಪ್ಪಾ

ಕಟ್ಟಿದ ಗೋರಿ ಕೆಡುವತಾನ | ಉಟ್ಟ ಅರವಿ ಹರಿವುತಾನ

ಗಡಿಗೆನೆಲ್ಲಾ ಹೊಡೆದ ಹುಚ್ಚಾ | ಮುಂದು ಇನ್ನೇನರಿವ

ತನ್ನ ಮಾತ ತಾನೆ ಹೇಳಿ | ಇಷ್ಟು ನಗತಿಹನವ್ವ"[೨೦]

ವೈರಾಗ್ಯದಿಂದ ಮನಸ್ಸನ್ನು ನಿಯಂತ್ರಿಸಬಹುದು. ಆದರೆ ಸಮಾಜದ ಬಗ್ಗೆ ಚಿಂತನಾಶಕ್ತಿಯಿರುವವನು ಮನಸ್ಥೈರ್ಯ ಕಳೆದುಕೊಳ್ಳುತ್ತಾನೆ. ಚರಿತ್ರೆಯಲ್ಲಿ ಕಂಡಂಥಾ ವಿಪ್ಲವದ ಸತ್ಯವನ್ನು ಕಂಡು ಗೋರಿಯನು ಕೆಡುವುತ್ತಾನೆ ಎಂಬ ವಾಸ್ತವತೆಯಿಲ್ಲದೆ ನನ್ನದೆಂಬ ಈ ದೇಹದ ಗಡಿಗೆಗೆ ಒದಗಿದ ಅನಾಹುತದ ಪ್ರತಿಭಟನೆಯನ್ನು ಖಂಡಿಸುತ್ತಾನೆ. ಮನಸ್ಸೆಂಬ ಇಂದ್ರಿಯಗಳಿಗೆ ಒದಗಿದ ಸಂವೇದನೆಗಳನ್ನು ಕಾಲಜ್ಞಾನದ ಮಾತುಗಳ ಮೂಲಕ ವ್ಯಕ್ತಪಡಿಸಿದ್ದಾನೆಂದು ಗುರುತಿಸಬಹುದು.

ತತ್ವಪದಕಾರರು ತಮ್ಮ ಜೀವನವನ್ನು ಸಹಜವೆಂಬಂತೆ ಸ್ವೀಕರಿಸಿದರೂ, ಅವರ ಉಜ್ವಲ ಭವಿಷ್ಯದ ಹಿಂದೆ ಒಬ್ಬ ಕಾಲಾತೀತ ನಿರ್ದೇಶಕನಿರುತ್ತಾನೆ. ಉದಾ : "ಒಳಗಾನೂರು ಮರಿಸ್ವಾಮಿಯು ಬಳ್ಳಾರಿಯಿಂದ ಉರವಕೊಂಡಕ್ಕೆ ಹೋಗುವಾಗ ದಾರಿಯಲ್ಲಿ ಚೆಳ್ಳಗುರಿಕಿಯ ಹತ್ತಿರ ಮೇನೆಯಿಂದಿಳಿದು ತಿಪ್ಪೆಯ ಮೇಲೆ ಕುಳಿತು ಚಿಕ್ಕ ಕಲ್ಲುಗಳಿಂದ ಒಂದು ಮನೆ ಕಟ್ಟಿದ. ಇಲ್ಲಿಗೊಬ್ಬ ಶಿವಯೋಗಿ ಬರುವನು. ಈ ಸ್ಥಳದಲ್ಲಿ ದಿವ್ಯ ಮಠವೊಂದು ನಿರ್ಮಾಣವಾಗುವುದು. ಎಂದ ಕೆಲವೇ ದಿನಗಳಲ್ಲಿ ಎರ್ರಿತಾತ ಅಲ್ಲಿಗೆ ಬಂದ.[೨೧] ಇಂತಹ ತಾಮಸ ಸಿದ್ಧಿಯ ದಿವ್ಯವಾಣಿ ವಾಹಕವಾಗುತ್ತದೆ. ಇಂತಹ ಸಿದ್ಧಿ ಪುರುಷರ ನುಡಿಯೆ ಘಟನೆಯೇ ಕಾರಣವಾಗಿ ಮನತಟ್ಟುವ ನೆನಪಿನಲ್ಲಿ ಉಳಿಯುತ್ತದೆ.

ತತ್ವಪದಕಾರರ ಕಾಲಜ್ಞಾನದ ಅಂಶವು ಒಂದು ನಿರ್ದಿಷ್ಟ ಚೌಕಟ್ಟಿನಲ್ಲಿ ಪ್ರಕಟವಾದರೂ, ಇದು ಸಾಮಾನ್ಯ ಕ್ರಿಯೆಯೆಂದು ಶಿಷ್ಟರ ಆಧ್ಯಾತ್ಮದ ಪರಂಪರೆಯ ಹೊರಗೆ ಉಳಿಯುತ್ತದೆ. ಇಂತಹ ಸೀಮಿತ ಪರಿಧಿ ಜ್ಞಾನಕ್ಕೆ ಮಾತ್ರ ಸೀಮಿತರೆಂಬ ಭಾವನೆ ನಮ್ಮ ಸಮುದಾಯದಲ್ಲಿರುವುದರಿಂದ, ಇವರ ಸಿದ್ಧಿ ಸಾಧನೆಯ ನುಡಿಗಳು ಉಪಜೀವನಕ್ಕಾಗಿ ಹೇಳಿರಬೇಕೆಂಬ ಗ್ರಹಿಕೆ ನಮ್ಮ ಸಮಾಜದಲ್ಲಿರುವುದರಿಂದ ಇಂತಹ ಕಾಲಜ್ಞಾನದ ವಿಚಾರದಲ್ಲಿ ಸೀಮಿತ ಚೌಕಟ್ಟನ್ನು ನಿರ್ಮಿಸಿಕೊಂಡಿರಬೇಕೆಂದೆನಿಸುತ್ತದೆ.

ಶಿಷ್ಟರಿಗಿಂತ ತತ್ವಪದಕಾರರು ಹೇಗೆ ಭಿನ್ನ ಎಂಬುದನ್ನು ಇಲ್ಲಿ ಗಮನಿಸಬಹುದು. ಶಿಷ್ಟರ ಕಾಲಜ್ಞಾನ ಜ್ಞಾನದ ಆಚರಣೆಯಲ್ಲಿ ಬಾಹ್ಯಸಿದ್ಧಾಂತ ವೇದ್ಯವಾಗುತ್ತದೆ. ನಿಗೂಢತೆಯ ಆತ್ಮತರ್ಕದೊಂದಿಗೆ ವಿಸ್ತಾರವಾಗುತ್ತದೆ. ನಿದರ್ಶನಕ್ಕೆ ಮೋನಪ್ಪಯ್ಯನ ಹಾಡನ್ನು ಗಮನಿಸಬಹುದು.

"ಉಚ್ಚಿಯ ಕುಣಿಯೊಳಗೆ ಉಚ್ಚಿಬಿದ್ದುದ ನಾ ಬಲ್ಲೆ
ಹೆಚ್ಚು ಕಡಿಮೆಯೆಂದು ಕುಲಗಳಿಗೆ ಹೆಣಗಿದರೆ
ಇವರಿಗೆ ಮೊಚ್ಚಿ ಮೊಚ್ಚಿಲೆ ಹೊಡೆಯೆಂದ
ಬಸವಣ್ಣಾ"[೨೨]

ಮನುಷ್ಯನ ಜನನವೇ ಹೇಸಿಗೆಯದು. ಅವನು ಅನೀತಿಯಿಂದ ಪಂಚಮಕಾರಗಳ ವಶವಾಗಿ ಕ್ರೋಧವನ್ನು ವ್ಯಕ್ತಪಡಿಸುತ್ತಾನೆಂಬುದು ಅಷ್ಟೇ ಸತ್ಯವಾಗಿದೆ. ಇಲ್ಲಿ ತತ್ವವೂ ಇದೆ. ಕಾಲಜ್ಞಾನವೂ ಇದೆ ಎಂಬುದು ಗಮನಾರ್ಹ ಸಂಗತಿಯಾಗಿದೆ.

"ಬಿಜಾಪುರದ ಸುಲ್ತಾನನಿಗೆ ಪಟ್ಟವನ್ನು ಕಟ್ಟಬಹುದೆ? ಎಂದು ಕೇಳಿದಾಗ ಮೋನಪ್ಪಯ್ಯ ಹೇಳಿದ ಮಾತು "ದರಿದ್ರನಾ ಪಟ್ಟಧಾರಿಣೆಗೆ ಸುಖವಿಲ್ಲ" ಇದರಿಂದ ಮೋನಪ್ಪಯ್ಯನ ಕಾಲ ಹಾಗೂ ಆತನ ನುಡಿಗಳಲ್ಲಿನ ಕೆಚ್ಚು ಗಮನಹರಿಸುತ್ತದೆ."[೨೩]

ತತ್ವಪದಕಾರನಾದ ಕೂಡ್ಲೂರು ಬಸವಲಿಂಗಪ್ಪನ ಹಾಡೂ ಇದೇ ಅರ್ಥವನ್ನು ಅಭಿವ್ಯಕ್ತಿಸುತ್ತದೆ. ಆದ್ದರಿಂದ ಅಂದಿನ ಸಮಕಾಲೀನ ಸಂತರು ನಿರ್ದಿಷ್ಟವಾದ ನಿಯಮಗಳನ್ನು ರೂಢಿಸಿಕೊಂಡಿಲ್ಲವೆಂಬ

ಅನುಮಾನ ಬರುತ್ತದೆ. ಮೋನಪ್ಪಯ್ಯನೇ ಆಗಲಿ ಕೂಡ್ಲೂರು ಬಸವಲಿಂಗಪ್ಪನೇ ಆಗಲಿ ತಮ್ಮ ಹಾಡಿನ ಮೌಖಿಕ ಸ್ವತಂತ್ರತೆಯನ್ನು ಕಾಲಜ್ಞಾನದಂಥಾ ಮಾತುಗಳ ಮೂಲಕ, ವಿಮರ್ಶಿಸುತ್ತಾ ಹಂಚಿಕೊಂಡರೆಂದು ಭಾಸವಾಗುತ್ತದೆ. (ಕೂಡ್ಲೂರ ಬಸವಲಿಂಗಪನ ಹಾಡು) ಅದು ಹೀಗಿದೆ.

"ಉಚ್ಚ- ನೀಚ ನುಡಿಯುತಿದ್ದಿ ಮಿಂಡಲಾಡಿ
ಉಚ್ಚಿಯೊಳಗೆ ಉಚ್ಚಿಬಿದ್ದಿ ಮಿಂಡಲಾಡಿ
ಮುಟ್ಟಿಗಿಟ್ಟೀಗೆಂಥದ್ದಿ ಮಿಂಡಲಾಡಿ
ಮುಟ್ಟಿನೊಳೆ ಹುಟ್ಟಿಬಂದಿ ಮಿಂಡಲಾಡಿ
ಹುಟ್ಟಿನೊಳಗೆ ಮುಟ್ಟು ಉಂಟು ಮಿಂಡಲಾಡಿ
ಮುಟ್ಟಿನೊಳಗೆ ಹುಟ್ಟು ಉಂಟು ಮಿಂಡಲಾಡಿ||"[೨೪]

ಕಾಲಜ್ಞಾನದ ಮಾತು ಸತ್ಯವೇ ಆದರೂ, ಅದರ ಕಾರಣ ಮತ್ತು ಪಲ್ಲಟಗಳು ಪರಂಪರೆಯಲ್ಲಿ ಬದಲಾಗುವ ವಸ್ತುನಿಷ್ಠ ತತ್ವವನ್ನು ಗುರುತಿಸಿ ಬಹಿರಂಗವಾಗಿ ಹೇಳಿದ್ದಾರೆ. ಆದ್ದರಿಂದ ಈ ಸಂತರ ನೀತಿಗಳು ಕಟ್ಟುಕತೆಯಾಗದೆ, ಅವು ಹೇಗೆ ಭಿನ್ನವಾಗಿ ಸಮಾಜಕ್ಕೆ ಅನಿವಾರ್ಯವಾಗುತ್ತವೆಂಬ ಅಂಶ ತುಂಬಾ ಕುತೂಹಲಕರವಾದುದಾಗಿದೆ.

ತತ್ವಪದಕಾರರೂ ಕಾಲಜ್ಞಾನಿಗಳೇ, ಕೊಡೇಕಲ್ಲ ಶರಣರೂ ಕಾಲಜ್ಞಾನಿಗಳೇ ಆದರೂ ನಾವು ಕೊಡೇಕಲ್ ಪರಿಸರದ ಸಾರುವಯ್ಯರಿಗೆ ಮಾತ್ರ ಕಾಲಜ್ಞಾನಿಗಳೆಂದು ಗ್ರಹಿಸುತ್ತೇವೆ. ಸುಲಭವಾಗಿ ಹೇಳುವುದಾದರೆ ಒಂದು ನಿರ್ದಿಷ್ಟವಾದ ಸಮುದಾಯದವರಿಗೆ ಮಾತ್ರ ಕಾಲಜ್ಞಾನ ಹೇಳುವ ಸಂತರಿವರೆಂದು ದಾಖಲಿಸಿದ್ದೇವೆ. ಕಾರಣ ನಾವು ಅರ್ಥೈಸುವಂಥಾ ಗ್ರಹಿಸುವಂಥಾ ಸ್ಥಿತಿಯಿಂದ ಹೊರಗಿದ್ದೇವೆಯೇ? ಇಲ್ಲ. ಆದರೂ ದ.ರಾ.ಬೇಂದ್ರೆಯವರ 'ಹಕ್ಕಿ ಹಾರುತಿದೆ ನೋಡಿದಿರಾ? ಕಾಲದ ಪಕ್ಷಿ ಹಾರುತಿದೆ ನೋಡಿದಿರಾ? ಇವರಲ್ಲೂ ಸಾಹಿತ್ಯದ ಕಾಲ ಮತ್ತು ಜ್ಞಾನದ ಪ್ರಶ್ನೆ ಇದೆಯೆಂದು ಸ್ಪಷ್ಟವಾಗಿ ಗುರುತಿಸ ಬಹುದು. ಯಲ್ಲಮ್ಮನ ಸಂಪ್ರದಾಯದಲ್ಲೂ ಕಾಲಜ್ಞಾನದ ಆಶಯಗಳನ್ನು ಕಾಣಬಹುದಾಗಿದೆ.

"ದೇವಿ ಹೇಳತಾಳ ಜೋಗತಿಗೆ ಮಾತೆ
ಪತಿವರತಾ ಧರ್ಮ ನಿಂದೋ ಮಾತಾ
ಪಾಪವಿಲ್ಲದ ಮನ ಮಾಡುಕಾಂತ
ದೇವಿ ಕೊಡುತ್ತಾಳೆ ಮುತ್ತು ಮಾಣಿಕ್ಯ"[೨೫]

ಆದರೆ ಇಲ್ಲಿ ತತ್ವದ ಕಾಲ ಜ್ಞಾನವನ್ನೂ ಅನುಮಾನದಿಂದ ನೋಡುತ್ತೇವೆ. ಆದರೆ ತಿರಸ್ಕರಿಸು ವುದಿಲ್ಲ. ತತ್ವಪದಕಾರರ ಸಂದರ್ಭದಲ್ಲೂ ಇಂತಹದೇ ವಾತಾವರಣವನ್ನು ಕಾಣುತ್ತೇವೆ. ವ್ಯಕ್ತಿನೆಲೆಯಲ್ಲಿ ಗ್ರಹಿಸಲು ಸಾಧ್ಯವಿಲ್ಲವಾದಾಗ ಸಮುದಾಯದ ಜನರೂ ಸುಮ್ಮನಾಗುತ್ತಾರೆ ವಿಮರ್ಶಕರೂ, ಪರದಾಡುವ ಸಂದರ್ಭ ಬಂದಿದೆಯೆಂದು ಸ್ಪಷ್ಟವಾಗಿ ಗುರುತಿಸಬಹುದು.

ಇಂಥಾ ಭಿನ್ನ ಪರದಾಟದ ಗ್ರಹಿಕೆಯಲ್ಲಿ ನಾವು ಸಾಹಿತ್ಯಕ್ಕಿಂತ ಸಂಪ್ರದಾಯ, ಭಕ್ತಿ, ನಿಷ್ಠೆ, ಪ್ರಚಾರಗಳಂಥಾ ಮಾನದಂಡಗಳನ್ನು ಮೊದಲು ಸ್ವೀಕರಿಸಿ ನಂತರ ಸಾಹಿತ್ಯವನ್ನು ಅರ್ಥೈಸುವುದನ್ನು ಕಾಣಬಹುದು. ಇವು ಜನಸಮುದಾಯದ ಮೇಲೆ ಗಾಢವಾದ ಪರಿಣಾಮ ಬೀರುತ್ತದೆ. ಕರ್ನಾಟಕದ ಕಲ್ಯಾಣವೆಂದರೆ, ಶರಣರ ಬೀಡೆಂಬ ಪವಿತ್ರ ಅಂಶವು ದಟ್ಟವಾಗಿರುವುದರಿಂದ ಅಮರ ಕಲ್ಯಾಣ, ಕಡೆಯ ಕಲ್ಯಾಣ, ಕೊಡೆಯ ಕಲ್ಯಾಣವೆಂಬ ಧರ್ಮದ ರಕ್ಷಣೆಯೂ ಒಂದು ಕಾರಣವಾಗಿ, ಈ ಪರಂಪರೆ ತನ್ನ ಸ್ಥಾನವನ್ನು ಗುರುತಿಸಿಕೊಳ್ಳಲು ಸಾಧ್ಯವಾಗಿದೆ. ಕಾಲಜ್ಞಾನದಂಥಾ ಭವಿಷ್ಯದ ತೀರ್ಮಾನವನ್ನು ಮನೆ ಮನೆಗೆ ಹೋಗಿ ಸಾರಿ, ಅರ್ಥೈಸಿ ಹೇಳಿಬರುವಂಥಾ ಸಂಪ್ರದಾಯ ಯಾವ ಪರಂಪರೆಯಲ್ಲೂ ಕಾಣಬರುವುದಿಲ್ಲ. ಅಲ್ಪಮಟ್ಟಿಗೆ ದಾಸರ ಕಾಲದಲ್ಲಿ ಈ ಸಂಪ್ರದಾಯ ಕಾಣಬಂದರೂ, ನಂತರದ ಸಂದರ್ಭದಲ್ಲಿ ಇದು ಕಾಣಸಿಗುವುದಿಲ್ಲ.

ಕೊಡೇಕಲ್‌ನವರು ಈಗಲೂ "ವರ್ಷಕ್ಕೆರಡಾವರ್ತಿಯಂತೆ ಜರುಗುವ ಕೊಡೇಕಲ್ ಬಸವನ ಉತ್ಸವ ಕಾಲಕ್ಕೆ ೧೫ ದಿನ ಮುಂಚಿತವಾಗಿ ಕೊಡೇಕಲ್ ಪೀಠಸ್ಥರು ಹಂಡಿ ಗಡಿಗೆ ಹಿಡಿದು, ಕೊಡೇಕಲ್ ಸುತ್ತಲಿನ ೫ ಗ್ರಾಮಗಳನ್ನು ಸುತ್ತುತ್ತಾ ಹಾಡುತ್ತಾ ದವಸ ದಾನ್ಯಗಳನ್ನು ಬೇಡಿ ಇದರಲ್ಲಿ ಹಾಕಿಸಿಕೊಳ್ಳುತ್ತಾರೆ. ಅವರು ಹಾಗೆ ಭಿಕ್ಷೆಯಿಂದ ಬಂದ ನಂತರವೇ ಕೊಡೇಕಲ್ ಬಸವನ ಉತ್ಸವಕ್ಕೆ ಮೊದಲಾಗುತ್ತದೆ."[೨] ಇಲ್ಲಿ ಭಿಕ್ಷೆ ಮುಖ್ಯವಲ್ಲ. ನಿಷ್ಠೆ ಮತ್ತು ಸಂಪ್ರದಾಯ ಮುಖ್ಯವಾಗುತ್ತದೆ. ಈಗಲೂ ಕೊಡೇಕಲ್ ಮಠದಲ್ಲಿ ಭವಿಷ್ಯ ಸಾರುವ ಶಿಷ್ಯರಿಗೆ ಶಿಕ್ಷಣ ನೀಡಲಾಗುತ್ತದೆ. ಈ ಮಠದ ಶಾಖಾಮಠಗಳೂ ಸಹಿತಾ ಕಾಲಜ್ಞಾನದಂಥಾ ಧರ್ಮಕಲ್ಯಾಣದ ಕಾರ್ಯದಲ್ಲಿ ಆಸಕ್ತರಾಗಿದ್ದು, ಜನಸಮುದಾಯದವರೂ ಪ್ರೇರೇಪಿಸುತ್ತಿದ್ದಾರೆಂಬುದು ಅಷ್ಟೇ ವಾಸ್ತವದ ಸಂಗತಿಯಾಗಿದೆ.

**ವ್ಯಾವಹಾರಿಕ ಕಾಲಜ್ಞಾನ :** ತಾತ್ವಿಕವಾಗಿ ವ್ಯಾವಹಾರಿಕ ಕಾಲವಿಜ್ಞಾನ ತುಂಬಾ ಕುತೂಹಲವಾದದ್ದು. ಮತ್ತು ರೋಚಕವಾದದ್ದು. ತತ್ವಪದಕಾರರು ಗ್ರಹಿಸಿದ ವಾಸ್ತವಿಕ ಅಂಶಗಳು ಹೀಗಿವೆ. "ಮುಗಿಲು ಹರಿದು ಮೇಲೆಬಿತ್ತು | ಜಗದ ವಲ್ಲಭ ಮೇಲಕ್ಕೆತ್ತು"[೨] ಕಾಲಜ್ಞಾನದ ಆಕರವು ಗ್ರಾಮೀಣರಲ್ಲಿ ಶಾಶ್ವತ ಪರಿಹಾರವನ್ನು ಕಂಡುಕೊಳ್ಳುತ್ತದೆ. ಇವು ತತ್ವಪದಕಾರರಲ್ಲಿ ಅನುಭವದ ಅನುಕರಣೆಗಳಾಗಿ ಪ್ರಕಟವಾಗುತ್ತವೆ. ದೈವ ಸಂಕಲ್ಪ, ವಿಧಿ ಬರೆದಂತಾಗಲಿ ಎನ್ನುವ ಹಂತವು ಮುಗ್ದಮನಸ್ಸಿನ ಶುದ್ಧ ನಂಬಿಕೆಯಲ್ಲಿ ಜೀವನವನ್ನು ಕಳೆದವರಿದ್ದಾರೆ, ಕಳೆಯುತ್ತಿದ್ದಾರೆ. ನಸೀಬ, ಕರ್ಮ, ಹಣೆ ಬರಹದ ಲಿಖಿತಗಳು ಮೌಖಿಕವಾಗಿ ಜನರ ಬಾಯೆಲ್ಲ ಹರಿದಾಡುವ ಪದಗಳಾದರೂ ಇವು ಮಾನಸಿಕವಾಗಿ ಮನಷ್ಯನಿಗೆ ಔಷಧಿ ಕೊಡುವ ಮಾತುಗಳಾಗಿವೆ. "ಅತೀಂದ್ರಿಯ ಶಕ್ತಿಯಿಂದ ಬೇರೊಂದು ವ್ಯಕ್ತಿಯ ಮನಸ್ಸಿನಲ್ಲಿರುವ ಆಲೋಚನೆಗಳನ್ನು ತಿಳಿಯುವುದು, ಕಳೆದು ಹೋಗಿರುವ ವಸ್ತುಗಳನ್ನು ಪತ್ತೆ ಹಚ್ಚುವುದು, ಮುಂದೆ ನಡೆಯುವುದನ್ನು ಮೊದಲೇ ತಿಳಿದು ಕೊಳ್ಳುವುದು. ಈ ಎಲ್ಲಾ ಕೆಲಸಗಳು ಭವಿಷ್ಯ ಹೇಳುವುದರಲ್ಲಿ,

ಕೇಳುವುದರಲ್ಲಿ ಸೇರಿಹೋಗುತ್ತದೆ."[೨೮] ಸಹಜವಾಗಿಯೇ ಹಳ್ಳಿಯ ಹೆಂಗಸರು ಭವಿಷ್ಯ ಹೇಳುವವರ ಹತ್ತಿರ ಹೋಗಿ ತಮ್ಮ ಕಷ್ಟಗಳನ್ನು ಪರಿಹರಿಸಿಕೊಳ್ಳುತ್ತಾರೆ. ಪ್ರತಿಯಾಗಿ ಧವಸ ದಾನ್ಯಗಳನ್ನು ಕೊಡುವುದು ರೂಢಿಯಲ್ಲಿದೆ. ಇಲ್ಲಿ ಇಬ್ಬರಿಗೂ ಪರಿಹಾರ ಕೊಡುವುದರಿಂದ ಇದು ವ್ಯವಹಾರ ಕಾಲಜ್ಞಾನವೆಂದು ಗುರುತಿಸಿಕೊಳ್ಳುತ್ತದೆ.

ಕೊಡೇಕಲ್‌ವರ ಕಾಲಜ್ಞಾನವು ವರ್ತಮಾನದ ಭವಿಷ್ಯ ಹೇಳಿದರೆ, ತತ್ವಪದಕಾರನು, ಭವಿಷ್ಯಕಾಲದಲ್ಲಿ ನಿಂತು ಹೇಳಿ ಸಮರ್ಥಿಸಿದ್ದಾರೆ. ಉದಾ: "ತತ್ವಪದಕಾರನಾದ ದೇವದುರ್ಗದ ಚನ್ನಮಲ್ಲನು ಲಿಂಗಪೇಟೆಯ ಜನರು ಮಳೆಯಿಲ್ಲದ ಕಂಗೆಟ್ಟಾಗ 'ಶ್ರೀ ಗುರು ಶಂಕರ ಶಿವ ಸರ್ವೇಶ ಶ್ರೀ ಕಂಠನೇ ಶಿವಲೀಲಾ ಎಂಬ ಹಾಡನ್ನು ಹಾಡಿ ಮಳೆತರಿಸಿದನಂತೆ. ಅತಿವೃಷ್ಟಿಯಿಂದ ಜನರು ಕಂಗೆಟ್ಟಾಗ ಮಳೆನಿಲ್ಲಿಸು ಮಹಾದೇವ ಎಂಬ ಹಾಡನ್ನು ಹಾಡಿ ಮಳೆಯನ್ನು ನಿಲ್ಲಿಸಿದನಂತೆ" ಇಂಥಾ ಶಾಶ್ವತನೆಲೆಗೆ ಅಸ್ತಿತ್ವವಿಲ್ಲವಾದರು ಇದು ಆಧ್ಯಾತ್ಮದ ವ್ಯವಹಾರವಾಗಿದೆ.

ಮಳೆಬೆಳೆಯಿಂದ ಮರ್ತ್ಯ ಜೀವನವ ಕಾಯ್ವ
ಸುಳಿವ ಸೂಕ್ಷ್ಮವ ತೋರಿ ಸುಜನರ ಕಾಯ್ವ
ಆಳವಲ್ಲದ ಅನಂತಕೋಟೆ ಜೀವನ ಕಾಯ್ವ
ಬೆಳಗು ಬೈಗು ಎಂಬ ಬೆಳಗೆದ್ದು ಕಾಯ್ವ[೨೯]

ತತ್ವಪದಕಾರನು ಮಳೆಯಾಗದ ಸಂದರ್ಭದಲ್ಲಿ ಭೂಮಿ ಮತ್ತು ಆಕಾಶವನ್ನು ನೋಡಿ ಹೌಹಾರಿ ಪ್ರಾರ್ಥಿಸುತ್ತಾನೆ. ಫಲವತ್ತಾದ ಭೂಮಿಯಿದ್ದರೂ ಅನಾವೃಷ್ಟಿ ಬರಗಾಲಕ್ಕೆ ಬೇಸತ್ತು ಆಕಾಶ ನೋಡುತ್ತಾ ನಿಟ್ಟಿಸಿರು ಹಾಕವನು. ಭವಿಷ್ಯತ್ ಕಾಲದ ಅಶಾಶ್ವತ ನಿರ್ಣಯಕ್ಕೆ ತತ್ವಪದಕಾರ ಶಕುನ ಮತ್ತು ಗಿಳಿಶಾಸ್ತ್ರಗಳಂಥಾ ಭವಿಷ್ಯಕ್ಕೆ ಮೊರೆಹೋಗುವುದನ್ನು ಕಾಣಬಹುದು.

"ಇವತ್ತಿಗೂ ಕೃಷಿ ಸಂಸ್ಕೃತಿಯಲ್ಲಿ ಬೆಳೆ ಕೊಯ್ಲು ಮಾಡಬೇಕಾದರೆ, ಶುಭ ದಿನದಂದು ಬೆಳೆ ಪೂಜೆ ಮಾಡಿ, ನಾನು ಇಂದಿನಿಂದ ನಿನ್ನ ಕೊಯ್ಲು ಮಾಡುತ್ತೇನೆಂದು ಆಹ್ವಾನ ನೀಡುವ ವಿಷಯ ತಿಳಿಸುವ ಪರಿಪಾಠವಿದೆ. ನಿಸರ್ಗಮುಖಿಯಾದ ಬದುಕು ಅವರೊಂದಿಗೆ ನಾಜೂಕಾಗಿ ವರ್ತಿಸುವ ಈ ವಿಧಾನ ತುಂಬಾ ಅಂತಃಕರಣವುಳ್ಳದ್ದು."[೩೦] ಇಂಥಾ ನಿಸರ್ಗ ಕುರಿತು ತತ್ವಪದಕಾರರು ಸ್ವಾಭಾವಿಕವಾಗಿಯೇ ಮಾತನಾಡಿದರೂ ಕಾಲಜ್ಞಾನದಂಥಾ ಸತ್ಯದ ಒಲವೇ ಆಗುತ್ತದೆ.

ಈ ಹಿನ್ನೆಲೆಯಲ್ಲಿ ತತ್ವಪದಕಾರರೇ ಆಗಲಿ, ಕಾಲಜ್ಞಾನದ ಸಿದ್ಧಾಂತಿಗಳೇ ಆಗಲಿ ಒಂದು ವಿಭಾಗದ ಜ್ಞಾನಕ್ಕೆ ಸೀಮಿತರಾಗದೆ, ಬಹು ವಿಧಜ್ಞಾನ ಶಾಸ್ತ್ರಗಳನ್ನು ಲೌಕಿಕ ಜೀವನಕ್ಕೆ ಅನುಕೂಲವಾಗುವಂಥಾ ಪರಿಣಾಮಗಳನ್ನು ಬಹು ಎಚ್ಚರಿಕೆಯಿಂದ ಹೇಳಿರುವುದು ಗಮನೀಯ ಅಂಶವಾಗಿದೆ. ಸರ್ವಜ್ಞನ ಕಾಲಜ್ಞಾನದ ವಚನಗಳು. ತಾತ್ವಿಕ ಗೂಢಾರ್ಥವನ್ನು ಹೊರಹೊಮ್ಮಿಸುತ್ತವೆ.

''ಪಟ್ಟವಿಲ್ಲದ ಶಿಶುವು ಸೃಷ್ಟಿಯನು ಆಳೀತುಃ'' ಅನಾಚಾರದ ರಾಜಕಾರಣಿ (ರಾಜ) ಇಂಥಾ ಬಹುರೂಪಿ ಸಂತರು ಜ್ಯೋತಿಷ್ಯ, ಖಗೋಲ, ಆರೋಗ್ಯ ಶಾಸ್ತ್ರ ಮುಂತಾದ ಶುದ್ಧ ವಿಜ್ಞಾನದ ವಿಚಾರಗಳನ್ನು ಪ್ರಮಾಣೀಕರಿಸಿದ ನಿದರ್ಶನಗಳುಂಟು.

''ಚಂದ್ರ ಸೂರ್ಯರ ಗ್ರಹಣ ಒಂದೇ ಮಾಸದಿ ಬರಲು
ತಂದೆಯನು ಕಂದನಿರಿದಂದು ಲೋಕಕ್ಕೆ
ಬಂದಿತು ಪ್ರಳಯ ಸರ್ವಜ್ಞ''[೩೧]

ಇದು ಖಗೋಲಶಾಸ್ತ್ರವನ್ನು ರೂಪಿಸುವ ಕಾಲವಾಗಿದ್ದು ಇಲ್ಲಿ ಪ್ರಾಮಾಣಿಕತೆಯಿದೆ, ಬೆಡಗಿದೆ, ಲೋಕೋಕ್ತಿಯಿದೆ. ಇಂಥಾ ಕಾಲಜ್ಞಾನ ಕಾರ್ಯವು ದೇಸೀ ಗ್ರಹಿಕೆಯಲ್ಲಿ ರೂಪುಗೊಂಡ ರಸಾನುಭೂತಿ ಎಂದು ಹೇಳಬೇಕಾಗುತ್ತದೆ. ಇದು ಮನುಷ್ಯ ಮತ್ತು ದೈವದ ನೆಲೆಯ ಮುಖಾಮುಖಿಯ ಪಕ್ವತೆಯನ್ನು ಉಪಶಮನಗೊಳಿಸುತ್ತದೆ. ಈ ದೃಷ್ಟಿಯಿಂದ ಶಿಷ್ಯರ ಕಾಲಜ್ಞಾನ ವರ್ತಮಾನ ಕಾಲದ ಮಾಹಿತಿ ಕೊಡುತ್ತದೆ. ತತ್ವಪದಕಾರಲ್ಲಿ ಪುನರ್ ವ್ಯಾಖ್ಯಾನದ ನಿರೂಪಣೆಯಾಗುತ್ತದೆ.

''ಹಬ್ಬಿತು ಕಾಟಿಗರೊಬ್ಬುಳಿ ಬಲಹೂಡಿ | ಆರ್ಭಟಿಸುತ ಗರ್ಭ
ನಡುಗಿತು ಜನತೆ ಹುಬ್ಬ ಮಾಡುವ ರಣದೊಳಗೆ | ಭೂತಗಳಂತೆ
ಮೆಬ್ಬುಗವಸಿತಗಸಿದಿ ಬಲಗಾರ
ದಿಟ್ಟ ಜಂಗಮರಿವರಟ್ಟೆಂದು ನೂಕುತ
ರಟ್ಟೆಯ ಹಗ್ಗದಿ ಬಂದಿಸುತ
ಶ್ರೇಷ್ಟನೆನಿಪ ದೇವ ದುಷ್ಟರೊಡಗೂಡ''[೩೨]

ಮುಂದೊಂದು ದಿನ ಎರಡು ಜನಾಂಗದ ನಡುವೆ ಭೂಮಿನಡುಗುವಂಥಾ ವಿಪ್ಲವವಾಗುತ್ತದೆ. ಜನಕಂಗಾಲಾಗುತ್ತಾರೆ. ಊರ ಜಂಗಮರನ್ನು ಧಿಕ್ಕರಿಸುತ್ತಾರೆಂಬ ದಿವ್ಯವಾಣಿಯ ಸಾಂಕೇತಿಕತೆಯಿಲ್ಲಿದೆ. ಆದರೂ ಕಾಲಜ್ಞಾನದಂಥಾ ಸಾಹಿತ್ಯವನ್ನೂ ಸೂಕ್ಷ್ಮವಾಗಿ ನೋಡಲು ಪ್ರಾರಂಭಿಸಿದಾಗ ಅನೇಕ ಪ್ರಶ್ನೆಗಳು ಎದುರಾಗುತ್ತವೆ. ಇಂಥಾ ವಿಚಾರದ ಗ್ರಹಿಕೆಯಲ್ಲಿ ಜನಪದ ತತ್ವದ ಸಂವಾದದ ಮೂಲಕ ಗುರುತಿಸಬೇಕಾಗುತ್ತದೆ. ಅದು ಹೀಗಿದೆ.

''ಸಿಟ್ಟಿನ ಶಿವರುದ್ರ ಬಿಟ್ಯಾಕ ಬಬಲಾದಿ
ಮೆಟ್ಟಿ ಮಾಡ್ಯಾರ ಪಡಸಲಿಗಿ | ತೆಳದಾಗ
ನಿಂತು ಸಾರಾಕ ಕಲಿಕಾಲ''[೩೩]

ಕೊಡೇಕಲ್ಲು ಮತ್ತು ಬಬಲಾದಿ ಮಠದವರು ಊರಲ್ಲಿ ಮಳೆ, ಬೆಳೆಯ ಭವಿಷ್ಯವನ್ನು ಸಾರುತ್ತಾ ಭಿಕ್ಷೆಗಾಗಿ ಹೋದಾಗ ಜನಪದರು ಸಾರುವಯ್ಯನನ್ನು ಭವಿಷ್ಯದ ಕರ್ತಾರನೆಂದು ತಿಳಿದು, ಇವರ ಭವಿಷ್ಯವನ್ನು ಗ್ರಹಿಸುವುದು ಅಷ್ಟೇ ಗಮನಾರ್ಹವಾಗಿದೆ.

ಕರಪಲ್ಲದ ಕಾಲಜ್ಞಾನವು ಜನಪದರಲ್ಲಿ ಕರಪಾಲವಾಗಿದೆ. ಕರಪಾಲವನ್ನು ಹೀಗೂ ಗ್ರಹಿಸಬಹುದು. ಭಿಕ್ಷುಕ ರೂಪದಲ್ಲಿರುವ ಶಿವನು ಕೈಗಳೆಂಬ ಪಾತ್ರೆಯಿಂದ ಭಿಕ್ಷೆ ಸ್ವೀಕರಿಸುವನು. ಶಿವನು ಕರಪಲ್ಲನಾಗಿ ಕರವಿನ್ಯಾಸದ ನಿಕಟವರ್ತಿಯಾಗುತ್ತಾನೆ. "ಕರಪಲ್ಲವೆಂದರೆ ಚಿಗುರಿನಂಥಾ ಕೈಬೆರಳುಗಳಿಂದ ನಡೆಯುವ ಆಟ. ಸಂಜ್ಞೆ ಎಂದು ಅರ್ಥೈಸಲಾಗಿದೆ. ಕಾಲಜ್ಞಾನದಲ್ಲಿ ಎಚ್ಚರದ ಸೂಚನೆಗಳನ್ನು ಮುಚ್ಚಿಟ್ಟು ಹೇಳುವ ಸಾಂಕೇತಿಕತೆಯ ರಹಸ್ಯ ದೃಷ್ಟಿ ಬೆಡಗು ಇದ್ದರೆ ಕರಪಲ್ಲ ಸಂದೇಶದಲ್ಲಿ, ಮಿತಶಬ್ದಗಳ ರಹಸ್ಯ ಕರಸಂಜ್ಞೆಗಳ ಮೂಲಕ ಸಾಗುವ ಸಾಂಕೇತಿಕ ಅಗತ್ಯವೊಂದು ಇದ್ದೇ ಇರುವಂತೆ ತೋರುತ್ತದೆ. ಕಾಲಜ್ಞಾನದ ಸೊಲ್ಲಿಗೂ ಕರಪಲ್ಲದ ಪಲ್ಲವಿಗೂ ಅಂಥಾ ಕಡಿದಾದ ವ್ಯತ್ಯಾಸವೇನೂ ಇಲ್ಲ. ಕಾಲಜ್ಞಾನಗಳಲ್ಲಿ ವೀರ ಬಸವಂತನೋ ಚೆನ್ನಬಸವಣ್ಣನೋ ಹುಟ್ಟಿ ಬರುತ್ತಾನೆಂಬ ವಿಶ್ವಾಸ ನಿರೀಕ್ಷೆಯಿದ್ದರೆ ಕರಪಲ್ಲದಲ್ಲಿ"

"ಸುವ್ವಿ ಬಾ ಸಂಗಯ್ಯ | ಸುವ್ವಿ ಬಾ ಲಿಂಗಯ್ಯ
ಸುವ್ವಿ ಬಾ ಚೆನ್ನಬಸವಯ್ಯ | ಸುವ್ವೀ
ಸುವ್ವಿ ಬಾ ಚೆನ್ನಬಸವಯ್ಯ | ಬರುವಾಗ
ಹೊಯ್ಯಲೋ ಬೊಬ್ಬಿ ಜಗವೆಲ್ಲ ಸುವ್ವಿ"[೩೪]

ಇದು ಜನಪದ ಕಾಲಜ್ಞಾನವೆಂದು ಗುರುತಿಸಿಕೊಂಡಿದ್ದರೂ ಸುವ್ವೀss ಅನ್ನುವ ಮಟ್ಟು ಜೀಕು ಖ್ಯಾತವಾಗಿ ಇತ್ತೀಚಿಗೆ ಚಲನಚಿತ್ರ ಹಾಡುಗಳಲ್ಲಿ ಖ್ಯಾತಿಯನ್ನು ಗಳಿಸಿದೆ. ಕಾಲಜ್ಞಾನದ ಉದ್ದೇಶ ಒಂದೇ ಆದರೂ ಅದರ ಅಭಿವ್ಯಕ್ತಿಯಲ್ಲಿ ಭಿನ್ನ ಸ್ವರೂಪವನ್ನು ಗುರುತಿಸಿಕೊಂಡಿದೆ.

**ಖಂಡಜ್ಞಾನ**

ತತ್ವಪದ ಸಾಹಿತ್ಯದಲ್ಲಿ ಖಂಡಜ್ಞಾನದ ಚರ್ಚೆಯು ಬಹು ತೀಕ್ಷ್ಣವಾದ ಮತ್ತು ಆಳವಾದ ವಿಚಾರವಾಗಿದೆ. 'ಖಂ' ಎಂದರೆ ಆಕಾಶ, ಬ್ರಹ್ಮ ಎಂಬ ಪದಗಳಿದ್ದು ಆಕಾಶವೆಂದರೆ ಹೃದಯಕ್ಕೆ ಸೇರಿದ ಬ್ರಹ್ಮನಾಗಿದ್ದಾನೆ. ಪ್ರಕೃತಿಯ ಪಂಚಭೂತ ತತ್ವಗಳನ್ನು ಮನುಷ್ಯ ಸಂಬಂಧದೊಂದಿಗೆ ಸ್ವೀಕರಿಸುತ್ತಾನೆ. ಆದ್ದರಿಂದ ತತ್ವಪದಗಳಲ್ಲಿ ಅಂಡ, ಪಿಂಡ, ಸಂಬಂಧಗಳು ವಿಶಾಲ ಅರ್ಥವನ್ನು ಕೊಡುತ್ತವೆ. ಅದು ಖಂಡಜ್ಞಾನ ಸಾಹಿತ್ಯ ಅಧ್ಯಯನದಿಂದ ತಿಳಿದು ಬರುತ್ತದೆ.

ಖಂಡಜ್ಞಾನದ ತಾತ್ವಿಕಾರ್ಥ ನೀಡುವ ಖಂಡ, ಪಿಂಡ, ಶಬ್ದಗಳು ಭಕ್ತಿ ನಿವೇದನೆಯಲ್ಲಿ ಪಿಂಡಸ್ಥಲವಾಗಿ ಮುಂದೆ ಖಂಡಜ್ಞಾನ ಸ್ಥಲವಾಗುತ್ತದೆ. ಇದನ್ನೆ ಖಂಡಜ್ಞಾನದ ಅಧ್ಯಯನಕಾರರು ಶುದ್ಧ ಆಧ್ಯಾತ್ಮ ರೂಪಕೊಟ್ಟು, ಖಂಡಜ್ಞಾನವೆಂದು ಸ್ಪಷ್ಟಪಡಿಸಿದ್ದಾರೆ.

ಖಂಡಜ್ಞಾನವನ್ನು ಮೊದಲು ಬಳಸಿದವರು ನಮ್ಮ ಪ್ರಾಚೀನ ಅಧ್ಯಯನಕಾರರಾಗಿದ್ದಾರೆ. ಆರು ಬಗೆಯ ಜ್ಞಾನಗಳಲ್ಲಿ ಖಂಡಜ್ಞಾನವು ಒಂದಾಗಿದೆ. ಮತಿಜ್ಞಾನವು ತನ್ನಿಂದಲು ಇವುಗಳಲ್ಲಿ ಶೃತಿಜ್ಞಾನವು ಗುರುವಿನಿಂದಲೂ ಖಂಡಜ್ಞಾನವು ವೇದ ಆಗಮಗಳಿಂದಲೂ ಕೇವಲ ಜ್ಞಾನ ಆಧ್ಯಾತ್ಮದಿಂದಲೂ ತತ್ವಸ್ವರೂಪದಿಂದ ಜ್ಯೋತಿಜ್ಞಾನವೆಂಬ ಅರ್ಥ ಬರುತ್ತದೆ. ಆದ್ದರಿಂದ ತತ್ವಪದ ಸಾಹಿತ್ಯದಲ್ಲಿ ಖಂಡಜ್ಞಾನವನ್ನು ಭಿನ್ನ ದೃಷ್ಟಿಕೋನದಿಂದ ಗ್ರಹಿಸಿದಾಗ ಮಾತ್ರ ಅದರ ಸ್ವರೂಪ ಪ್ರಧಾನವಾಗುತ್ತದೆ.

ಕೊಡೇಕಲ್ಲ ಸಾಹಿತ್ಯದ ಅಧ್ಯಯನಕಾರರು ಅಧ್ಯಯನದ ಅನುಕೂಲಕ್ಕಾಗಿ ಕಾಲಜ್ಞಾನ, ಖಂಡಜ್ಞಾನ, ನೀತಿಜ್ಞಾನ, ಬೋಧಜ್ಞಾನವೆಂದು ಸೂಕ್ಷ್ಮವಾಗಿ ಪ್ರತ್ಯೇಕಿಸಿದ್ದಾರೆ. ಇಂಥಾ ವಿಕಾಸ ಮಾರ್ಗಗಳು ಸೈದ್ಧಾಂತಿಕ ನೆಲೆಯಲ್ಲಿ ಪ್ರಧಾನ ಅಂಶಗಳಾಗಿ ತತ್ವಪದಗಳಲ್ಲಿ ಆತ್ಮತತ್ವಗಳಾಗಿವೆ. ಮಂಜಲಾ೯ ಖಾದರಸಾಬನು "ಅಂಡಪಿಂಡಮುಲೋ ಅಥಡೆ ಉಂಡಗ| ಕೊಂಡರಾಳ್ಳಕು ಮೊಕ್ಕಕು ರಾ| ಅಂಡಮುಲೋನಿ ಅನುಭಾವಮೆರಿಗೆ ಆತ್ಮರಾಮುನಿ ಚೂಸಿ ಸಕೀ ಸರೇ (ಅಪ್ರಕಟಿತ) ಎಂದು ಖಂಡಜ್ಞಾನದ ಪರಿಕಲ್ಪನೆಯನ್ನು ಪರಿಣಾಮಕಾರಿಯಾಗಿ ವ್ಯಾಖ್ಯಾನಿಸುತ್ತಾನೆ. ಅಂಡದ ಮಾನವ ಶರೀರವು ಮಾಂಸ ಖಂಡದಿಂದ ಕೂಡಿದ್ದಾಗಿದೆ. ಇಂಥ ದೇಹ ಮತ್ತು ಮನಸ್ಸನ್ನು ಇಂದ್ರಿಯ ನಿಗ್ರಹದ ಮೂಲಕ ಯೋಗದಲ್ಲಿ ಚೈತನ್ಯಗೊಳಿಸುವುದು ಬಹುಮುಖ್ಯವಾದ ವಿಚಾರವಾಗಿದೆ. ಈ ಹಿನ್ನೆಲೆಯಲ್ಲಿ ತತ್ವಪದಕಾರ ದೇವರನ್ನು ಕುರಿತು ಅಣು, ಅಣುವಿನ ಬ್ರಹ್ಮಾಂಡ ಹಾಗೂ ಅಂಡಾಂಡ, ಪಿಂಡಾಂಡ ಕುರಿತು ಗಂಭೀರವಾಗಿ ಚಿಂತಿಸುತ್ತಾರೆ.

ರಾಯಚೂರು ಜಿಲ್ಲೆಯ ತತ್ವಪದಕಾರರು ಖಂಡಜ್ಞಾನದ ಪರಿಕಲ್ಪನೆಯನ್ನು ಗಂಭೀರ ಸ್ವರೂಪದ ಆತ್ಮ ಮತ್ತು ಆಧ್ಯಾತ್ಮ ಪರ ಚಿಂತನೆಗಳ ಅಭಿವ್ಯಕ್ತಿಗಳಾಗಿ ಬಳಸಿಕೊಂಡಿದ್ದಾರೆ. ಇದು ಸಂಸ್ಕೃತಿಯ ಜ್ಞಾನದ ಹರವುಗಳನ್ನು ಅದರ ವೈವಿಧ್ಯತೆಗಳನ್ನು ಹೇಳುವುದಾಗಿದೆ. ಕ್ರಿ.ಶ. ಹದಿನೆಂಟು-ಹತ್ತೊಂಬತ್ತನೇ ಶತಮಾನದ ಸಂದರ್ಭದಲ್ಲಿ ನಾಡಿನ ಮೇಲೆ ನಡೆದ ನಿರಂತರ ರಾಜಕೀಯ, ಮತೀಯ ದಾಳಿಗಳು, ಕ್ಷಾಮ ಬರಗಾಲದಂಥಾ ನೈಸರ್ಗಿಕ ತೊಂದರೆಗಳು ಜನರಿಗೆ ಕಾಡಿದಾಗ ಸಮಾಜದ ವ್ಯವಸ್ಥೆ ದುರ್ಬಲವಾಯಿತು. ವೀರಶೈವ ವರ್ಗ, ವೈಷ್ಣವ ಧರ್ಮದಲ್ಲಿ, ಅಂತಃಕಲಹಗಳು ಪ್ರಾರಂಭವಾಗಿದ್ದವು. ಇದೇ ಸಂದರ್ಭದಲ್ಲಿ ಬ್ರಿಟಿಷರು, ನಿಜಾಮರು. ಈ ಭಾಗದ ಜನರ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕಿತ್ತುಕೊಂಡಿದ್ದರು. ಜನರು ಯಾವುದೇ ಸಂಘ ಸಂಸ್ಥೆಗಳನ್ನು ಕಟ್ಟಿದರೆ ನಿಜಾಂ ಅನುಮತಿಯನ್ನು ಉಲ್ಲಂಘಿಸಿದರೆ, ೨೦೦ ರೂ. ದಂಡದ ಜೊತೆಗೆ ಒಂದು ತಿಂಗಳು ಜೈಲುವಾಸವನ್ನು ಅನುಭವಿಸಬೇಕಾಗಿದ್ದಿತು. ಇಂಥಾ ವಿಷಮ ಸಂದರ್ಭದಲ್ಲಿ ತತ್ವಪದಕಾರರು, ದೇವರು, ಭಕ್ತಿ, ಧರ್ಮ, ನೈತಿಕತೆಯಂಥಾ ವೈವಿಧ್ಯಮಯ ಸಂಗತಿಗಳತ್ತ ತಮ್ಮನ್ನು ತೆರೆದುಕೊಂಡರು.

"ಯಾತರಿಂದ ಮಾಡಲಿ ಆತ್ಮದ ಪೂಜೆ
ಎತ್ತ ನೋಡಲು ತಾನೆ ತಾನಾಗಿಹನು

ನಿತ್ಯ ನಿರಂಜನ ನಿರಾಳ ನಿರ್ಗುಣ
ಅತ್ಯಧಿಕಾನಂದ ಪರಿಪೂರ್ಣ ಬ್ರಹ್ಮವು
ತನು ಮೂರು ಕರುಣ ನಾಲ್ಕು
ತತ್ವ ಐದರೊಳು ಇನಿತು ತೋರಿಸಿ
ತಾನು ಪ್ರತಿಫಲಿಸುತಿಹನು
ಘನ ಚೈತನ್ಯ ಮೂರುತಿ ತಾನಾದ
ಅಣುರೇಣು ತೃಣಕಾಷ್ಠಾದಿ ಭರಿತಮಾಗಿ
ಎಣಿಕಿಂಗೆ ತಾನು ಮೀರಿ ಇಹನು"[೩೫]

ಬ್ರಹ್ಮಜ್ಞಾನ ಮತ್ತು ದೈವದ ವಿಶ್ವರೂಪವನ್ನು ತಾತ್ವಿಕವಾಗಿ ಮಂಡಿಸುವ ಮೇಲಿನ ಮಾತುಗಳು ಗಮನಾರ್ಹವಾದಂಥದ್ದು. ಕೊಡೇಕಲ್ಲವರ ಬ್ರಹ್ಮವೆಂಬ ಪದದ ಸ್ಥಳದಲ್ಲಿ "ಪರಮಾತ್ಮ ಒಂದೆಂದು ಅರಿತು ತ್ರಿವಿಧ ಭಿನ್ನವೆಂದು ಕಾಣದ ಮೂರ್ಖರು"[೩೬] ಎಂದು ಆತ್ಮನಿಗೆ ಶಿವನೆಂಬ ಪದವನ್ನು ಸಂಜ್ಞಾರ್ಥವಾಗಿ ಸ್ವೀಕರಿಸಿದ್ದು ಕಂಡುಬರುತ್ತದೆ. ಕೊಡೇಕಲ್ಲವರ ಪ್ರಕಾರ ಖಂಡಜ್ಞಾನವೆಂದರೆ ಪರಶಿವನ ನೆಲೆ ಎಂಬುದಾಗಿದೆ.

ತತ್ವಪದಕಾರರಲ್ಲಿ ಆತ್ಮನೆಂದರೆ ಬ್ರಹ್ಮ, ಆತ್ಮಸ್ಥಲದ ಪೂಜೆಯೆಂದರೆ ಪಿಂಡಸ್ಥಲದ ಪೂಜೆಯೆಂದರ್ಥ. ಇವರ ತತ್ವದಲ್ಲಿ ಜೀವನೇ ಧ್ಯಾನ, ಬ್ರಹ್ಮನೇ ಸೂತ್ರಧಾರವೆಂಬ ಅಂಶ ಸ್ಪಷ್ಟವಾಗಿ ಕಂಡುಬರುತ್ತದೆ. ತತ್ವಪದಕಾರನ ಪರಶಿವನು ಮನ, ಚಿತ್ತ, ಬುದ್ಧಿ ಎಂಬ ವಿವೇಕವನ್ನು ಎಚ್ಚರಿಸುವ ಕರುಣೇಂದ್ರಿಯದಲ್ಲಿದ್ದಾನೆ. ಅವನು ನಿರ್ಗುಣನಾಗಿದ್ದಾನೆ. ಪಂಚಭೂತಗಳು, ಪಂಚತನ್ಮಾತ್ರಯಗಳು (ಶಬ್ದಸ್ಪರ್ಶ, ರೂಪ, ರಸ, ಗಂಧ), ಪಂಚಕರ್ಮೇಂದ್ರಿಯಗಳು, ಪಂಚಜ್ಞಾನೇಂದ್ರಿಯಗಳ ಚೈತನ್ಯ ಮೂರುತಿಯಾದ ಇವನು ಪ್ರಕೃತಿ ಮತ್ತು ದೇಹದ ಅಣು ಅಣುವಿನಲ್ಲಿ ವಾಸವಾಗಿದ್ದಾನೆ. ಈ ಆಧ್ಯಾತ್ಮ ಚೈತನ್ಯವೆ ಸತ್ಯವೆಂದು ಖಂಡಜ್ಞಾನದ ಮೂಲಕ ಸ್ಪಷ್ಟಪಡಿಸಿದ್ದಾನೆ.

ತತ್ವಪದಕಾರರ ಹಾಡುಗಳನ್ನು ಗಮನಿಸಿದಾಗ ಶಕ್ತಿವಿಶಿಷ್ಟಾದ್ವೈತ, ಅದ್ವೈತ ಸಿದ್ಧಾಂತಗಳಿಗಿಂತ ಭಿನ್ನವಾಗಿಯೇ ತನ್ನ ದರುಶನ ನಿರೂಪಿಸುವುದು ಕಾಣುತ್ತದೆ. ಭೌತಿಕಾರ್ಥದಲ್ಲಿ ಶಿವತತ್ವವನ್ನು ಹೇಳಿದರೂ ಆತ್ಮದ ಚೈತನ್ಯ ಪಿಂಡದಲ್ಲಿ ಜ್ಞಾನವಂತ ಭಕ್ತನು ವಾಸವಾಗಿದ್ದಾನೆಂದು ಗ್ರಹಿಸಿದ್ದಾನೆ.

ಈ ಭಾಗದ ತತ್ವಪದಕಾರರಿಗೆ ಅನ್ಯಭಾಷೆಗಳ ಪ್ರಭಾವವಿದ್ದರೂ ಸ್ಥಳೀಯ ಮಟ್ಟುಗಳ ಹಾಡಿನ ಪ್ರಕಾರಗಳನ್ನು ಬಳಸಿಕೊಂಡು ಜೀವನದಲ್ಲಿ ತತ್ವ ಹೇಳಲು ಪ್ರಾರಂಭಿಸುತ್ತಾರೆ. ಪ್ರಾಚೀನರಾದ ಬಾಲರಾಮಪ್ಪ, ಮಾಣಿಕ್ಯಪ್ಪನಂಥ ತೆಲುಗು ತತ್ವಪದಕಾರರು ಖಂಡಜ್ಞಾನದ ಸಾಹಿತ್ಯವನ್ನು ಸಮರ್ಥವಾಗಿ ದುಡಿಸಿಕೊಂಡಿದ್ದಾರೆ. ಕಾರಣ ಅಂದಿನ ಸಂದರ್ಭದಲ್ಲಿ ಧಾರ್ಮಿಕ ಸಂಘಟನೆಯನ್ನು ಸಾಂಸ್ಕೃತಿಕವಾಗಿ

ಆಚರಿಸಲು ಅವಕಾಶವಿರಲಿಲ್ಲ. ಮಠಗಳಲ್ಲಿ ಶ್ರಾವಣ ಮಾಸ ಸಂಸ್ಕೃತಿಯ ಆರಾಧನೆಯನ್ನು ನಿಷೇಧಿಸಲಾಗಿತ್ತು. ಸಮಾಜದ ಕೆಳವರ್ಗಗಳಲ್ಲಿ ದೈನಂದಿನ ಜೀವನಕ್ಕಿರುವ ಆತ್ಮೀಯತೆ ಮಠಗಳ ಪ್ರವೇಶಕ್ಕಿರಲಿಲ್ಲ. ದೇವಸ್ಥಾನಗಳಲ್ಲಿ ಆಂತರಿಕ ಶ್ರದ್ಧೆಯಿಂದ ಭಕ್ತಿಯನ್ನು ಅರ್ಪಿಸಲು ಸಾಧ್ಯವಾಗುತ್ತಿರಲಿಲ್ಲ. ಇಂಥ ಕ್ಲಿಷ್ಟ ಸಂದರ್ಭದಲ್ಲಿ ಖಂಡಜ್ಞಾನದ ತತ್ವವನ್ನು ತತ್ವಪದಕಾರರು ನಿರೂಪಿಸಿದರು ಎಂಬುದು ಅಭ್ಯಾಸಾರ್ಹವಾಗಿದೆ.

ಹಿಂದೂ ಧಾರ್ಮಿಕ ಆಧ್ಯಾತ್ಮಿಕ ಚರ್ಚೆ ಎಂದು ಹೇಳಬಹುದಾದ ಖಂಡಜ್ಞಾನ ಸಾಹಿತ್ಯವು ಶುದ್ಧ ದೇಸೀ ಎನ್ನುವ ಕನ್ನಡ ಪ್ರಜ್ಞೆಯಿಂದ ಮೂಡಿಬಂದದ್ದಾಗಿದೆ. ಅತ್ತ ಸಂಸ್ಕೃತದ ಮಹೋನ್ನತ ಮಾದರಿಯನ್ನು ಕೈಬಿಟ್ಟು ಇತ್ತ ಸಮಕಾಲೀನ ರಾಜಕೀಯ ಒತ್ತಡಗಳನ್ನು ಮೀರಿ ರಚನೆಗೊಂಡ ಖಂಡಜ್ಞಾನ ಸಾಹಿತ್ಯದ ಪ್ರಕಾರವು ರಾಯಚೂರು ಜಿಲ್ಲಾ ತತ್ವಪದಕಾರರ ವೈಶಿಷ್ಟ್ಯವನ್ನು ಹೇಳುವಂಥಾದ್ದಾಗಿದೆ. ಪರಕೀಯ ಪ್ರಭಾವವೇ ಪ್ರಧಾನವಾದ ಕಾಲಘಟ್ಟವೊಂದರಲ್ಲಿ ಮೂಡಿ ಬಂದ ಈ ಸಾಹಿತ್ಯ ಸಂವಾದ ಕನ್ನಡದ ಅಧ್ಯಯನವಾದಿಗಳ ಸ್ವಾಭಿಮಾನ ಮತ್ತು ಪ್ರಖರ ಲೋಕಾನುಭವದ ಸಂಕೇತವಾಗಿದೆ. ಇದನ್ನು ಈ ರೀತಿ ಗ್ರಹಿಸಬಹುದು.

"ಸೋಹಂ ಬ್ರಹ್ಮಂ ಶೂನ್ಯಮೈನದಿ | ಅಹಂಹಿಮೈ ವೆಲ್ಲುನದಿ
ಸಹಸ್ರಾರಮುನ ಓಂಕಾರ ಮೈ | ದೇಹ ದೇಹಮುಲಗನ್ನದಿ
ಖಂಡ ಖಂಡಮುಲಗಾನಿ ಅಖಡಂ"[೩೭]

ಮಾಣಿಕಪ್ಪನು ಹೇಳು ಹಾಗೆ ತನ್ನ ದೇಹವನ್ನೆ ದೇವಾಲಯವಾಗಿ ಸೋಹಂ ಭಾವದಿಂದ ಪೂಜಿಸುವುದಾಗಿದೆ. ತಾನೇ ಶ್ರೇಷ್ಠ ಭಕ್ತನೆಂಬ ಅಜ್ಞಾನದ ಅಹಂಕಾರ ಬರುತ್ತದೆ. ಮದೋನ್ಮತ್ತ ಇಂದ್ರಿಯಗಳನ್ನು ಬಗ್ಗಿಸಲು ಯೋಗ ಮತ್ತು ಧ್ಯಾನದ ಮೂಲಕ ಬ್ರಹ್ಮನ ಸಹಸ್ರಾರ ನೆಲೆಗೆ ಏಕಾಗ್ರಚಿತ್ತನಾಗ ಬೇಕಾಗುತ್ತದೆ. ಇದು ಮನಕ್ಕೆ ಅಮೃತ ಕೊಡುವ ಶ್ರವಣಕ್ಕೆ ನಾದ ಉಂಟು ಮಾಡುವ ಇಚ್ಛಾಶಕ್ತಿಯ ಕ್ರಿಯಾಜ್ಞಾನವಾಗಿದೆ. ಇದು ದೇಹದ ಖಂಡ ಖಂಡದಲ್ಲಿ ಅಖಂಡವಾಗಿ ವ್ಯಾಪಿಸಿದೆ. ದೇಹದ ದೈವ ಸಂತೃಪ್ತಿಯೇ ಪ್ರಕೃತಿ ಚೈತನ್ಯ ಪಿಂಡಾಂಡದಲ್ಲಿದೆ. ಇದನ್ನೆ ತತ್ವಪದಕಾರ ಖಂಡಜ್ಞಾನವೆನ್ನುವರು. ತತ್ವಪದಕಾರರ ಖಂಡಜ್ಞಾನ ರಚನೆಗಳಲ್ಲಿ ತಮ್ಮ ಹಿಂದಿನ ಪರಂಪರೆಯ ಪ್ರಭಾವ ಮತ್ತು ಪ್ರೇರಣೆ ಎದ್ದು ಕಾಣುತ್ತದೆ. ನಿಜಗುಣ ಶಿವಯೋಗಿಯ ಶಿವಾದ್ವೈತ ಅಂಶಗಳನ್ನು ರಾಂಪುರ ಭೀಮಣ್ಣ ಸಮರ್ಥಿಸುತ್ತಾನೆ. ಮಾನಸಗಲ ವೆಂಕನಗೌಡನು ಅಲ್ಲಮ ಪ್ರಭುವಿನ ನಿರಾಕಾರ ತತ್ವವನ್ನು ಖಂಡಜ್ಞಾನದ ಚೌಕಟ್ಟಿನಲ್ಲಿ ದೇಸೀ ಭಾಷೆಯ ನೆಲೆಯಲ್ಲಿ ನಿರೂಪಿಸುವುದು ಕಂಡುಬರುತ್ತದೆ.

ಮುಖ್ಯವಾಗಿ ತತ್ವಪದಕಾರರ ಖಂಡಜ್ಞಾನದ ಹಾಡುಗಳು ಉತ್ಕೃಷ್ಟವಾಗಿ ಪ್ರಸಾರವಾಗಲು ಕಾರಣ ನಮ್ಮ ಗ್ರಾಮಗಳೇ ಆಗಿವೆ. "ಹೈದ್ರಾಬಾದ್ ಸಂಸ್ಥಾನದಲ್ಲಿ ಮುಸ್ಲಿಮರು ಗ್ರಾಮಾಂತರ ಪ್ರದೇಶಗಳಿಗಿಂತ ಹೆಚ್ಚಾಗಿ ಸಣ್ಣ-ದೊಡ್ಡ ನಗರಗಳಲ್ಲಿ ನೆಲೆಸಲು ಬಯಸುತ್ತಿದ್ದರು. ಇದರಿಂದಾಗಿ ನಗರಗಳಲ್ಲಿ ಹಿಂದೂಗಳ

ಪ್ರಭಾವವನ್ನು ತಗ್ಗಿಸಲು ಬೇಕಾದ ಎಲ್ಲಾ ನೆರವನ್ನು ಮುಸ್ಲಿಮರಿಗೆ ಅಧಿಕಾರಿಗಳು ಒದಗಿಸುತ್ತಿದ್ದರು. ನಿಜಾಮನಿಗೆ ಮುಸ್ಲಿಮರು ಮಾತ್ರ ದೇವರ ಮಕ್ಕಳಾಗಿಯೂ ಇತರೆ ಧರ್ಮಾವಲಂಬಿಗಳು 'ಕಫೀರ್' ರಾಗಿ ಕಾಣುತ್ತಿದ್ದರು."[೩೮] ಕಾರಣ ನಿಜಾಂಶಾಹಿ ಆಡಳಿತಗಾರರು ನಗರಗಳನ್ನು ತಮ್ಮ ಸ್ವಸ್ಥಾನವನ್ನಾಗಿ ಮಾಡಿಕೊಂಡು ಧಾರ್ಮಿಕ ವ್ಯವಸ್ಥೆಗೆ ತೊಂದರೆ ಕೊಡುತ್ತಿದ್ದರು. ಈ ಆಘಾತದಿಂದ ತತ್ವಪದಕಾರರು ನಗರಗಳನ್ನು ಬಿಟ್ಟು ಗ್ರಾಮಗಳಲ್ಲಿರಲು ಪ್ರಾರಂಭಿಸಿದರು. ಹೀಗಾಗಿ ರಾಂಪುರ ಭೀಮಣ್ಣ ಆದೋನಿ ಬಿಟ್ಟು ರಾಂಪುರ ಗ್ರಾಮಕ್ಕೆ ಬಂದನು. ವೆಂಕನಗೌಡನು ರಾಯಚೂರನ್ನು ತೊರೆದು ಕಡಗಂ ದೊಡ್ಡಿ ಗ್ರಾಮದಲ್ಲಿರುವುದು ಕಂಡುಬರುತ್ತದೆ.

ಹೀಗಾಗಿ ತತ್ವಪದಕಾರರು ತಮ್ಮ ಸ್ವಧರ್ಮದ ಶಾಂತಿಯನ್ನು ಕಾಪಾಡಲು ತಮ್ಮ ತಮ್ಮ ವರ್ಗಗಳ ನೆಲೆಯಲ್ಲಿ ಧ್ವನಿಗೂಡಿಸಿದರು. ವೀರಶೈವ ತತ್ವಪದಕಾರರು, ಸಾಮಾನ್ಯವರ್ಗದ ತತ್ವಪದಕಾರರು, ದಲಿತವರ್ಗದ ತತ್ವಪದಕಾರರು ತಮ್ಮ ತಮ್ಮ ಆಧ್ಯಾತ್ಮ ಮುಖಿ ಪಿಂಡಸ್ಥಲದ ನಿರೂಪಣೆಯನ್ನು ಜ್ಞಾನ ಪೂರ್ವಕವಾಗಿ ಹೇಳುವ ಸಾಮರ್ಥ್ಯವನ್ನು ಗಳಿಸಿದರು.

ತತ್ವಪದಕಾರನಾದ ವೆಂಕನಗೌಡ ಬಯಲಲ್ಲಿ ಬ್ರಹ್ಮಾಂಡ ಬ್ರಾಂತಿಯಿಲ್ಲವೊ ಮನವೆ | ಮಾಯಾಮಯವಾದ ಮರಣ ಜನನ ಮರ್ಮವಿಲ್ಲವೊ | ಬರಿಯ ಬಯಲೆ ಹೊರತು ಅನ್ಯವೇನೂ ಇಲ್ಲವೊ"[೩೯] ಶೂನ್ಯಮಯವಾದ ಈ ಬಯಲು(ಲೋಕ) ಸೃಷ್ಟಿಕರ್ತನ ನಿಯಮಪಾಲಿಸುವುದು ಅದೇ ರೀತಿ ಜನನ ಮರಣಗಳೂ ಸಹಿತ ಬ್ರಹ್ಮನ ಆಜ್ಞೆಯನ್ನು ಪಾಲಿಸುವುದಾಗಿದೆ. ಸತ್-ಚಿತ್ ಆನಂದವೇ ಸತ್ಯ ಬ್ರಹ್ಮನೇ ಮಿಥ್ಯನಾಗಿ ನಮ್ಮ ಜೊತೆ ವ್ಯವಹರಿಸುವನು. ಕೊನೆಗೆ ಜನನ ಮರಣವೂ ಮಾಯೆಯಾಗಿದೆ. ಸಾವಿನಲ್ಲಿ ಕೊನೆಯಾದ ಈ ದೇಹವು ದೇಹದಿಂದ ಬಿಡುಗಡೆ ಬಯಸಿದ ಆತ್ಮ ಪ್ರಕೃತಿಯಲ್ಲಿ ಲೀನವಾಗುತ್ತದೆ. ಇದನ್ನೇ ತತ್ವಪದಕಾರರ ಅರಿವು ಮರಿವು ಎನ್ನುತ್ತಾರೆ. ಬಯಲೆಂಬ ಬ್ರಹ್ಮಾಂಡಕ್ಕೆ ಪಿಂಡಾಂಡವನ್ನು ಹೋಲಿಸುತ್ತಾನೆ. ತತ್ವಪದಕಾರನ ಖಂಡಜ್ಞಾನದ ಸಿದ್ಧಾಂತದಲ್ಲಿ ಹೊಸ ಪ್ರಶ್ನೆಗಳು ಎದುರಾಗುತ್ತವೆ. ಪಿಂಡಾಂಡದ ವಿಮರ್ಶೆಯೆಂದರೆ ಕಾಯಯೋಗ, ಮನೋಯೋಗ, ವಾಕಿಯೋಗಗಳಿಂದ ಪ್ರಕಟವಾಗುವ ದೇಹ ಮೀಮಾಂಸೆಯಾಗಿದೆ. ತತ್ವಪದಕಾರನ ಖಂಡಜ್ಞಾನದ ಪರಿಶೀಲನೆಯಲ್ಲಿ ಯೋಗಸೂತ್ರದ ಭಿನ್ನ ಸಂವೇದನೆ ಸೈದ್ಧಾಂತಿಕ ಒಲವಿನಿಂದ ಪ್ರಕಟವಾಗುತ್ತದೆ.

ರಾಯಚೂರು ಭಾಗದ ತತ್ವಪದಕಾರರ ಖಂಡಜ್ಞಾನದ ಹಾಡುಗಳಲ್ಲಿ ದೇಸೀ ಪ್ರಜ್ಞೆಯ ಸಾಮಾಜಿಕ ಆಯಾಮಗಳಿವೆ. ಭಿನ್ನ ಅರ್ಥಗಳ ನಿವೇದನೆ, ಸಾಮಾನ್ಯರ ಬದುಕಿಗೆ ಸ್ಪಂದಿಸುವ ತಂತ್ರ ಇವರ ಹೇಳಿಕೆಯಲ್ಲಿವೆ. ಕಾರಣ ಆತಂಕಗೊಂಡ ಜನಸಮುದಾಯ ಮಾನಸಿಕವಾಗಿ ಬಲಿಷ್ಠರಾಗಲಿ ಆತ್ಮ ಚಿಂತನೆಯಿಂದ ಧಾರ್ಮಿಕವಾಗಿ ಆನಂದ ಹೊಂದಲಿ ಎಂದು ಸರಳ ಭಾಷೆಯಲ್ಲಿ ದೇಹವನ್ನು ಪ್ರಧಾನವಾಗಿಟ್ಟುಕೊಂಡು ಪಿಂಡಾಂಡ ಯೋಗವನ್ನು ಸಮರ್ಥಿಸಿದ್ದಾರೆ.

“ಕಾಯವೆಂಬ ಜಗಲಿ ಮಧ್ಯದಿ
ಮಾಯವರ್ಣದ ಜಗಲಿ ಮೇಲೆ
ಜೀವ ಭಾವ ನೋಡುತಲಿ ಸೋಹಂ
ಎಂದು ಒಡಗೂಡಿದೆ.”[೪೦]

ಪ್ರಕೃತಿ ಸೂಕ್ಷ್ಮಕಾಯವಾದ್ದರಿಂದ ಜೀವಾತ್ಮ ಸಂಬಂಧದ ಆಶಯ ಹೇಳುತ್ತಾನೆ. ತತ್ವವೆಂದು ನಿರ್ದಿಷ್ಟವಾಗಿ ಹೇಳುವುದಿಲ್ಲ. ಏಕೆಂದರೆ ಪಿಂಡಸ್ಥಲದಲ್ಲಿ ತತ್ವ ಹೇಳಿದರೆ ಖಂಡಸ್ಥಲ ಜೋಲಿ ಹೊಡೆಯುತ್ತದೆ. ಈ ಸಂಬಂಧದಿಂದ ತತ್ವಪದಕಾರ ಖಂಡಜ್ಞಾನದ ಬಗ್ಗೆ ನಿಖರವಾಗಿ ಹೇಳಬೇಕಾದರೆ ಕಾಯವನ್ನು ಹದಗೊಳಿಸುವ ಬಗೆ ಯೋಗದಲ್ಲಿ ತಿಳಿದಿರಬೇಕಾಗುತ್ತದೆ. ಆತ್ಮದ ನಿಸ್ಸಂಗ ಭೂಮಿಕೆಯ, ತತ್ವದಲ್ಲಿ ತನ್ನ ವಾಕ್ ಮೀಮಾಂಸೆಗೆ ಈ ಇಂದ್ರಿಯಗಳ ಒಡೆಯ ನಾನಲ್ಲ. ನಾನು ಸೋಹಂ ಭಾವದ ಮನೋದೈವದ ಅಂಶ ನಾನೆಂದು ಸ್ಪಷ್ಟೀಕರಿಸುತ್ತಾನೆ. ಇದೇ ತತ್ವಪದಕಾರನ ಖಂಡಜ್ಞಾನದ ನಿವೇದನೆಯಾಗಿದೆ.

ಬ್ರಿಟಿಷ್ ಮತ್ತು ನಿಜಾಂಶಾಹಿ ಆಡಳಿತದಲ್ಲಿ ತತ್ವಪದಕಾರನ ಸಂವೇದನೆಗೆ ಉತ್ತಮವಾದ ಪ್ರೋತ್ಸಾಹ ಇರಲಿಲ್ಲವೆಂದೇ ಹೇಳಬೇಕು. ಸಮಾಜದ ಆತಂಕಗಳು ಮತ್ತು ಸಾಂಸ್ಕೃತಿಕ ಸಂಬಂಧಗಳಲ್ಲುಂಟಾದ ವ್ಯಕ್ತಿ, ಸಮೂಹ ನಡುವಿನ ಬಾಂಧವ್ಯಗಳನ್ನು ದೂರ ಮಾಡಿದವು. ಪಿಂಡಜ್ಞಾನದ ತತ್ವಗಳನ್ನು ಮುಚ್ಚಿ ಹೇಳಬೇಕಾದ ಅನಿವಾರ್ಯತೆ ಸೃಷ್ಟಿಯಾಯಿತು. ರಾಯಚೂರಿನಲ್ಲಿ “ಪಂಡಿತ ತಾರಾನಾಥರ ಉಪನಿಷತ್ತು ಗೀತೆಗಳು ಮತ್ತು ಸಂಕೀರ್ತನೆಗಳು ಬಹಿರಂಗವಾಗಿ ಪ್ರಚಾರವಾದವು. ಹಿಂದಿ ಭಾಷೆಯಲ್ಲಿ ಬರೆದ ದೀನಬಂಧು ಕಬೀರ, ಇನ್ಸಾಫ್, ಮೋಹನಾಸ್ತ್ರವೆಂಬ ನಾಟಕಗಳು ನಿಜಾಂ ಸಂಸ್ಥಾನದಲ್ಲಿ ಮೆರೆಯುತ್ತಿದ್ದ ಮತಾಂಧ ಶಕ್ತಿಗಳ ವಿರುದ್ಧ ಸಾರ್ವಜನಿಕರು ದಂಗೆ ಏಳುವಂತೆ ಪ್ರಚೋದನೆ ನೀಡಿದವು.”[೪೧] ಈ ಹಿನ್ನೆಲೆಯಲ್ಲಿ ತತ್ವಪದಕಾರರ ಪದಗಳನ್ನು ಗಮನಿಸಿದಾಗ ಅವು ಮಾನವನಿಗೆ ಧಾರ್ಮಿಕ ಜ್ಞಾನವನ್ನು ನೀಡುವುದರ ಜೊತೆಗೆ ಸಾಮಾಜಿಕ ಕಾಳಜಿಯನ್ನು ಮೂಡಿಸುತ್ತವೆ ಎಂಬುವುದನ್ನು ಗುರುತಿಸಬಹುದಾಗಿದೆ.

ಇಂಗ್ಲೀಷ್ ಮತ್ತು ಉರ್ದು ಮತಾಂಧತೆಯ ಶಿಕ್ಷಣ ಕ್ರಮದಿಂದ ದೇಸೀ ತತ್ವಪದಕಾರರ ಅನುಸಂಧಾನದ ಫಲವಾಗಿ ಯಶಸ್ವಿ ಕನ್ನಡ ತತ್ವಪದ ಪರಂಪರೆ ಮೋಡಿಲಿಪಿಗಳಂಥ ಸಾಂಕೇತಿಕ ಮಾರ್ಗಗಳಿಗೆ ತಮ್ಮನ್ನು ತೆರೆದುಕೊಂಡರು. ಖೇಮಣ್ಣನಂಥ ತತ್ವಪದಕಾರ ಪಿಂಡಸ್ಥಲದ ಹಾಡುಗಳಿಂದ ಪ್ರೇರಣೆ ಪಡೆದ ಜೀವಸಂಬೋಧನಾ ಹಾಡುಗಳ ಮುಖೇನ ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಒಂದರ್ಥದಲ್ಲಿ ಕೈವಲ್ಯ ಪದಗಳ ಆಯ್ಕೆಯ ವಿಷಯದಲ್ಲಿ ತತ್ವಪದ ಸಂಸ್ಕೃತಿಯು ಖಂಡಜ್ಞಾನದ ಅಂತಸ್ಸತ್ವದಲ್ಲಿ ಪ್ರಧಾನವಾಗಿ ಗುರುತಿಸಿಕೊಂಡಿದೆ. ತತ್ವಪದಕಾರರಾದ ಖೇಮಣ್ಣನವರು ಈ ರೀತಿ

ಹೇಳುತ್ತಿದ್ದಾರೆ. "ನೋಡಬಾರದೆ ಆತ್ಮ ನೋಡಬಾರದೆ | ನೋಡಿ ಆತ್ಮ ಕಳೆಯ ಸೂಡಿ | ಆಡಿ ಪಾಡಿ ಹರುಷದಿಂದ" ತತ್ವಪದಕಾರರ ಆತ್ಮದ ಪರಿಕಲ್ಪನೆಯ ಪ್ರಯೋಗಶೀಲ ಶೋಧದಲ್ಲಿ ಪ್ರಾಚೀನ ಧಾರ್ಮಿಕ ಪರಂಪರೆಯ ಆರು ಬಗೆಯ ಜ್ಞಾನಗಳ ಸಾಹಿತ್ಯಿಕ ಪ್ರಕಾರಗಳಿವೆ. ಇಂಥಾ ನಿರಂತರ ಅನ್ವೇಷಿತ ಗುಣವು ಕಾರಣವಾಗಿ ತತ್ವಪದಕಾರರು ತಮ್ಮ ಜ್ಞಾನ ಪರಂಪರೆಗೆ, ಖಂಡಜ್ಞಾನದ ಅಭ್ಯಾಸದಲ್ಲಿ ಆಧುನಿಕತೆಗೆ ತಮ್ಮನ್ನು ತೆರೆದುಕೊಂಡಿದ್ದಾರೆ. ಇವು ಕೊರ್ವಿಹಾಳ ಕಬೀರನಂಥಾ ತತ್ವಪದಕಾರರಲ್ಲಿ ಆಸಕ್ತಿಯ ಮಾಧ್ಯಮಗಳಾಗಿವೆ. ಕೊರ್ವಿಹಾಳ ಕಬೀರನ ಹೇಳಿಕೆಯನ್ನು ಹೀಗೆ ಗಮನಿಸಬಹುದು. ನನ್ನ ಮಾವನೇ ನನಗೆ ಗುರು (ಮಂಜಲರ್ಾ ಖಾದರ ಸಾಬ್) ಆ ಗುರುವಿನ ತಪಸ್ಸೇ ನನ್ನ ಜ್ಞಾನಕ್ಕೆ ಕಾರಣ. ನನ್ನ ಶ್ರದ್ಧೆ, ಶರಣಾಗತಿಗಳು ಮನುಷ್ಯ ಸಹಜವಾದ ಅಹಂನ್ನು ತೊಡೆಯುವ ಕ್ರಿಯೆಗಳಾಗಿವೆಯೆಂದು, ಖಂಡಜ್ಞಾನದ ಹಾಡುಗಳಲ್ಲಿ ನನಗೆ ಗುರುವಿನ ಪಾತ್ರ ಸ್ವೀಕಾರಾರ್ಹವಾಗಿದೆ.

ಕೊರ್ವಿಹಾಳ ಕಬೀರನ ಮೂಲ ಮಂತ್ರದ ಕೀಲು ನೋಡಮ್ಮಾ | ಕಾಲ ಯಮನ ಬಾದೆಯನು ಕಡಿಯಮ್ಮಾ | ಇಂಥಾ ವೈವಿಧ್ಯಮಯ ಆತ್ಮಸಾಹಿತ್ಯವನ್ನು ಕ್ರೋಢೀಕರಿಸುವುದರ ಮೂಲಕ ತತ್ವಪದಕಾರ ತನ್ನ ಹಾಡಿನ ಆಚರಣೆಯಲ್ಲಿ ಖಂಡಜ್ಞಾನದ ಕರ್ತವ್ಯವನ್ನು ಮರೆಯುವುದಿಲ್ಲ. ಹೆಚ್ಚಾಗಿ ತತ್ವಪದಗಳಲ್ಲಿ ರಾಗ-ತಾಳದ ಆಚರಣೆಯಿದ್ದರೆ, ಪಿಂಡಸ್ಥಲದ ಹಾಡುಗಳಲ್ಲಿ ಬೋಧನೆ ಮತ್ತು ನಿರೂಪಣೆ ಪ್ರಧಾನವಾಗಿರುತ್ತದೆ.

"ಅಂಡಬ್ರಹ್ಮಾಂಡದೊಳಡಕವಾಗಿ ಪಿಂಡದಿ ಪೂರ್ಣವಾಗಿ
ಖಂಡಿತ ಮಿಲ್ಲೆನಿಸಿ ಕಾಣಿಸುವ
ಗಂಡು ಹೆಣ್ಣುಗಳೊಳು ಏಕವಾಗಿ ಕಂಡರೆ ಎರಡಾಗಿ
ಚಂದ್ರ ಪ್ರಕಾಶನ ಉನ್ಮನಿಯೋಗ"[೨]

ತತ್ವಪದಕಾರ ಈ ಹಾಡನ್ನು ಖಂಡಜ್ಞಾನದ ಕೇಂದ್ರೀಕೃತ ಆಶಯದಲ್ಲಿ ಸಮರ್ಥಿಸಿದ್ದಾನೆ. ಅಂಡ, ಪಿಂಡ, ಬ್ರಹ್ಮಾಂಡದ ಜ್ಞಾನವು ಆಧ್ಯಾತ್ಮಿಕ ಬರಹ ಕ್ರಮದಲ್ಲಿ ಭಿನ್ನ ಅರ್ಥಗಳ ಮಾದರಿಯನ್ನು ಕಾಣಬಹುದು. ಅಲ್ಲಮಪ್ರಭುವಿನ ವಚನದಲ್ಲಿ ಖಂಡಜ್ಞಾನವು ಕ್ಲಿಷ್ಮವಾಗಿ ಕಂಡರೆ ತತ್ವಪದಕಾರ ತನ್ನ ಅನುಭವದಿಂದ ನೇರವಾಗಿ ಸರಳವಾಗಿ ವ್ಯಾಖ್ಯಾನಿಸುತ್ತಾನೆ. ಆದಿ ಪಿಂಡವೇ ಜೀವ ಪಿಂಡವಾಗಿದೆ. ಅಷ್ಟತನು ಮೂರ್ತಿಗಳು (ಪೃಥ್ವಿ ಅಪ್ಪು, ವಾಯು, ತೇಜ, ಆಕಾಶ, ಚಂದ್ರ, ಸೂರ್ಯ, ಜೀವಾತ್ಮ) ಎಂದು ಉತ್ಪತ್ತಿಯಾದವೊ ಅಂದಿನಿಂದ ಭವ, ಭವಗಳಲ್ಲಿ ಬ್ರಹ್ಮಕೃಪೆಯಿಂದ ಭಾವಕಲ್ಪಿತ ತೀರಿ, ಬ್ರಹ್ಮನ ಪಿಂಡಸ್ವರೂಪವನ್ನೆ ಅದು ಅಂಗೀಕರಿಸಿದೆಯೆಂದು ಖಂಡಜ್ಞಾನದ ಬಗ್ಗೆ ದಿಟ್ಟ ತೀರ್ಮಾನ ಕೊಡುತ್ತಾನೆ. ಗಂಡು ಹೆಣ್ಣುಗಳು ಏಕವಾಗಿ ಕಂಡರೆ(ಆತ್ಮ) ಇಂಥಾ ಪ್ರಜ್ಞಾಪೂರ್ವಕ ಒಳಸ್ವರೂಪಗಳು ಏಕೀಕೃತವಾಗಿ ನಮ್ಮ ಪರಂಪರೆಯ ಹಲವಾರು ಜ್ಞಾನಧಾರೆಗಳು ಆತ್ಮದ ಅಧ್ಯಯನಕ್ಕೆ ಸ್ಥಿರೀಕೃತವಾಗಿದೆ.

ತತ್ವಪದಕಾರ ಖಂಡಜ್ಞಾನದ ಚೈತನ್ಯತೆಯನ್ನು ಆತ್ಮದ ಮೂಲಕ ಮುಖಾಮುಖಿಯಾಗಿ ಹೇಳುವಾಗ, ಯೋಗದಲ್ಲಿ ಉನ್ಮನಿಸ್ಥಾನ, ಆರನೇಯ ಸ್ಥಾನವಾಗಿದ್ದು, ಈ ಸ್ಥಾನಕ್ಕೆ ತತ್ವಪದಕಾರ ಮನೋಭೂಮಿಕೆಯೆಂದು ತೀರ್ಮಾನಿಸಿದ್ದಾನೆ. ಈ ಹಂತದಲ್ಲಿ ದೇಹವನ್ನು ಹದಗೊಳಿಸಬೇಕಾದರೆ ಇವನ ಅಂಗಾಂಗಗಳೆಲ್ಲಾ ಸ್ತಬ್ಧವಾಗುತ್ತವೆ. ಇಂಥಾ ವೈವಿಧ್ಯ ಕ್ರಿಯಾರೂಪದ ಬಗ್ಗೆ ಜ್ಞಾನ ಹೊಂದಿದವನಿಗೆ ಖಂಡಜ್ಞಾನಿಯೆಂದು ಸಮರ್ಥಿಸಬಹುದಾಗಿದೆ.

ನಾನು ಚರ್ಚೆ ಮಾಡಿದ ಯಾವುದೇ ತತ್ವಪದಕಾರನಾಗಲಿ ಒಬ್ಬ ವ್ಯಕ್ತಿಯಾಗದೆ, ಜನಸಂಸ್ಕೃತಿಯ ವಿಕಾಸಕ್ಕೆ ಆದರ್ಶ ಪುರುಷನಾಗಿದ್ದಾನೆಂಬುದು ಬಹು ಗಮನಾರ್ಹ. ಪ್ರಭುತ್ವದಲ್ಲಿ ಉರ್ದು ಭಾಷೆಯಿದ್ದರೂ ಜನನುಡಿಯ ಕನ್ನಡ ಭಾಷೆಯನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ.

ಕೊಡೇಕಲ್ಲವರ ಕಾಲಜ್ಞಾನ, ಖಂಡಜ್ಞಾನ, ನೀತಿಜ್ಞಾನ ಬೋಧ ಜ್ಞಾನ ಹೀಗೆ ಯಾವುದೇ ವರ್ಗದ ರಚನೆಗಳಿರಲಿ ಅವುಗಳ ನುಡಿ ಸಂಖ್ಯೆ ೨೫ ರಿಂದ ೧೨೫ರವರೆಗೆ ಹರಡಿಕೊಂಡಿರುತ್ತದೆ. ತತ್ವಪದಗಳಲ್ಲಿ ೫, ೬ ಅಥವಾ ೮, ೧೦ ನುಡಿಗಳಿರುತ್ತವೆ. ಕೊಡೇಕಲ್ಲವರ ಸಾಹಿತ್ಯದಲ್ಲಿ ಸುದೀರ್ಘವಾದ ಕಥಾನಕದ ಹರವು ಇರುತ್ತದೆ. ಇಲ್ಲಿ ಚಿಕ್ಕ, ಚಿಕ್ಕ ನಿರೂಪಣೆಯ ಬೃಹತ್ ಅರ್ಥಕೊಡುವ ಬಿಡಿ ಬಿಡಿ ವಿಚಾರಗಳಿರುತ್ತವೆ. ಈ ಎರಡೂ ಪರಂಪರೆಗಳು ಮೌಖಿಕ ಇತಿಹಾಸದ ಬೆಡಗಿನ ಭಾಷೆಯ ಮಾಹಿತಿ ಕೊಡುತ್ತದೆ. ಕೊಡೇಕಲ್ಲವರ ತತ್ವಪದಕಾರರ ಅರ್ಥ ಮತ್ತು ನಿರೂಪಣೆಯ ಉಲ್ಲೇಖಗಳು ಒಂದೇ ನೀತಿಯನ್ನು ಪ್ರತಿಬಿಂಬಿಸುತ್ತದೆ.

ತತ್ವಪದಗಳು ಬೇಗ ಮನಸೆಳೆಯುವಂತೆ ಪಿಂಡಸ್ಥಲದ ಹಾಡುಗಳು ಬೇಗ ಮನತಟ್ಟುವುದಿಲ್ಲ. ಕಾರಣ ಅದರ ಗಂಭೀರ ತಾತ್ವಿಕತೆ. ಕೆಲವು ತತ್ವಪದಗಳಿಗೆ ಪಲ್ಲವಿಯಿರುತ್ತದೆ. ಕೆಲವು ಪದಗಳಿಗೆ ಇರುವುದಿಲ್ಲ. ತತ್ವಪದಗಳಿಗೆ ಛಂದನಿಯಮವಿಲ್ಲದಿದ್ದರೂ ಹಾಡುವಾಗ ತ್ರಿಪದಿ, ಚೌಪದಿ, ಏಳೆಯಂತೆ ಭಾಸವಾಗುತ್ತದೆ. ತತ್ವಪದಗಳು ಮಿಶ್ರದಾರ್ಶನಿಕ ಪ್ರೇರಣೆ ಪಡೆದು ಮೌಖಿಕ ಕನ್ನಡ ಸಾಹಿತ್ಯದ ಮೇಲೆ ಪ್ರಭಾವ ಬೀರಿದೆ. ಈ ಸಾಹಿತ್ಯ ರೂಪವೇ ತಂತ್ರ, ಅಭಿವ್ಯಕ್ತಿತ್ವ ಮಾರ್ಗಗಳಾಗಿವೆ. ಓದುವಾಗ, ಹಾಡುವಾಗ ತತ್ವಪದಗಳು ಜನಸಂಸ್ಕೃತಿಯನ್ನು ಮುಕ್ತವಾಗಿ ಆಕರ್ಷಿಸಿವೆ. ಇಂಥಾ ತತ್ವದಿಂದ ತತ್ವಪದಕಾರರ ಆಧ್ಯಾತ್ಮಿಕ ಹಸಿವಿನ ಚಿಂತನೆಯೇ ಖಂಡಜ್ಞಾನ ಸಾಹಿತ್ಯವಾಗಿದೆ.

### ಡಂಗುರ ಪದಗಳು

ಡಂಗುರ ಪದವೆಂದರೆ ತಮಟೆ, ಡೋಲು ಮುಂತಾದ ವಾದ್ಯಗಳನ್ನು ಬಳಸಿ ಕಾಲಜ್ಞಾನದ ವಿಷಯವನ್ನು ಬಹಿರಂಗ ಪಡಿಸುವುದು ಎಂದು ತಿಳಿದುಬರುತ್ತದೆ. ಇದಕ್ಕೂ ಮುಂಚೆ ಜನಪದರಲ್ಲಿ, ಡಂಗುರ ಸಾರುವ ಬಳಕೆಯಿತ್ತು. ಗ್ರಾಮೀಣ ಭಾಗದಲ್ಲಿ ಮಾಧ್ಯಮದ ಕೊರತೆಯಿಂದ ನಿರ್ದಿಷ್ಟವಾದ

ದಿನ ಹಬ್ಬ ಆಚರಿಸಲು ಜನರಿಗೆ ಗೊಂದಲವಾಗುತ್ತದೆಂದು ಮನಗಂಡು ನಿಗಧಿಪಡಿಸಿದ ಹಬ್ಬದ ದಿನವನ್ನು ಡಂಗುರದಿಂದ ಊರಿನ ಹಿರಿಯರು ಪ್ರಚಾರ ಮಾಡುತ್ತಿದ್ದರು. ಈಗಲೂ ಈ ಆಚರಣೆ ಗ್ರಾಮೀಣ ಭಾಗದಲ್ಲಿದೆ. ಊರಿನಲ್ಲಿ ಪ್ರಮುಖವಾದ ವಿಚಾರವನ್ನು ನ್ಯಾಯದ ಮುಖಾಂತರ ತೀರ್ಮಾನ ಮಾಡಲು ಛಾವಡಿ ಕಟ್ಟೆಯ ಹತ್ತಿರ ಬರುವಂತೆ ಊರಿನ ಸಮಸ್ತ ಜನರಿಗೆ ಆಹ್ವಾನ ತಿಳಿಸಲು ಡಂಗುರವನ್ನು ಬಳಸುತ್ತಾರೆ. ಇದೇ ಉದ್ದೇಶ ಮತ್ತು ಪ್ರೇರಣೆಯಿಂದ ಸಂವಹನದ ದೃಷ್ಟಿಯಿಂದ ಡಂಗುರ ಪದಗಳು ಕಾಲಜ್ಞಾನ ಭಾಷೆಯಲ್ಲಿ ಪ್ರಕಟವಾದವೆಂದು ಹೇಳಬಹುದು.

ಕಾಲಜ್ಞಾನ ಸಾರುವ ಡಂಗುರ ಪದಗಳು ವಾದ್ಯಪ್ರಧಾನ ನಿರೂಪಣೆಗಳಾಗಿವೆ. ಈ ಪದಗಳು ಜನರಲ್ಲಿ ತೀವ್ರ ಜಾಗೃತಿಯನ್ನುಂಟು ಮಾಡುವ ರಚನೆಗಳಾಗಿವೆ.

> ''ಹುಯ್ಯಲೊ ಡಂಗುರವ ಕೈಯೆತ್ತಿ ಲೋಕದೊಳು ಹುಯ್ಯಲೊ ಡಂಗುರ
> ಸೈಯೆಂದು ಸತ್ಪುರುಷರ ಉಡಿಗಟ್ಟಿ ತಿಳಿಯಲೆಂದು ಹುಯ್ಯಲೊ ಡಂಗುರವ
> ಇಲ್ಲದುಂಟೆನಿಸುವ ಖುಲ್ಲನ ಬಾಯ ಮೇಲೆ ಹುಯ್ಯಲೊ ಡಂಗುರವ
> ಸುಳ್ಳಲ್ಲವೀಸಾಕ್ಷಿ ಎಲ್ಲರೂ ಕೇಳಿರೆಂದು ಹುಯ್ಯಲೊ ಡಂಗುರವ
> ಜ್ಞಾನವಿಲ್ಲದ ಸ್ನಾನ ಮಾಡಿದರೇನು ಹುಯ್ಯಲೊ ಡಂಗುರವ
> ಮೀನು ನೀರೊಳಗಿರ್ದು ನೀರಿನ ಒಲವರಿಯದೆಂದು ಹುಯ್ಯಲೊಡಂಗುರವ''[೪೩]

ನೀರಲಕೇರಿ ಬಸವಲಿಂಗ ಶರಣರಿಂದ ರಚಿತವಾದ ಈ ಡಂಗುರಪದದ ಮಾದರಿಯನ್ನು ಗಮನಿಸಬೇಕು. ಸರಳವಾಗಿ ಬದುಕಿನ ತಾತ್ವಿಕ ನೆಲೆಗಳನ್ನು ಮನುಷ್ಯನ ನಡವಳಿಯ ಸಂಬಂಧಗಳನ್ನು ವಿಶ್ಲೇಷಿಸುವ ಈ ರಚನೆ ಹೇಳಬೇಕಾದ ವಿಷಯವನ್ನು ಸಾಕ್ಷೀಕರಿಸುತ್ತದೆ. ಕೈಯೆತ್ತಿ ಲೋಕದೊಳು ಹುಯ್ಯಲೊ ಡಂಗುರವ ಎನ್ನುವ ವಾಕ್ಯವೆ ಹೇಳುಗನ ಮಾತಿಗಿರುವ ಖಚಿತತೆಯನ್ನು ಸ್ಪಷ್ಟತೆಯನ್ನು ಸಾರುವಂಥದ್ದಾಗಿದೆ. ಸಂಪ್ರದಾಯ ಬದುಕಲ್ಲಿ ಕೈ ಎತ್ತಿ ಹೇಳುವ ಹಲವಾರು ಪ್ರಸಂಗಗಳು ಕಾಣುತ್ತೇವೆ, ಎರಡು ಕೈ ಎತ್ತುವುದು ಸೋಲಿನ ಸಂಕೇತವಾದರೆ, 'ಕೈ ಎತ್ತುವುದು' 'ಎತ್ತಿದ ಕೈ' ಎನ್ನುವ ಪರಿಕಲ್ಪನೆ ಗಳು, ಮಾತಿಗಿರುವ ಗಾಢನಂಬಿಕೆಯನ್ನು, ಅದರ ಎಲ್ಲಾ ಅಂತಃಸತ್ವಗಳೊಂದಿಗೆ ಪರಿಣಾಮಕಾರಿಯಾಗಿ ಹೇಳುವುದೇ ಆಗಿದೆ. ಪ್ರತಿಸಾಲಿನ ಕೊನೆಯಲ್ಲಿ ಕಾಣುವ 'ಹೊಯ್ಯಲೊ ಡಂಗುರ' ಎನ್ನುವ ಪದ ಸಮುಚ್ಛಯವೆ. ಸಂದರ್ಭದ ಪರಿಣಾಮಕಾರಿ ಸಂವಹನವನ್ನು ಗಟ್ಟಿಗೊಳಿಸುವುದಾಗಿದೆ. ಇಂಥ ರಚನಾಕ್ರಮಗಳು ವ್ಯಕ್ತಿನಾದ ಅನಿಸಬಹುದು. ಆದರೆ ತತ್ವಪದಕಾರರೇ ವ್ಯಕ್ತಿವಾದಿ ಸಾಧಕರು, ಸಮೂಹವಾದಿ ಅನುಪಾಲಕರು, ಹೀಗಾಗಿ ವೈಯಕ್ತಿಕ ಅನ್ವೇಷಣೆ ಸಮೂಹವಾದಿ ಅನುಷ್ಠಾನವಾಗಿ ಸಾಮಾಜಿಕ ಬದುಕಿನ ಕ್ರಮಗಳಾಗಿ ಪ್ರೇರಣೆ ನೀಡುತ್ತದೆ.

ಡಂಗುರ ಪದಗಳಲ್ಲಿ ಆಧ್ಯಾತ್ಮ, ನೀತಿ, ಬೋಧನೆ, ಪ್ರಧಾನವಾಗಿರುತ್ತದೆ. ಅಲ್ಲಿ ಬೆಡಗಿನ ಸಂಕೇತ ರೂಪಕಗಳಿರುತ್ತದೆ. ಕೊಡೇಕಲ್ಲವರು ಕ್ರಿ.ಶ.೧೬, ೧೭ನೇ ಶತಮಾನದ ಸಾಮಾಜಿಕ, ಧಾರ್ಮಿಕ ಮತ್ತು ರಾಜಕೀಯದ ಏಳುಬೀಳುಗಳನ್ನು ಕಾಲಜ್ಞಾನ ಭಾಷೆಯಲ್ಲಿ ಅರಹುತ್ತಿದ್ದರು.

"ದೊಡ್ಡ ಗುಡ್ಡದ ಮ್ಯಾಲಿ ದೊಡ್ಡ ಹುಲಿಯಾಗಿ | ಗದ್ದರಿಸುತ್ತಿದ್ದ ಬೀರಪ್ಪನೂ | ಹುಲಿ ಅಲ್ಲ ನಮ್ಮ ಗುರು ಅಂತ ಹ್ವಾದರೆ ರೆಕ್ಕಿ ಜೋಳಾಗಿ ಕಡದಾನೊ|"[೪೪] ಇಂತ ಕಥನ ಮಾದರಿಯ ನಿರೂಪಣೆಗಳನ್ನು ಡಂಗುರ ಪದಗಳಲ್ಲಿ ಕಾಣುತ್ತೇವೆ.

ಈ ಹಿನ್ನೆಲೆಯಿಂದ ನೋಡಿದರೆ ಡಂಗುರ ಪದಗಳು ಬಹುಮುಖಿ ಸಂವೇದನೆಗಳ ಜ್ಞಾನವನ್ನು ಧಾರ್ಮಿಕ ನೆಲೆಯಲ್ಲಿ ಚಿತ್ರಿಸುತ್ತದೆ. ದೇವಾಲಯಗಳಲ್ಲಿ ಆಚರಣೆಗೊಳ್ಳುವ ಜಾಗಟೆಯ ನಾದವು ಡಂಗುರದ ಸಾಂಕೇತಿಕತೆಯ ಅಂಶವನ್ನು ಗರ್ಭೀಕರಿಸಿಕೊಂಡಿವೆ. ದೇವಾಲಯದ ಜಾಗಟೆ ನಾದವು 'ಓಂ' ಎಂಬ ಪ್ರಣವವು. ಅಂತರಂಗದ ಚಿತ್ ಶಕ್ತಿಯನ್ನು ಜಾಗೃತಗೊಳಿಸುತ್ತದೆ. ಇಂಥಾ ಕೇಂದ್ರೀಕೃತನಾದದಿಂದ ಭಕ್ತರು ಏಕಾಗ್ರತೆಗೆ ಒಳಗಾಗುವರೆಂಬ ದೋರಣೆಯು ನಮ್ಮ ಅಂತರಂಗದ ಮನೋಭೂಮಿಕೆಗಿದೆ.

ವಿಶೇಷವಾಗಿ ಡಂಗುರ ಸಂಸ್ಕೃತಿಯು ನಮ್ಮ ಗ್ರಾಮಗಳಲ್ಲಿ ಕಾಯಕತ್ವದಿಂದ ಜಂಗಮತ್ವದ ಮೂಲಕ ರೂಪುಗೊಂಡಿದೆ. ಗ್ರಾಮದಲ್ಲಿ ಯಾವ ವ್ಯಕ್ತಿಯೇ ಆಗಲಿ ದುಶ್ಚಟಗಳಿಗೆ ಒಳಗಾದರೆ ಅವರ ಮನೆ ಮುಂದೆ ಜಾಗಟೆ ಬಾರಿಸುತ್ತಾ ಮುಳ್ಳಾವಿಗೆಯ ಮೇಲೆ ೨, ೩ ದಿನಗಳವರೆಗೆ ನಿಂತುಕೊಂಡು, ಧರಣಿ ಹೂಡಿದ ಜಂಗಮರುಂಟು. ವೈಯಕ್ತಿಕವಾಗಿ ತಮ್ಮ ದೇಹ ದಂಡನೆಯಿಂದ, ಕಾಲಿಗೆ ರಕ್ತವಾದ ಸಂದರ್ಭದಲ್ಲಿ ಮನೆಯಾತ ತಪ್ಪೊಪ್ಪಿಗೆ ಕೇಳಿ ಕಾಣಿಕೆ ಅರ್ಪಿಸಿದ್ದಿದೆ.

ಡಂಗುರ ಹಾಡುಗಳ ಮತ್ತೊಂದು ವೈಶಿಷ್ಟ್ಯವೆಂದರೆ ಕರ್ನಾಟಕ ಚರಿತ್ರೆಯನ್ನು ಕಟ್ಟಿಕೊಡುವುದು.

"ಯಾತಗಿರಿಗಳು ಹತಗಳಾದವು ದಿಮ್ಮಿಸಾಲೆ
ರಾಯಚೂರ ಸೀಮೆಯಲಿ ರಾಯಭಾರ ಆದೀತು ದಿಮ್ಮಿಸಾಲೆ
ಸಿಂಧನೂರ ಸೀಮೆಯಲಿ ಆನಂದವಾಡ್ಯಾರ ದಿಮ್ಮಿಸಾಲೆ
ಕವಿತಾಳ ಮಾನ್ವಿಯಲಿ ಕೈತಾಳ ಹೊಡೆದಾರು ದಿಮ್ಮಿಸಾಲೆ"[೪೫]

ಕನ್ನಡನಾಡಿನ ಚರಿತ್ರೆಯಲ್ಲಾದ ಸ್ಥಿತ್ಯಂತರಗಳನ್ನು ಕಟ್ಟಿಕೊಡುವ ಈ ಅಂಶವು ಗಮನಾರ್ಹವಾಗಿದೆ. ಡಂಗುರ ಹಾಡುಗಾರನೊಬ್ಬ ಇತಿಹಾಸದ ಬಗ್ಗೆ ಇದ್ದ ಪ್ರಾಮಾಣಿಕ ಕಾಳಜಿಯನ್ನು ತನ್ನ ಕಲ್ಪನಾಶಕ್ತಿಯ ಮೂಲಕ ಹೇಳುವ ಪ್ರಯತ್ನವಿದಾಗಿದೆ. ಯಾದಗಿರಿವರೆಗೆ ಆದಿಲ್ ಶಾಹಿಗಳ ಆಕ್ರಮಣದ ಅಧಿಕಾರವಿತ್ತು. 'ದೋ ಅಬ್' ಪ್ರಾಂತವೆಂದು ಖ್ಯಾತವಾದ ಈ ನಾಡಿಗೆ ಧಮನಕಾರಿ ಶಕ್ತಿಗಳಾದ ಹೈದ್ರಾಬಾದ್ ನಿಜಾಂ, ಬಿಜಾಪುರ ಆದಿಲ್ ಶಾಹಿಗಳು ಕಿತ್ತಾಡಿದ್ದು ಪ್ರಶ್ನಾತೀತವಾಗಿದೆ. ವಿಜಯನಗರದ ಅರಸರು ಸಾಂಸ್ಕೃತಿಕ

ಧರ್ಮ, ಸಾಂಸ್ಥಿಕವಾಗಬೇಕೆಂದು ಬಯಸಿದ್ದು ಚರಿತ್ರೆಯಿಂದ ತಿಳಿದುಬರುತ್ತದೆ. ಸಿಂಧನೂರ ತಾಲೂಕು, ಸಮೃದ್ಧಿ ಸಾರ್ಥಕತೆಯ ಸಂಕೇತವಾದರೆ ಕವಿತಾಳ ಮಾನ್ವಿಗಳು ಶಿಕ್ಷಣ ಪ್ರಗತಿಯಲ್ಲಿ ಕುಂಠಿತವಾಗಿವೆ. ಕೈತಾಳ ಹೊಡೆದಾರೆಂಬ ಅಂಶವನ್ನು ಡಂಗುರ ಹಾಡುಗಾರ ಡಂಗುರ ಬಿಟ್ಟು ಕರಪಲ್ಲವಾದ ಕೈತಾಳ ಕ್ರಿಯೆ ರೂಢಿಸಿಕೊಂಡ ನೃತ್ಯ, ಸಂಗೀತದಿಂದ ಸುವ್ವಿ ಬಾ ಸಂಗಯ್ಯ, ಸುವ್ವಿ ಬಾ ಲಿಂಗಯ್ಯ, ಸುವ್ವಿ ಬಾ ಚೆನ್ನಬಸವಯ್ಯಾ ಎಂದು ಹಾಡುತ್ತಾ, ಚರಿತ್ರೆಯನ್ನು ಸಾಂಸ್ಕೃತಿಕ ಹಾಡಿನ ಮೂಲಕ ಕಟ್ಟುವುದು ಲಕ್ಷಿಸುವಂಥದ್ದಾಗಿದೆ.

ಮಧ್ಯಕಾಲೀನ ಅಧ್ಯಯನಗಳು ಜನಮುಖಿ ಪರಂಪರೆಯ ಕಾಲವೆಂದು ಗುರುತಿಸಿಕೊಂಡು ಕ್ರಿ.ಶ.೧೭.೧೮ನೇ ಶತಮಾನದ ಸಂದರ್ಭದಲ್ಲಿ ಲಕ್ಷ್ಮೀಶ, ರತ್ನಾಕರ ವರ್ಣಿಯಂಥ ಕಾವ್ಯ ಬರಹಗಾರರ ಮುಂದುವರಿಕೆಯಾಗಬೇಕಾದ ಈ ಪರಂಪರೆಯಲ್ಲಿ ಜನಪದ ದೇಸಿ ಜ್ಞಾನ ಪರಂಪರೆಗಳವರು ಸಾಂಸ್ಕೃತಿಕವಾಗಿ ಗುರುತಿಸಿಕೊಂಡಿದ್ದಾರೆ. ಕಂಸಾಲೆಯವರು, ನೀಲಗಾರರು, ಚೌಡಿಕಿ ಮೇಳದವರು, ಡೊಳ್ಳು ಮೇಳದವರು, ಗೊಂದಲಿಗರು, ಜೋಗಿಗಳು, ಕರಪಾಲದವರು, ತಂಬೂರಿಯವರು, ಲಾವಣಿಕಾರರು, ದುಂಧುಮಿ ಕಾಲಜ್ಞಾನದ ಹಾಡುಗಾರರಂಥಹ ವೃತ್ತಿ ಹಾಗೂ ಹವ್ಯಾಸ ಕಲಾವಿದರು ಈ ರೀತಿಯ ಸಾಹಿತ್ಯ ಪ್ರಸಾರವಾಗಲು ಬಹುದೊಡ್ಡ ಕೊಡುಗೆ ನೀಡಿದ್ದಾರೆ. ಇಂಥ ದೇಸಿ ಪರಂಪರೆಯಲ್ಲಿ ಮೂಡಿಬಂದ ಡಂಗುರ ಪದಕಾರರು ಆ ಸಂಪ್ರದಾಯದ ಹಾಡುಗಾರರು ಕನ್ನಡ ಸಾಹಿತ್ಯ ಲೋಕದ ಹೊಸ ಅನುಭವದ ಅನಾವರಣಕ್ಕೆ ಕಾರಣರಾದರು. ಅನಕ್ಷರಸ್ಥ ಬದುಕನ್ನು ಜ್ಞಾನಮಯವಾಗಿಸುವಲ್ಲಿ ಇವರ ಪಾತ್ರ ಪ್ರಮುಖವಾದದ್ದು.

"ಡಂಗುರ ಹೊಡೆಯ ಬೇಕಣ್ಣ | ಹಿಂಗದ ಈ ಭವಕಿಂದಣ್ಣ
ಸಂಗಮೇಶನ ಸೇವೆಯೊಳು ನೀನಿದ್ದರೆ | ಭಂಗವಾಗುವುದು
ಭವವಣ್ಣಾ | ವಾಸನತ್ರಗಳಳಿಯಣ್ಣಾ ಲಕ್ಷವು ಅವನೊಳಿರಲಣ್ಣಾ"[೬೭]

ಸಂಸಾರದ ನೀತಿಯ ಸತ್ಯ ನಿನಗಿರದಿದ್ದರೆ, ಬದುಕಿನಲ್ಲಿ ಕಿಂದರ ಜೋಗಿಗೆ ವಶವಾಗುವಿ ಮಾಯೆ, ಅಜ್ಞಾನ, ತಮೋಗುಣಗಳನ್ನು ತ್ಯಾಗ ಮಾಡು, ಸಂಗಮೇಶನ ಭಕ್ತನಾಗಿ, ಆಜ್ಞಾಪಾಲಕನಾಗಿ ಈ ಭವವನ್ನು ಗೆಲ್ಲೆಂದು ಹೇಳುವ ನೀತಿ ತತ್ವ ಗಮನಾರ್ಹವಾದುದು.

ಸ್ವಭಾವತಃ ತತ್ವಪದಕಾರ ತತ್ವವನ್ನು ಬೋಧಿಸುವವನಾದ್ದರಿಂದ, ತಾನು ನಿಂತ ನೆಲೆ ಅಥವಾ ತನ್ನ ವೃತ್ತಿಯ ಮೂಲಕ ಡಂಗುರ ಪದವನ್ನು ಕಟ್ಟಲು ಪ್ರಯತ್ನಿಸುತ್ತಾನೆ. ಕಾರಣ ತತ್ವಪದಕಾರನಿಗೆ ಪರಂಪರೆಯ ಆಶಯಗಳನ್ನು ಸಾರ್ವತ್ರಿಕರಣ ಗೊಳಿಸಬೇಕೆಂಬ ಹಠ ಒಂದಾದರೆ, ಕಾಲಜ್ಞಾನದಂಥ ಭಾಷೆಯನ್ನು ರಸಮಯವಾಗಿ ಲಯ ಪ್ರಧಾನದಿಂದ ವ್ಯಾಖ್ಯಾನಿಸಬೇಕೆಂಬ ಹಠ ಇನ್ನೊಂದಡೆ ಇರುತ್ತದೆ. ಈ ಹೊಯ್ದಾಟದಲ್ಲಿ ಡಂಗುರ ಪದಗಳು ಪುನರ್ ಸೃಷ್ಟಿಯಿಂದ ಶಕ್ತವಾಗುತ್ತವೆ. ಈ ಹಿನ್ನಲೆಯಲ್ಲಿ

ಡಂಗುರ ಪದಗಳು ಧಾರ್ಮಿಕ ಅನುಭವವನ್ನು ಜಾಹೀರುಗೊಳಿಸುವ ಭಕ್ತಿಯ ಆರಾಧನಾ ವ್ಯವಸ್ಥೆಗೆ ಹುರಿಗೊಳ್ಳುವ ಹಾಡುಗಳಾಗಿ ಕಂಡುಬರುತ್ತವೆ.

ಡಂಗುರ ಪದಗಳನ್ನು ಸಮರ್ಥವಾಗಿ ಪ್ರಧಾನವಾಗಿ ದುಡಿಸಿಕೊಂಡ ತತ್ವಪದಕಾರರೆಂದರೆ ಕೂಡ್ಲೂರು ಬಸವಲಿಂಗಪ್ಪ ಮತ್ತು ನೀರಲಕೇರಿ ಬಸವಲಿಂಗಪ್ಪನವರೆಂದು ತಿಳಿಯಬಹುದು. ಪ್ರಾದೇಶಿಕತೆಯ ದೃಷ್ಟಿಯಿಂದ ಇವರು ನೆಲೆ ನಿಂತ ಸ್ಥಳಗಳೂ ಕಾರಣವಾಗಿ, ಕೊಡೇಕಲ್ಲ ಜ್ಞಾನಶಾಖೆಗಳ ಪ್ರೇರಣೆ ಈ ಇಬ್ಬರು ತತ್ವಪದಕಾರರಿಗಾಗಿದೆ.

ತತ್ವಪದ ಪರಂಪರೆಯಲ್ಲಿ ಸೈದ್ಧಾಂತಿಕವಾಗಿ ಸಾಮೂಹಿಕತೆಯನ್ನು ಗುರುತಿಸಬೇಕಾದರೆ, ತತ್ವಪದಗಳಲ್ಲಿ ಮಾತ್ರ ಸಾಧ್ಯವೆಂದು ಹೇಳಬಹುದು. ಆದರೆ ಡಂಗುರ ಪದಗಳಲ್ಲಿ ಇಂಥ ಸಾಮೂಹಿಕತೆ ಇಲ್ಲವೆಂಬ ಕೊರಗಿದೆ. ಕಾರಣ ಈ ಭಾಗದ ತತ್ವಪದಕಾರರು ಅಂದಿನ ಪ್ರಭುತ್ವದ ಇತಿಮಿತಿಗಳನ್ನು ಉಲ್ಲಂಘಿಸಿ ಡಂಗುರಪದಗಳ ರಚನೆಗಳನ್ನು ಸಾಂಸ್ಕೃತಿಕ ಅನುಭವದ ಮೂಲಕ ಪಸರಿಸಲು ಸಾಧ್ಯವಿಲ್ಲವಾಗಿದೆ. ಅಂದಿನ ಸಮಾಜದಲ್ಲುಂಟಾದ ಅಸಾಮಾನತೆಯ ಕಾರಣವಾಗಿವೆ. ಮಠಮಾನ್ಯಗಳಲ್ಲಿ ಸಾಮಾನ್ಯ ವರ್ಗದವರು ಕನ್ನಡ ಶಿಕ್ಷಣದಿಂದ ವಂಚಿತರಾದರು. ಬರಹಗಾರರು ಶಿಕ್ಷಣದಲ್ಲಿ ಆಸಕ್ತಿವುಳ್ಳವರು ಉರ್ದುಭಾಷೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು ಇಂಥ ಗಂಭೀರ ಪರಿಸ್ಥಿತಿಯಲ್ಲಿ ರಾಯಚೂರ ಭಾಗದ ವಿದ್ಯಾರ್ಥಿಗಳು ಆರ್ಥಿಕವಾಗಿ ದುರ್ಬಲವಾಗಿದ್ದರೂ, ಪ್ರೌಢಶಾಲಾ ಶಿಕ್ಷಣಕ್ಕಾಗಿ ಗುಲ್ಬರ್ಗ ಇಲ್ಲವೇ ಹೈದ್ರಾಬಾದ್‌ಗೆ ಹೋಗಬೇಕಾಗಿದ್ದಿತು, ಪರಿಸ್ಥಿತಿ ಹೀಗಿರುವಾಗ ಭಿನ್ನ ಸೃಜನ ಅನುಭವಗಳ ಡಂಗುರ ಪದಗಳನ್ನು ಹೇಗೆ ಬರೆಯಲು ಸಾಧ್ಯ. ಆಧುನಿಕ ತತ್ವಪದಕಾರರಿಗೆ ಕನ್ನಡ ಶಿಕ್ಷಣವೇ ಒಂದು ಸಾಮಾಜಿಕ ಸಂಘರ್ಷವಾಗಬೇಕಾದರೆ ಡಂಗುರ ಪದಗಳ ರಚನೆಯ ಪರಿಸರ ಇವರಿಗೆ ಸಾಧ್ಯವಿಲ್ಲವಾಗಿದೆ. ರಾಂಪುರ ಭೀಮಣ್ಣ ನನ್ನ ಪ್ರಾರಂಭಿಕ ಶಿಕ್ಷಣ ಇಂಗ್ಲೀಷ್ ಮಾಧ್ಯಮದಲ್ಲಾಯಿತೆಂದು ಅಸಹಾಯಕ ಅನುಭಾವಗಳನ್ನು ಹೇಳಿದರೆ, ಮಾನಸಗಲ್ ವೆಂಕನಗೌಡನು ಪ್ರಾಥಮಿಕ ಮತ್ತು ಪ್ರೌಢ ಶಾಲಾ ಶಿಕ್ಷಣವನ್ನು ಇಂಗ್ಲೀಷ್ ಮಾಧ್ಯಮದಲ್ಲಿ ರೂಢಿಸಿಕೊಂಡೆ ಎಂದು ತಮ್ಮ ಅನುಭಾವಗಳನ್ನು ನನ್ನ ಕ್ಷೇತ್ರಕಾರ್ಯದಲ್ಲಿ ಈ ರೀತಿ ಹಂಚಿಕೊಂಡರು. ತತ್ವಪದಕಾರರ ಸೃಜನಕ್ರಿಯೆ ಈ ರೀತಿ ಕುಂಠಿತವಾದ್ದರಿಂದ ಡಂಗುರ ಪದಗಳಂಥ ಭಾಷಾಜ್ಞಾನ ತುಡಿತಗಳು ಕುಗ್ಗಿದಂತೆ ಕಂಡುಬರುತ್ತದೆ. ಆದರೂ ಈ ಭಾಗದ ತತ್ವಪದಕಾರರು ತಮ್ಮ ನೀತಿಯ ತರ್ಕದ ಮೂಲ ಪಾರಮಾರ್ಥಿಕ ನೆಲೆಯನ್ನು ಗಟ್ಟಿ ಮಾಡಿದ್ದಾರೆ.

ಡಂಗುರ ಪದಗಳು ಹುಯ್ಯಲೊ ಡಂಗುರವ ಎಂಬ ಎಚ್ಚರಿಕೆಯ ವೈವಿಧ್ಯತೆಯನ್ನು ಮೈಗೂಡಿಸಿ ಕೊಂಡು ತತ್ವಪದ ಸಾಹಿತ್ಯದಲ್ಲಿ ಪ್ರಧಾನ ಸ್ಥಾನವನ್ನು ಗುರುತಿಸಿಕೊಂಡಿದೆ. ಪುನರಾವರ್ತನೆಯೇ ಈ ಸಾಹಿತ್ಯದ ತಂತ್ರವಾಗಿದೆ. ನಾನು ನಿರೂಪಿಸಿದ ಎರಡೂ ಹಾಡುಗಳು ಪಲ್ಲವಿಯಿಂದ ಪ್ರಾರಂಭವಾಗುತ್ತವೆ. ಒಂದು ದ್ವಿಪದಿಯಲ್ಲಿದೆ, ಇನ್ನೊಂದು ತ್ರಿಪದಿಯಲ್ಲಿದೆ. ಈ ಲಕ್ಷಣದಿಂದ ಈ ಹಾಡುಗಳು ಛಂದನಿಯಮ

ಅವಶ್ಯಬಯಸುತ್ತದೆ. ಆದ್ದರಿಂದ ಈ ಹಾಡುಗಳು ಅಂತರಂಗವನ್ನು ಗೆಲ್ಲುವ ಲಯಪ್ರಧಾನತೆಯ ಉತ್ತಮ ಗುಣವನ್ನು ಅಳವಡಿಸಿಕೊಂಡಿದೆ. ಹೀಗಾಗಿ ಸಮೂಹದ ಜನರು ಈ ಹಾಡುಗಳಿಗೆ ದೃಶ್ಯ, ಸಂಗೀತ ಮಾಧ್ಯಮವೆಂದು ಅರಿತು ಬೇಗ ಆಕರ್ಷಿತರಾಗುತ್ತಾರೆ. ಹೀಗಾಗಿ ಈ ಹಾಡುಗಳನ್ನು ತತ್ವಪದಕಾರರು ಪ್ರಯೋಗಶೀಲ ಶೋಧದಲ್ಲಿ ತಮ್ಮ ಪರಂಪರೆಗೆ ಹೊಸ ಆಯಾಮ ನಿರೂಪಿಸಿದರೆಂದು ಸ್ಪಷ್ಟಪಡಿಸಬಹುದು.

## ಫರಾಕುಗಳು

ರಾಯಚೂರು ಜಿಲ್ಲೆಯ ತತ್ವಪದಕಾರರಲ್ಲಿ ಫರಾಕುಗಳು ವೈಶಿಷ್ಟಪೂರ್ಣವಾಗಿ ಕಂಡುಬರುತ್ತವೆ. ಅದು ಭವಿಷ್ಯಕೇಂದ್ರಿತ ಆಶಯವನ್ನು ಮನುಷ್ಯ ಕಲ್ಪನೆಯ ಶೋಧದ ಕುತೂಹಲವನ್ನು ಹೊಂದಿರುವುದಾಗಿದೆ. ಇಂತಹ ವಚನಕಾರರಲ್ಲಿ ಪ್ರಮುಖವಾಗಿ ಇಬ್ಬರನ್ನು ಕಾಣಬಹುದು. ನೀರಲಕೇರಿ ಬಸವಲಿಂಗಪ್ಪ ಮತ್ತು ವೆಂಕಟಾಪುರ ಖೇಮಣ್ಣ. ಈ ಇಬ್ಬರಲ್ಲಿ ಫರಾಕು ಒಲುವಿದೆ.

ವೆಂಕಟಾಪುರ ಖೇಮಣ್ಣನು ರಾಯಚೂರು ಸಮೀಪದ ಆಂಧ್ರಭಾಗಕ್ಕೆ ಸೇರುವ ಪೂಲಚಿಂತಿ ಗ್ರಾಮದವನು. ಇಲ್ಲಿಯ ಹೆಚ್ಚಿನ ಜನರು ಕೃಷಿಕರಾಗಿದ್ದು ಇವರ ಭಾಷೆ ತೆಲುಗು ಮಿಶ್ರಿತ ಕನ್ನಡವಾಗಿದೆ. ಭೂಮಾಲೀಕರು ಮತ್ತು ಅಷ್ಟೇ ಕೆಳವರ್ಗ ಸಮುದಾಯವೂ ಈ ಗ್ರಾಮದಲ್ಲಿವೆ. ಇಂಥಾ ಜನಸಮೂಹದ ಮಧ್ಯ ಜೀವಿಸಿದ ಸಂದರ್ಭದ ಕ್ಷೋಭೆಯನ್ನು ಕಣ್ಣಾರೆ ಕಂಡು ತನ್ನ ತತ್ವಪದಗಳಲ್ಲಿ ಹಿಡಿದಿಟ್ಟಿದ್ದಾನೆ.

"ದಂಡೂ ನಿಲ್ಲದ ದೊರೆಯು ಧರಣಿಯನಾಳುವನು
ಸೊಂಡಾಲಿಲ್ಲದ ಗಜನೇರಿಹ್ಯನು ಕೇಳು| ಕೇಳು
ಊರು ನಿಲ್ಲದ ಒಬ್ಬ ತಳವಾರ ಕಾವಲಿರುವ
ಬೇರಿ ಬಡವುತ ಪಾರತಿರುಗವ ಕೇಳು| ಕೇಳು"[೪೭]

ವಿವೇಕವಿಲ್ಲದ ಹಾಗೂ ಜನಪ್ರೋತ್ಸಾಹವಿಲ್ಲದ ರಾಜನು ಪ್ರಭುತ್ವ ಸ್ಥಾಪಿಸಲು ಹೇಗೆ ಸಾಧ್ಯ. ರಾಜ ಮತ್ತು ಆನೆ ಗಂಭೀರತೆಯ ಸಂಕೇತಗಳು. ರಾಜನಿಗೆ ಜನರು ಬಹುಫರಾಕು ಎಂದು ಉದ್ಘೋಷಿಸಬೇಕಾಗುತ್ತದೆ. ಬಹು ಫರಾಕು ಎಂದಾಗಲೆಲ್ಲಾ ಸೊಂಡಿಲಿಲ್ಲದ ಆನೆ ತನ್ನ ಸೊಂಡಿಲನ್ನು ಹೇಗೆ ಮೇಲೆತ್ತಲು ಸಾಧ್ಯ. ಇಲ್ಲಿ ಸಮರ್ಥನಾದ ರಾಜನೂ ಇಲ್ಲ, ಆನೆಯೂ ಇಲ್ಲ. ಗ್ರಾಮವನ್ನು ಕಾಯಲು ತಳವಾರನಿದ್ದರೂ ಊರನ್ನೇ ಕೊಚ್ಚಿಕೊಂಡು ಹೋಗುವ ಜನಪ್ರವಾಹ ಗ್ರಾಮದಲ್ಲಿದೆ. "ಕ್ರಿ.ಶ.೧೮, ೧೯ನೇ ಶತಮಾನದ ಸಂದರ್ಭದಲ್ಲಿ ನಿಜಾಂ ಶಾಹಿ ಪ್ರಭುತ್ವದ ಕಾಲಘಟ್ಟಗಳು ರೈತ ಮತ್ತು ಭೂಮಾಲೀಕರಿಂದ ವರ್ಷದಲ್ಲಿ ೩ ಭಾರಿಯಂತೆ ಕಂದಾಯ ವಸೂಲಿ ಮಾಡುತ್ತಿದ್ದರು. ಗ್ರಾಮಗಳಿಗೆ ನುಗ್ಗಿ ಹೆಂಗಸರನ್ನು ಕುರಿ, ಕೋಳಿಗಳನ್ನು ಕದ್ದೊಯ್ಯುತ್ತಿದ್ದರು. ರಾಯಚೂರಿನಿಂದ ೨೦

ಕಿ.ಮೀ. ಕಾಡ್ಲೂರ ಗ್ರಾಮದ ಕಲ್ಯಾಣಿ ಶ್ರೀನಿವಾಸಾಚಾರ್ಯರ ಹೊಲಕ್ಕೆ ನುಗ್ಗಿ ರಾಶಿ ಮಾಡಿದ ಕಾಳುಗಳನ್ನು 'ಲೇವಿ' ಹೆಸರಿನಲ್ಲಿ ಲೂಟಿ ಮಾಡಿದ್ದರು. ಹರವಿ ಗ್ರಾಮದ ಅಮರಣ್ಣನು ಲೇವಿಕೊಟ್ಟಿದ್ದರೂ ಕೊಟ್ಟಿಲ್ಲವೆಂಬ ಆಪಾದನೆ ಮಾಡಿ ಅವನ ಮನೆಹೊಕ್ಕು ಧಾನ್ಯವನ್ನು ಲೂಟಿ ಮಾಡಿದರು. ಈ ಆಘಾತದಿಂದ ಅಮರಣ್ಣನು ಮರಣ ಹೊಂದಿದನು".[೪೯] ಇಂಥ ಹಲವಾರು ಸಂಗತಿಗಳನ್ನು ತತ್ವಪದಕಾರರ ವಿವಿಧ ಅಭಿವ್ಯಕ್ತಿಗಳಲ್ಲಿ ಕಾಣಬಹುದಾಗಿದೆ.

ತತ್ವಪದಕಾರ ಕೇಳಿ, ಕೇಳಿ ಎಂದು ಉದ್ಘೋಷಿಸುವುದರ ಹಿಂದೆ ಒಂದು ನಿರ್ದಿಷ್ಟ ಉದ್ದೇಶವಿರುತ್ತಿತ್ತು. ಜಾಗೃತಿ, ನೈತಿಕ ತಿಳುವಳಿಕೆ ಭವಿಷ್ಯದ ಬಗ್ಗೆ ಕಳಕಳಿ ವರ್ತಮಾನ ಸಂಗತಿಗಳ ಕುರಿತ ಚಿಂತನೆಗಳನ್ನು ಕಾಣುತ್ತೇವೆ. ತತ್ವಪದಗಳಲ್ಲಿ ನೀತಿ ಬೋಧನೆ ಇದ್ದರೆ ಫರಾಕು ಅರ್ಥದ ಹಾಡುಗಳಲ್ಲಿ ಮುಂದಿನ ಭವಿಷ್ಯದ ಕಾರಣಿಕ ಸ್ವರೂಪದ ಘೋಷಣೆ ಇರುತ್ತದೆ. ಫರಾಕು ಎನ್ನುವ ಕ್ರಿಯೆ ತತ್ವಪದಕಾರನಾದ ನೀರಲಕೇರಿ ಬಸವಲಿಂಗಪ್ಪನಲ್ಲಿ ಈ ರೀತಿಯಾಗಿದೆ.

"ಸುಳ್ಳಲ್ಲವೀ ಸಾಕ್ಷಿ ಎಲ್ಲರೂ ಕೇಳಿರಿ ಸುವ್ವಾಲೆಕ್ಕ ಸುವ್ವಾಲೆ  
ಹಿಂದಾಡಿಕೊಳ್ಳುವವನು ಹಂದಿಯಾಗಿ ಬಾಳ್ವ ಸುವ್ವಾಲೆಕ್ಕ ಸುವ್ವಾಲೆ  
ಕುಲದಭಿಮಾನಕೆ ಕುಸ್ತಿಯಾಡಿ ಸತ್ತವ ಸುವ್ವಾಲೆಕ್ಕ ಸುವ್ವಾಲೆ  
ತತ್ವವ ತರ್ಕಿಸಿ ತಾ ತಿಳಿಯದೆ ಹೋದವ ಸುವ್ವಾಲೆಕ್ಕ ಸುವ್ವಾಲೆ"[೪೯]

ನೀರಲಕೇರಿ ಬಸವಲಿಂಗಪ್ಪನು ಬದುಕಿದ ಸಂದರ್ಭದಲ್ಲಿ ಊರಲ್ಲಿ ಬರ ಬಿದ್ದಿತ್ತು. ಗ್ರಾಮಕ್ಕೆ ಕ್ರೈಸ್ತ ಪಾದ್ರಿ ತಮ್ಮ ಧರ್ಮಶ್ರೇಷ್ಠತೆಯನ್ನು ಸಾರ್ವತ್ರಿಕರಣಗೊಳಿಸಬೇಕೆಂದು ಬಂದಿದ್ದನು. ಇವನ ಹಿಂಬಾಲಕರು ತಮ್ಮ ಉಪಜೀವನಕ್ಕಾಗಿ ಗ್ರಾಮೀಣ ಜನರಿಗೆ ಕ್ರೈಸ್ತಧರ್ಮ ಸ್ವೀಕಾರ ಮಾಡುವಂತೆ ಆಮಿಷ ಒಡ್ಡುತ್ತಿದ್ದರು. ದೇಶದ ಆರ್ಥಿಕ ಶಕ್ತಿಯೆಂದು ಗುರುತಿಸಿಕೊಂಡ ಕ್ರೈಸ್ತ ಪಾದ್ರಿಯನ್ನು ಬಸವಲಿಂಗರು ಆಧ್ಯಾತ್ಮವಾದದಲ್ಲಿ ಸೋಲಿಸಿ ನಮ್ಮ ಧರ್ಮ ಶ್ರೇಷ್ಠತೆಯನ್ನು ಎತ್ತಿ ಹಿಡಿದಿದ್ದನ್ನು ಇಂತಹ ಹಾಡುಗಳಲ್ಲಿ ಕಾಣಬಹುದು.

ತತ್ವಪದಗಳಿಗಿಂತ ಈ ನುಡಿಗಳು ಭಿನ್ನವಾಗಿ ನಿರೂಪಿತವಾಗುತ್ತದೆ. ೨ ಸಾಲಿನಲ್ಲಿ ಅಥವಾ ೩, ೪ ಸಾಲಿನಲ್ಲಿ ಈ ನುಡಿಗಳ ಆಶಯ ಪ್ರಕಟವಾಗುತ್ತದೆ. ಶರಣರ ಸೂಳ್ನುಡಿಯಂತೆ ಒಂದರ ನಂತರ ಮತ್ತೊಂದರ ಪದಗಳ, ಶಬ್ದ ಮತ್ತು ಅರ್ಥಗಳ ವಿಸ್ತಾರತೆಯನ್ನು ಹೆಚ್ಚಿಸುತ್ತದೆ. ಈ ಶೀರ್ಷಿಕೆಯ ಸ್ವಭಾವವೇ ಘೋಷಣೆ ಮಾಡುವುದಾಗಿದೆ. ಇಂಥ ಪಾರಂಪರಿಕ ಜ್ಞಾನ ಮಾದರಿಗಳನ್ನು ತತ್ವಪದಕಾರರು ಪೋಷಿಸಿದರೆಂಬುದನ್ನು ಗಮನಿಸಬೇಕು.

## ೫.೩. ತತ್ವಪದಗಳು ಮತ್ತು ಬೆಡಗಿನ ಪರಂಪರೆ

ಬೆಡಗು ಎಂಬ ಪದ ಭಕ್ತಿ ಸಾಹಿತ್ಯದಲ್ಲಿ ಶಬ್ದಗಳ ಜೊತೆ ಕಟ್ಟಿಕೊಡುವ ಹಾಡಿನ ಗತಿಯ ಚೆಲುವು ಎಂದಾಗುತ್ತದೆ. ಇದು ಸೈದ್ಧಾಂತಿಕ ಕ್ರಿಯೆಯಾಗಿ ಪ್ರಕಟವಾಗುವಾಗ ತನ್ನ ಭಾವುಕ ನಿಲುವನ್ನು ನಿರೂಪಣೆಯ ಮೂಲಕ ಭಿನ್ನ ಅರ್ಥವನ್ನು ಕೊಡಲು ಪ್ರಾರಂಭಿಸುತ್ತದೆ. ಈ ಅರ್ಥವು ನಿರ್ದಿಷ್ಟ ಚೌಕಟ್ಟಿನಲ್ಲಿ ಬದಲಾಗುವ, ಶಬ್ದಗಳ ರಹಸ್ಯವನ್ನು ಗ್ರಹಿಸುವವನಿಗೆ ಕುತೂಹಲದ ಕಲ್ಪನೆಯನ್ನು ನಿರ್ಮಿಸುತ್ತದೆ.

ಮುಖ್ಯವಾಗಿ ಬೆಡಗಿನ ಹಾಡುಗಳೆಂದು ಗುರುತಿಸಿಕೊಳ್ಳುವಾಗ, ಅದು ತನ್ನ ಪ್ರತ್ಯೇಕ ಸ್ಥಾನದ ಅರಿವನ್ನು ಕಟ್ಟಿಕೊಡುತ್ತದೆ. ವಿಷಯದ ಗ್ರಹಿಕೆಯಲ್ಲಿ ಬೆಡಗೆಂಬ ಕೇಂದ್ರತ್ವದ ವ್ಯಾಖ್ಯಾನವಿದ್ದರೂ, ಪಾರಮಾರ್ಥಿಕತೆಯನ್ನು ಚರ್ಚಿಸುವ ಸಂದರ್ಭದಲ್ಲಿ ಬೆಡಗಿನ ವಿಷಯವ್ಯಾಪ್ತಿ ವಿಶಾಲವಾಗುತ್ತದೆ. ಅದು ಹೀಗಿದೆ.

೧. ನಮ್ಮ ಮೌಖಿಕ ಪರಂಪರೆಯಲ್ಲಿ ಆಳವಾಗಿ ಬೇರೂರಿದ ಒಗಟೆಂದು ಗುರುತಿಸಿಕೊಳ್ಳುವ ಈ ಬೆಡಗಿನ ಶಬ್ದವು ತತ್ವಪದ ಸಾಹಿತ್ಯದ ಮಾಧ್ಯಮದಲ್ಲಿ, ಹೇಗೆ ಭಿನ್ನ ಅರ್ಥವನ್ನು ಕೊಡುತ್ತದೆಂಬುದನ್ನು ಹುಡುಕುವುದು.

೨. ವಚನಕಾರರು ಹೇಳಿದ ಬೆಡಗೆಂಬ ಹೊಳಹು ವಿಸ್ಮಯದ ಸಾಂಕೇತಿಕ ಭಾಷೆಯ ದೃಷ್ಟಿಕೋನವನ್ನು ತತ್ವಪದ ಸಾಹಿತ್ಯಿಕ ಸಂದರ್ಭದಲ್ಲಿ ವಚನಕಾರರ ಮತ್ತು ತತ್ವಪದಕಾರರ ಅಂಶಗಳನ್ನು ವಿಂಗಡಿಸಿ ನೋಡುವುದು.

೩. ಬೆಡಗೆಂಬ ಸ್ಪಷ್ಟ ತಿಳುವಳಿಕೆಯನ್ನು ಮುಂದುವರಿಸುತ್ತಾ ತತ್ವಪದಗಳ ಹಿನ್ನೆಲೆಯಲ್ಲಿ ಪುನರ್ವ್ಯಾಖ್ಯಾನ ಮಾಡುವುದು.

ಬೆಡಗೆಂಬ ಅಧ್ಯಯನ ಕ್ರಮವು ಜನಪದರ ವರ್ತುಲದಲ್ಲಿ ಒಗಟುಗಳಾಗಿವೆ. ''ಇವು ಸಾಮಾನ್ಯ ಜನರಲ್ಲಿ ವಿನೋದ ಸಾಹಿತ್ಯ ಪ್ರಕಾರವಾಗಿತ್ತು. ಆದರೆ ಒಗಟುಗಳು ಪದ ಚಮತ್ಕಾರದಲ್ಲಿ ಆ ಪದಕ್ಕೆ ಸೀಮಿತವಾದ ಅರ್ಥ ಚಮತ್ಕಾರದಲ್ಲಿ ನಿರ್ಮಿತವಾಗಿರುತ್ತಿದ್ದವು. ಒಗಟುಗಳು ನಿತ್ಯ ಜೀವನದ ಪರಿಚಿತ ಗಿಡ-ಮರ-ಹಣ್ಣು, ಪಶು-ಪಕ್ಷಿ, ರಾಗಿಕಲ್ಲು-ಮಂಚ, ಎಕ್ಕಡ-ಕೋಳಿ-ತೊಟ್ಟಿಲು ಮುಂತಾದ ಪದಾರ್ಥಗಳಿಗೆ ಸೀಮಿತವಾಗಿದ್ದು, ಅರ್ಥದ ನೆಲೆಯಲ್ಲಿ ಮಾತ್ರ ವಿರಾಜಮಾನವಾಗಿದ್ದವೇ ಹೊರತು ಆ ಪರಿಧಿಯನ್ನು ಮೀರಿ ಭಾವರಸ ಜೀವನ ರಹಸ್ಯ ತತ್ವ ಚಿಂತನೆಗಳ ಕಡೆ ಹಬ್ಬುತ್ತಿರಲಿಲ್ಲ.''[೫೦]

''ಹರಕು ಸೀರೆ ಉಟ್ಕೊಂಡು
ಹತ್ತು ಮಕ್ಕಳ ಹೆತ್ಕೊಂಡು
ದೊರೆ ಜೊತೇಲಿ ಊಟ ಮಾಡ್ತಾಳೆ,

ಬೆಳ್ಳೊಳ್ಳಿಯ ಹೋಳುಗಳನ್ನು ಸೂಕ್ಷ್ಮವಾಗಿ ಪರಿಶೀಲಸಿದಾಗ ಮಾತ್ರ ಹರಕು ಸೀರೆ, ಮಕ್ಕಳು, ದೊರೆ ಮುಂತಾದ ಮಾತುಗಳು ಯಾವ ಉದ್ದಿಷ್ಟ ವಸ್ತುಗಳಿಗೆ ಸಂಕೇತವಾಗಿ ನಿಲ್ಲತ್ತವೆಂದು ಸ್ಪಷ್ಟವಾಗುತ್ತದೆ.''[೫೧]

ಈ ಮೂಲಕ ಬೆಡಗೆಂಬ ಸಂವೇದನೆಯು ಒಗಟಿನ ಅರ್ಥವನ್ನು ಕೊಡುತ್ತದೆ. ಇದು ಸಂವಹನದಲ್ಲಿ ರೂಢವಾದ, ಮೌಖಿಕ ಆಶಯದ ಅನುಭವವನ್ನು ಕಟ್ಟಿಕೊಡುವಲ್ಲಿ ಮಹತ್ವಪಾತ್ರವನ್ನು ವಹಿಸುತ್ತದೆ. ಶಬ್ದದ ಕುತೂಹಲ ಪರಿಧಿಯನ್ನು ಮರೆ ಮಾಡಿ ಬೆಡಗಿನ ಮೂಲಕ ಹೇಳಲು ಹವಣಿಸುತ್ತದೆ. ಈ ಒಗಟಿನ ಪ್ರೇರಣೆಯನ್ನೆ ತತ್ವಪದಕಾರ ಜನಪದರ ಭಾಷೆಯಲ್ಲಿ ಆಧ್ಯಾತ್ಮದ ಸತ್ವದೊಂದಿಗೆ ಮರು ನಿರ್ಮಿಸುತ್ತಾನೆ.

ತತ್ವಪದಕಾರರು ಬೆಡಗನ್ನು ತಮ್ಮ ವಿಶಾಲವಾದ ಜ್ಞಾನ ಪರಿಧಿಯಿಂದ ಹಿಗ್ಗಿಸಿ ಭಕ್ತಿ ಪರಂಪರೆಯ ಸೃಜನಶೀಲ ವ್ಯವಸ್ಥೆಯೊಂದಿಗೆ ಬೆಡಗಿನ ಪದಗಳನ್ನು ಬಳಸುತ್ತಾನೆ. ಅವು ಹೀಗಿವೆ, ಆನೆಯ ಹೆಣ (ಅಹಂಕಾರದ ದೇಹ) ಎಂಟು ಮನೆ (ಅಷ್ಟಮದಗಳು) ಐದು ಒಂಟೆ(ಪಂಚ ಕರ್ಮೇಂದ್ರಿಗಳು) ಕರಡಿ(ಮಾಯೆ) ಕರಿಯ ಕೋಗಿಲೆ (ಪ್ರಣವ) ಒಂದು ಊರು (ನಿರ್ದೇಹ) ಇಂಥಾ ಜನಪದ ಶಬ್ದಗಳನ್ನು ದ್ವಿಮುಖ ಗ್ರಹಿಕೆಯಲ್ಲಿ ಆಧ್ಯಾತ್ಮದ ವಿಧಾನದ ಮೂಲಕ ಅಂತರಂಗ ತಟ್ಟುವ ಬೆಡಗನ್ನು ಕಟ್ಟುತ್ತಾರೆ.

ಮುಖ್ಯವಾಗಿ ಜನಪದ ಮಾದರಿಯ ತತ್ವಪದ ದಾಂಪತ್ಯ ಸಂಬಂಧದ ಬೆಡಗು ಅನುಭಾವದಲ್ಲಿ ಪರಿವರ್ತನೆಯಾಗುತ್ತದೆ. ಅದು ಜನಸಮೂಹದಲ್ಲಿ ಕಂಡುಕೊಂಡ ಸಂಬಂಧವನ್ನು ತಲೆಕೆಳಗೆ ಮಾಡುತ್ತದೆ.

''ಅತ್ತೆ ಹೊಲತಿಯು ಮತ್ತೆ ಮಾವ ಮಾದಿಗನು
ಅತ್ತಿಗೆ ಎಂಬುವವಳು ದೊಡ್ಡ ಹಾದರಗಿತ್ತಿ
ಸುತ್ತಮುತ್ತ ಬಳಗವೆಲ್ಲ ಕಟ್ಟಿ ಬೊಗಳುವ ನಾಯಿಯು
ಕೋಳವ ಕೈಗೆ ತೊಡಿಸಿ ನಗುವರು ನಿನ್ನ ಹಡೆದವರು
ಕಾಲಿಗೆ ಸಂಕೋಲೆ ಬಿಗಿವರು ನಿನ್ನ ಸತಿ ಸುತರು
ತೋಳೆರಡು ಬಿಗಿದು ಕಟ್ಟುವರು ಅಣ್ಣ ತಮ್ಮರು
ಹೇಳ್ಯಾರು ಬಿಡಿಸಿಕೊಳ್ಳುವರು ನಿನ್ನ ಯರ‍್ರಿ ಪುಕಳೆ''[೫೨]

ಪ್ರಕೃತಿಯೆಂಬ ಅತ್ತೆಯು ಪುರುಷ ಸ್ವಭಾವದ ಮಾವನು, ಸಮಾಜದಲ್ಲಿ ಸಂಸಾರ ಹೂಡಿದರು. ಮಾಯೆಯೆಂಬ ಅತ್ತಿಗೆಯು ಹಾದರದ ಕೆಲಸದಲ್ಲಿರಲು ಇಂದ್ರಿಯ ಚಾಪಲ್ಯದ ನಾಯಿಗಳು ಮಾಯೆಂಬ ಅತ್ತಿಗೆಯ ಬೆನ್ನಟ್ಟಿದರು. ಇಂಥಾ ಮಾವನ ಮನೆಯ ಸೊಸೆಯು ಜ್ಞಾನವಂತಳಾದರೂ, ಶಿಷ್ಟಳೆಂಬ ಸತಿಯು, ಆತ್ಮವೆಂಬ ಸುತನು, ತನ್ನ ತೋಳೆರಡು ಬಿಗಿದು ಕಟ್ಟುವರು. ಆಗ ಜೀವ ಮತ್ತು ಪ್ರಾಣವೆಂಬ ಅಣ್ಣ ತಮ್ಮಂದಿರು ನನ್ನನ್ನು ಬಂಧಿಸಿದರು.

ಇಂತಹ ದಾಂಪತ್ಯ ಸಂಬಂಧದ ವರ್ತುಲದಲ್ಲಿ ಬೆಡಗೆಂಬ ರೂಪಕಗಳು ತನ್ನ ಅರ್ಥವಿಸ್ತಾರವನ್ನು ಹೊಂದಿರುತ್ತದೆ. ಇದು ಒಂದು ಸಂಸಾರದ ಕಥೆಯಂತೆ ಭಾಸವಾದರೂ ಈ ಸಂಬಂಧದ ಪ್ರತಿಮೆಗಳು ಜ್ಞಾನದ ಬೆರಗನ್ನು ಪ್ರಚೋಧಿಸುತ್ತದೆ. ತತ್ವದಲ್ಲಿ ಒಂದು ಖಚಿತ ಆಕಾರವನ್ನು ಕೊನೆಗೆ ಕೊಡುತ್ತದೆ.

ಬೆಡಗಿನ ವಿಚಾರವು ಬೆಳಕಿಗೆ ಬಂದಿರುವುದು ಬರೀ ಕನ್ನಡದಲ್ಲಿ ಮಾತ್ರವಲ್ಲ, ''ಮಧ್ಯಯುಗದ ಭಾರತೀಯ ಭಾಷೆಗಳಲ್ಲಿ ಎಲ್ಲೆಡೆಯೂ ಇಂಥಾ ಪ್ರಯತ್ನ ಜಾರಿಯಲ್ಲಿತ್ತು. ಆಧ್ಯಾತ್ಮಿಕ ಭಾಷೆಯಲ್ಲಿ ಇದು ಸಂಧಾ, ಸಂಧ್ಯಾ ಭಾಷೆಯೆಂಬ ಪ್ರಯೋಗವಿತ್ತು. ನಾಥ ಸಿದ್ಧರೂ ಕೂಡ ಪ್ರಾದೇಶಿಕ ಭಾಷೆಗಳಲ್ಲಿ ಜನರ ಆಡು ಮಾತು ಬಳಸಿ ಬೆಡಗಿನ ವಚನಗಳನ್ನು ಬರೆದಿದ್ದಾರೆ. ವಿಡಂಬನಾತ್ಮಕವಾದ ಈ ವಚನಗಳನ್ನು ಬಾವುಲ್ ಅಥವಾ ಬಾನಿ ಎಂದು ಕರೆದಿದ್ದಾರೆ. ಇವು ಗೂಢಾರ್ಥಗಳಿಂದ ತುಂಬಿರುತ್ತದೆ. ಉಪನಿಷತ್ತು ಕಾಲದಿಂದಲೂ ರಹಸ್ಯಕಾವ್ಯದ ಒಂದು ಪರಂಪರೆ ಹರಿದು ಬಂದಿದೆ. ಇಂಥಾ ಕಾವ್ಯಕ್ಕೆ ಪ್ರಹೇಲಿಕಾ ಎನ್ನುತ್ತಿದ್ದರು. ಹಿಂದಿಯ ಗೋರಖ್ ಬಾಣಿ, ಉಲಟ್ ಭಾಂಸಾ ಕೂಡ ಇದೆ ಪರಂಪರೆಗೆ ಸೇರಿದ ರಚನೆಗಳಾಗಿವೆ.''[೫೩] ಮುಖ್ಯವಾಗಿ ''ಸೂಫಿಗಳಲ್ಲಿ ರಾಝ್ ಎಂದು ಗುರುತಿಸಿಕೊಂಡು ಇದಕ್ಕೆ ಸಾಂಕೇತಿಕವಾಗಿ ಚಿತ್ರಮಂಡಲ, ಲಿಪಿ, ಭಾಷೆ, ಬೆಳಕಿಗೆ ಬಂದವು. ಕೊಡೇಕಲ್ಲವರ ಅಮರಗನ್ನಡ ಲಿಪಿ, ಶರಣರ ಬೆಡಗು, ನಾಥರ ಉಲಟ್ ಭಾಂಸಿ ಇವೆಲ್ಲಾ ಬೆಡಗೇ.''[೫೪]

ವಚನಕಾರನಾದ ಅಲ್ಲಮಪ್ರಭುವಿಗೂ ಉತ್ತರ ಭಾರತದ ಶೈವ, ಶಾಕ್ತ, ನಾಥ ಪಂಥದವರ ಸ್ನೇಹದ ಪ್ರಸ್ತಾಪ ಪ್ರಭುವಿನ ವಚನದಲ್ಲಿ ಬರುತ್ತದೆ. ಅದನ್ನು ಕನ್ನಡದ ಬೆಡಗಿನ ವಚನದಲ್ಲಿ ಕಾಣಬಹುದು.

> ''ಅರಗಿನ ದೇಗುಲದಲ್ಲಿ ಒಂದು ಉರಿಯ ಲಿಂಗವ ಕಂಡೆ
> ಮತ್ತೆ ದೇವರ ಪೂಜಿಸುವವರಾರೂ ಇಲ್ಲ
> ಉತ್ತರಾಪಥದ ದರ್ಶನಾದಿಗಳಿಗೆ ಸುತ್ತಿ ಮುತ್ತಿದ ಮಾಯೆ
> ಎತ್ತಲಿಕೆ ಹೋಯಿತ್ತು
> ಮರನೊಳಗಣ ಕಿಚ್ಚು ಮರನ ಸುಟ್ಟದ ಕಂಡೆ
> ಗುಹೇಶ್ವರನೆಂಬ ಲಿಂಗವಲ್ಲಿಯೇ ನಿಂದಿತ್ತು''[೫೫]

ಸ್ಥೂಲ ತನುವಿನ ಈ ಅರಗಿನ ದೇಹದಲ್ಲಿ ಸುಜ್ಞಾನ ವೆಂಬ ಲಿಂಗವು ಸ್ಥಾಪನೆಯಾಗಿದೆ. ಅದು ಪೂಜೆ ಗೊಳ್ಳುವ ಲಿಂಗವಾಗಿರದೆ ಮೋಕ್ಷಮಾರ್ಗದ ಜ್ಞಾನವಾಗದೆ ಉತ್ತರಾಪಥದ ಸಂತರ ದಾರ್ಶನಿಕ ಮಾಯೆಯಾಗಿದೆ. ತುನುಭಾವದ ಪರಬ್ರಹ್ಮಸ್ವರೂಪಿ ವೃಕ್ಷವು, ಎನ್ನ ಮನದಲ್ಲಿದ್ದು ಜ್ಞಾನದ ಲಿಂಗವೇ ಗುಹೇಶ್ವರನ ಲಿಂಗವೆಂದು ಗುರುತಿಸಬಹುದು.

ಇಲ್ಲಿ ಉತ್ತರಾಪಥದ ಶಬ್ದ ಬಳಕೆಯನ್ನು ಅಲ್ಲಮನು ಬೆಡಗಿನ ಮೂಲಕ ಅಭಿವ್ಯಕ್ತಿಸಬೇಕಾದ ನಿಗೂಢ ಹಿನ್ನೆಲೆ ಹೀಗಿದೆ. "ಉತ್ತರಾಪಥದ ತಾತ್ವಿಕತೆ ಸ್ತ್ರೀ ಶಕ್ತಿವಾದದ ಅಂತಿಮ ವಿಜಯ, ಈ ಲೋಕ ಮಂತ್ರ ದೇವತೆಗಳ ಲೋಕ ಸ್ತ್ರೀ ಶಕ್ತಿ ಎಲ್ಲೆಲ್ಲೂ ಆವರಿಸಿರುವ ಲೋಕ. ಇದು ತಾತ್ವಿಕತೆಯನ್ನು ಅಧಿಕೃತವಾಗಿ ಒಪ್ಪಿಕೊಳ್ಳುವ ಮಂತ್ರದೇವತೆಗಳಾಗಿ ಗುಪ್ತ ಸಮಾಜಗಳಾಗಿ ಬೆಳೆದಿದೆ."[೫೬]

ಇಂಥಾ ಅದ್ವೈತ ಮನದ ವಚನಕಾರನು ಲಿಂಗದ ಆಶಯವನ್ನು ಬೆಡಗಿನ ಜ್ಞಾನದ ಮೂಲಕ ತರ್ಕಿಸುವುದು ಮುಖ್ಯವಾದರೂ, ಇನ್ನೊಂದು ಮಗ್ಗುಲಲ್ಲಿ ದೇವರ ನಿರಾಕಾರದ ಪ್ರಶ್ನೆಯನ್ನು ಪರಂಪರೆಯ ಮುಂದೆ ಕಟ್ಟಿಕೊಡುತ್ತಾನೆ.

ತತ್ವಪದಕಾರರು ಅಲ್ಲಮನ ಸಿದ್ಧಾಂತಗಳನ್ನು ಶ್ರದ್ಧಾಪೂರ್ವಕವಾಗಿ ಸ್ವೀಕರಿಸಿ, ಬೆಡಗಿನ ನಿರೂಪಣಾ ವಿಧಾನಗಳನ್ನು ಸಾಮಾನ್ಯರಿಗೆ ತಲುಪಲಿ ಎಂಬ ಭಾವದಿಂದ ಬೆಡಗಿನ ಹಿಂದೆ ಹೋಗದೆ ಆಡು ಮಾತಿನಲ್ಲಿಯೇ ಬೆಡಗನ್ನು ಒಗಟಾಗಿ ಹೇಳುತ್ತಾರೆ.

"ಉಂಡೋಗೆಂದರೆ ಊರ ಮುಂದ ಕುಂತ
ಹುಡುಕಲಿ ಎಲ್ಲಂತಾ
ಅಡಕಲ ಸಾರಿಸಿದಾರು ತಾಸಿಗೆ ಅರಸನಾಗಿ
ಬಂದೊರಸಿಗೆ ಕುಂತಾ
ಬೆರಸಿದ ನೀರು ಆರಿಸಿದೇನೆಂದಾ"[೫೭]

ಪಂಚಭೂತಾತ್ಮಕವಾದ ಈ ಕಾಯದಲ್ಲಿ ಆತ್ಮವು ಸದಾ ಎಚ್ಚರವಾಗಿದ್ದು, ಅದು ಸ್ವೇಚ್ಛೆಯನ್ನು ಅರಸುತ್ತಿರುತ್ತದೆ. ತತ್ವಪದಕಾರ ಮನಸ್ಸನ್ನು ಕುರಿತು ಹೊರಗೆ ಹೋದನೆಂದು ತಿಳಿದು ಕಲ್ಮಷ ತುಂಬಿದ ಈ ಕಾಯವನ್ನು ಸ್ವಚ್ಛ ಮಾಡಿದಾಗ ಶ್ರದ್ಧೆ, ನಿಷ್ಠೆ, ಎಚ್ಚರ, ಅನುಭವ, ಆನಂದ, ಸಮರಸವೆಂಬ ಆರು ಅಂಶಗಳನ್ನು ರೂಪಿಸಿಕೊಂಡು ಮನದ ಕಾಯವನ್ನು ಶುಭ್ರಗೊಳಿಸಿದೆ. ಇದೇ ಬೆಡಗು.

ತತ್ವಪದಕಾರಲ್ಲಿ ಬೆಡಗಿನ ಹಾಡುಗಳು ಒಂದೇ ತೆರನಾಗಿರುವುದಿಲ್ಲ. ಆದರೂ ಸತ್ಯದ ಇನ್ನೊಂದು ಆಯಾಮವನ್ನು ಬೆಡಗಿನ ಭಾಷೆಯಲ್ಲಿ ಹೇಳುತ್ತಾ, ಬುದ್ಧಿಯ ತರ್ಕಕ್ಕೆ ಲೋಕಗ್ರಹಿಕೆಯನ್ನು ಒದಗಿಸುತ್ತಾ ಅನುಭಾವದ ತೀಕ್ಷ್ಣತೆಯನ್ನು ಮುಂದು ಮಾಡುತ್ತದೆ. ಆದ್ದರಿಂದ ಬೆಡಗಿನ ಅನುಭಾವವಿದ್ದರೆ ಸಾಲದು, ಅನುಭಾವದ ಹಾಡಿನ ಮಹತ್ವ ಸ್ಪಷ್ಟವಾಗಿರಬೇಕು. "ಮದಲಿಂಗ ಮದಲಗಿತ್ತಿ ಸುಳಿಯೆಂದ| ಮೊದಲೇಳೆಂದಾ (ವಡಿಕೆ ತಾತಪ್ಪಯ್ಯ). ಇಲ್ಲಿಯ ಬೆಡಗು ಆತ್ಮನೆಲೆಯ ಭಕ್ತಿಯ ಖಚಿತ ಹುಡುಕಾಟವನ್ನು ಮಾಡುತ್ತದೆ. ಆದ್ದರಿಂದ ತತ್ವಪದಕಾರ ಜನಪದರ ಕ್ರಿಯಾ ಚಟುವಟಿಕೆಗಳನ್ನಿಟ್ಟುಕೊಂಡು ಬೆಡಗೆಂಬ ಘಟನೆಯನ್ನು ನಿರೂಪಿಸುತ್ತಾನೆ. ಬೆಡಗಿನ ಪದದಲ್ಲಿ ಹೆಚ್ಚಾಗಿ ಕೇಳಿರಣ್ಣಾ, ನೋಡಿರಣ್ಣಾ, ತಿಳಿಯಿರಣ್ಣಾ, ತಂಗಿ,

ಮಾನಿನಿ ಎಂಬ ಪದಗಳನ್ನು ಬಳಸಿ ಬೆಡಗಿನ ಸೌಂದರ್ಯ ಹೆಚ್ಚುವಂತೆ ಮಾಡುತ್ತಾರೆ. ಕಾರಣ ಮನುಷ್ಯ ಸಂಬಂಧದ ಸಂವೇದನೆ ಆತ್ಮೀಯ ಬೆಡಗಿನಲ್ಲಿ ಸೂಚನೆ ನೀಡುತ್ತದೆ. ಸರ್ವಜ್ಞನ ಬೆಡಗು ಈ ರೀತಿ ಪ್ರಕಟವಾಗುತ್ತದೆ.

"ಅಟ್ಟಿರು ಹಾವಾಡಿಗನ ಸುಟ್ಟಿರು ಕುಂಟುಣಿಯ
ಹೆಟ್ಟುಗೆಯ ಮೂಗನರಿದರು ಅವರು
ಭವಗೆಟ್ಟು ಕೂಡಿದರು ಪರಮಾತ್ಮ"[೫೮]

ಸಮಾಜದಲ್ಲಿ ದೊಡ್ಡ ಮನುಷ್ಯನೆಂದು ಗುರುತಿಸಿಕೊಂಡು ಹಾವಾಡಿಗನಾದ ಈ ತಲೆಹಿಡುಕನು, ಎಲ್ಲವೂ ತಿಳಿದು ಇವನ ಪುಂಗಿಯ ನಾದಕ್ಕೆ ತಾಳ ಹಾಕುವ ಈ ಮೂಕ ಹೆಂಗಸು, ಇವರಿಬ್ಬರೂ ಸಮಾಜಕ್ಕೆ ಕಂಟಕರೆಂದು ಸರ್ವಜ್ಞ ಹೇಳುವನು.

ಸರ್ವಜ್ಞನು ಸಂಪ್ರದಾಯವಾದಿ ಜನರಿಗೆ ವಿರೋಧಿಯೆ; ಸಮಾಜದ ಹುಳುಕನ್ನು ಬೆಡಗಿನ ಮೂಲಕ ಬಯಲು ಮಾಡುವಂಥವನು. ಆದ್ದರಿಂದ ಇವನಲ್ಲಿ ಬೆಡಗು ನಿಜ ಜೀವನದಲ್ಲಿ ಹಾಸು ಹೊಕ್ಕಾಗಿರುವಂಥಾ ಘಟನೆಗಳು ಬೆಂಕಿಯಂತೆ ನಿಗೂಢವಾಗಿರುತ್ತವೆ. ಆದ್ದರಿಂದ ಸರ್ವಜ್ಞನನ್ನು ಬೆಡಗಿನ ದೊರೆಯೆಂದು ಹೇಳಬಹುದು.

ಬೆಡಗಿನ ಪರಂಪರೆಯೆಂದು ಗುರುತಿಸಿಕೊಳ್ಳುವ ಪ್ರಸ್ತುತ ಸಂದರ್ಭದಲ್ಲಿ ಇದಕ್ಕೆ ಒಂದು ಸ್ಥಿರವಾದ ಅರ್ಥವಿದೆ. ಇದು ಕೇವಲ "೧೨ನೇ ಶತಮಾನದ ವಚನಕಾರರ ನಿರ್ಮಿತ ಮಾತ್ರವಲ್ಲದೆ ಆನಂತರದ ದಿನಗಳಲ್ಲೂ ಕೂಡ ಇದು ಬೇರೆ ಬೇರೆ ಮಟ್ಟುಗಳಲ್ಲಿ ಬೆಡಗೆಂದು ಗುರುತಿಸಿಕೊಳ್ಳುವ ಪರಂಪರೆಯಲ್ಲಿ ಕಂಡಿದೆ. ಕನಕರ, ಪುರಂದರ, ನಿಜಗುಣ ಶಿವಯೋಗಿಗಳ ರಚನೆಗಳಲ್ಲಿ ಸರ್ವಜ್ಞ ಮತ್ತು ತತ್ವಪದಕಾರರಲ್ಲಿ ಅಷ್ಟೇ ಅಲ್ಲದೆ, ನವೋದಯ ಸಂದರ್ಭ ಕಾಲದ ಬೇಂದ್ರೆ, ಮಧುರ ಚೆನ್ನರಲ್ಲಿ ಈ Elementನ್ನು ಬೇರೆ ಬೇರೆ ರೀತಿಯಲ್ಲಿ ಕಾಣಬಹುದು. ಇವತ್ತು ಬರೆಯುವಂತಾ ಎಚ್.ಎಸ್.ಶಿವಪ್ರಕಾಶ್ ಮತ್ತು ಟಿ.ಎಸ್.ರಾಮಸ್ವಾಮಿ ಮುಂತಾದ ಕವಿಗಳಲ್ಲೂ ಕೂಡಾ Element ಇದೆ. ಹಾಗಾಗಿ ಬೆಡಗಿನ ಎಲ್ಲಾ Element ಎಲ್ಲಾ ಕಾಲದ ಎಲ್ಲಾ ಕಾವ್ಯದ ಒಂದು ಅಂತರ್ಗತವಾಗಿರತಕ್ಕಂಥಾ ಮುಖ್ಯವಾದ ಒಂದು ಕರೆಂಟು ಅದು."[೫೯]

ಆದ್ದರಿಂದ ತತ್ವಪದಕಾರ ಹಿಂದಿನ ಪರಂಪರೆಯ, ಪ್ರೇರಣೆಯ ಅನುಭವದ ಮೂಲಕ ಹೊಸದನ್ನು ಸಮರ್ಥಿಸುತ್ತಾನೆ. ಆದ್ದರಿಂದ ಆಧುನಿಕರಲ್ಲಿ ಬೆಡಗಿನ ಸ್ಥಾನವು ನೇರವಾಗಿ ಮುಖಾಮುಖಿಯಾಗುತ್ತದೆ. ಕಾರಣ ನಿರ್ಲಕ್ಷಿತ ಧರ್ಮದ ಆಕ್ರೋಶದ ಪ್ರಶ್ನೆ ಉಂಟಾಗುತ್ತದೆ. ತಮ್ಮ ನೋವನ್ನು ಯಾವ ರೀತಿ ಹಂಚಿಕೊಳ್ಳಬೇಕೆಂಬ ಹತಾಷೆಯಾದಾಗ ಪರಂಪರೆಯ ಧರ್ಮ ಕರ್ಮಗಳ ಮೊತ್ತವನ್ನು ಬೆಡಗಿನ

ಭಾಷೆಯ ಹೆಗಲ ಮೇಲೆ ಹೊತ್ತುಕೊಂಡು ಪ್ರಶ್ನೆ ಮಾಡುತ್ತಾನೆ. ಬೆಡಗಿನ ಭಾಷೆಯ ಉತ್ತರ ಕೊಡುತ್ತಾನೆ. ಅದು ಹೀಗಿದೆ.

"ಹತ್ತಿಯ ಹೊಲದಾಗ ಎತ್ತು ಸತ್ತಾದ ಒಂದು
ಸತ್ಯ ಕತ್ತಿಯ ಪಿಡಿದು ಚರ್ಮವ ಸುಲಿತಂದು
ಸುಲಿದ ಚರ್ಮಕೆ ನಾನು ಸುಣ್ಣವ ಧರಿಸಿದೆನು
ತನುವೆಂಬೊ ಭಾಂಡದೊಳು ಮನವೆಂಬೊ ನೀರು ತುಂಬಿ
ಘನವೆಂಬೊ ಅಡಿವಿಗೆ ಹೋಗಿ ಅವರೆ ಚಕ್ಕೆಯ ತಂದು
ಸುಣ್ಣದ ತೊಗಲನ್ನು ಬಣ್ಣ ಮಾಡಿದೆ ನಾನು
ಬಣ್ಣ ಮಾಡಿದ ತೊಗಲು ಬಯಲಿಗೆ ನೆನೆಯಿಟ್ಟು
ಕುಟ್ಟಿ ಕುಟ್ಟಿ ಹದ ಮಾಡಿ ಹೊಲಿದೆ ನಿಮ್ಮ ಮೆಟ್ಟು"[೬೦]

ತತ್ವಪದಕಾರನಿಗೆ ಬೆಡಗೆಂಬ ಸಂವೇದನೆಯು ಆರ್ಥಿಕ ಮತ್ತು ಸಾಮಾಜಿಕ ಜೀವನದ ಸಂಘರ್ಷವಾಗಿದೆ. ತತ್ವಪದಕಾರ ಇದು ತನ್ನ ವೈಯಕ್ತಿಕ ನಿರ್ಧಾರವೆಂದರಿಯದೆ, ಸಮಾಜದಲ್ಲಿ ಬದಲಾಗುತ್ತಿರುವ ಪರಿಣಾಮವನ್ನು ಒಗಟಿನ ಮೂಲಕ ಬೆರಗುಗೊಳಿಸುತ್ತಾನೆ. ಇದಕ್ಕೂ ಪೂರ್ವದಲ್ಲಿ ೧೨ನೇ ಶತಮಾನದ ಕೆಳವರ್ಗದ ವಚನಕಾರರು ತಮ್ಮ ಕಾಯಕದ ಪರಿಕರಗಳನ್ನು ಪ್ರತಿಮೆ ಮತ್ತು ರೂಪಕಗಳನ್ನು ವಚನಗಳಲ್ಲಿ ಬಳಸಿದ್ದನ್ನು ಕಾಣಬಹುದು.

ಇಲ್ಲಿ ಸತ್ತ ಎತ್ತು, ಚರ್ಮ, ಸುಣ್ಣ, ಮೆಟ್ಟುಗಳಂಥಾ ರೂಪಕಗಳನ್ನು ಪರಿಣಾಮಕಾರಿಯಾಗಿ ನಿರೂಪಿಸಿದ್ದಾನೆ. ಜ್ಞಾನವೆಂಬ ಹತ್ತಿಯ ಹೊಲದಲ್ಲಿ, ನಿಸ್ತೇಜ ಮನದ ಎತ್ತು ಸತ್ತು ಬಿದ್ದಿದೆ. ಅದರ ತೊಗಲನ್ನು ಸುಲಿಯಲು ಧರ್ಮಸೂತ್ರವೆಂಬ ಕತ್ತಿಯನು ಹಿಡಿದು, ಜ್ಞಾನದ ಸುಣ್ಣವನು ಹಚ್ಚಿದೆ. ಬ್ರಹ್ಮಜ್ಞಾನವೆಂಬ ಬಯಲಲ್ಲಿ ಎತ್ತಿನ ಚರ್ಮವನ್ನು ನೆನೆಯಿಟ್ಟೆ, ದೇವರನ್ನು ಸ್ತುತಿಸುತ್ತಾ ನಿಮ್ಮ ಚಪ್ಪಲಿ ಹೊಲಿಯುವ ಕೆಲಸವನ್ನು ಶ್ರದ್ಧೆಯಿಂದ ಮಾಡಿದೆ ಎಂದು ಸ್ಪಷ್ಟಪಡಿಸುವನು.

ಮುಖ್ಯವಾಗಿ ಬೆಡಗಿನ ಹಾಡುಗಳನ್ನು ಎರಡು ರೀತಿಯಾಗಿ ಗ್ರಹಿಸಬಹುದು. ಒಂದರಲ್ಲಿ ರೂಪಕಗಳು ಬಹಳವಿದ್ದರೆ, ಇನ್ನೊಂದರಲ್ಲಿ ಉಪಮಾನ ಉಪಮೇಯಗಳು ಬಹಳಷ್ಟಿರುತ್ತವೆ. ಉದಾ "ಹೊಡಿತಾನೆ ಬಡಿತಾನೆ | ಅಡ್ಡಿಪಾಲು ಮಾಡುತಾನೆ | ನಾನು ಹೋಗುತೀನಮ್ಮ ತಿರುಗದ ಹಾದಿಗೆ (ಅದೇ) ವುಡುಕಿ ಗಂಡನ ತಾಳಿ ಮಿಡುಕದೆ ಕಟ್ಟಿಕೊಂಡೆ ಮನೆಯೊಳಗೆ ಬಾಳ್ವೆ ಮಾಡಲಾರೆನಮ್ಮ | (ಅದೇ) ಹರಯದ ಕಾಲಕ್ಕೆ ಇಪ್ಪತ್ತೈದರ ದಾರಿಯ ನಡೆದೆ | ಯಂಟೂರು ತಿರುಗಿ ನಾ ಗಂಟು ಯಿಳುವುತಿದ್ದೆ|"[೬೧]

ತತ್ವಪದಕಾರರು ಕಟ್ಟುವ ಬೆಡಗಿಗೂ ವಚನಕಾರರು ಹೇಳಿದ ಬೆರಗಿಗೂ ತುಂಬಾ ವ್ಯತ್ಯಾಸವಿದೆ. (ಹುಲಿಯ ಹಿಂದೆ ಹುಲ್ಲೆ ಹೋದರೆ ಇದ ಕಂಡು ಬೆರಗಾದೆ. ಇದನ್ನು ಗಮನಿಸಬಹುದು) ಮುಖ್ಯವಾಗಿ ತತ್ವಪದಕಾರ ಸ್ತ್ರೀ ಸಂವೇದನೆಯನ್ನು ಗಮನದಲ್ಲಿಟ್ಟುಕೊಂಡು ಪುರುಷ ಪ್ರಧಾನ ಸಂಸ್ಕೃತಿಯ ಮೌಲ್ಯಗಳನ್ನು ಬೆಡಗಿನ ಭಾಷೆಯ ಮೂಲಕ ಪುನರ್ ಸಂಧಾನ ಮಾಡುತ್ತಾನೆ. ನಿರ್ಧೇಹವಾದ ಈ ಶರೀರವನ್ನು ಪ್ರಾಣಧರ್ಮದ ಪತಿಯು ಅಡವಿಪಾಲು ಮಾಡುತ್ತಾನೆ. ಜ್ಞಾನಾರೂಢನಾದ ಇವನ ಜೊತೆ ಬಾಳಲಾರದೆ, ಪಾರಮಾರ್ಥಿಕ ಹಂತದ ಇಪ್ಪತ್ತೈದು ತತ್ವಗಳನ್ನು ಕಲಿತೆ ಅಷ್ಟಮದಗಳು ತುಂಬಿದ ಎಂಟು ಊರಿಗೆ ತಿರುಗಿ ನನ್ನ ಹಾದಿ ಕಂಡುಕೊಂಡೆ.

ಉಪಮಾನ ಉಪಮೇಯ ತುಂಬಿದ ಇನ್ನೊಂದು ಬೆಡಗಿನ ತತ್ವಪದ ಹೀಗಿದೆ. ''ಉರಿಯ ಕರ್ಪೂರ ಗುಡಿ ಉರಿಯೊಳಗೆ ತನ್ನ ಕುರುಹೇನು ತೋರಿದಂತೆರಡು ರೂಪ | ಮರವೆ ಮಹಾದಾನಿಗಳ ಅರಿವಿನ ಹಾದಿಯೊಳು | ಬೆರೆಸಿ ಜೀವನವ ಬ್ರಹ್ಮತ್ವದೊಳು ಮೆರೆಸಿದ |''[೬೨] ಸ್ವಾನುಭಾವದ ಗುಡಿಯಲ್ಲಿ ಜ್ಞಾನ ಸ್ವರೂಪನಾದ ಸಂತನು ಪ್ರಜ್ವಲಿಸುತಿಹನು.

ತತ್ವಪದಕಾರರು ಬೆಡಗಿನ ಅಭಿವ್ಯಕ್ತತೆಯಲ್ಲಿ ಶಿಷ್ಟ ಸಂಸ್ಕೃತಿಯ ಪ್ರೇರಣೆ ಪಡೆದು, ಒಂದು ಶಕ್ತಿಯುತವಾದ ಪರಂಪರೆಯನ್ನು ಬೆಳೆಸಲು ಕಾರಣರಾದರು. ಮುಖ್ಯವಾಗಿ ಬೆಡಗಿನ ಹಾಡು ತನ್ನ ಸ್ವತಂತ್ರತೆಯ ಗತಿಯನ್ನು ಓದು ಗಬ್ಬದ ಮೂಲಕ ಹಾಡು ಗಬ್ಬದಲ್ಲಿ ಯಶಸ್ಸು ಕಂಡಿದೆ. ಶಿಶುನಾಳ ಶರೀಫ್‌ರ ''ಕೋಡಗನ ಕೋಳಿ ನುಂಗಿತ್ತಾ ನೋಡವ್ವ ತಂಗಿ'' ಈ ಬೆಡಗಿನ ತತ್ವಪದವನ್ನು ಗಮನಿಸಬಹುದು. ತತ್ವಪದಕಾರರು ಸಮೂಹವನ್ನು ಮುಖ್ಯವಾಗಿಟ್ಟುಕೊಂಡು ಭಿನ್ನ ಆಕರಗಳ ಮೂಲಕ ಬೆಡಗನ್ನು ಬೆಳಸಲು ಕಾರಣರಾದರು. ಅವು ವೈವಾಹಿಕ ಸಂಬಂಧ, ಸಂಸಾರದ ಪ್ರತೀಕ ಕಾಯಕ ಮತ್ತು ಜ್ಞಾನ ಇಂಥಾ ಪ್ರತೀಕಗಳು. ತತ್ವ ಸ್ಥಾನದ ಅಸ್ತಿತ್ವ ಸ್ಥಿರವಾಗಿ ಸ್ಥಾಪಿತವಾಗಲು ಬೆಡಗಿನ ಸಂವೇದನೆಗಳು ಕಾರಣವಾಗಿರಬೇಕು.

ಪ್ರತಿಯೊಬ್ಬ ತತ್ವಪದಕಾರ ತನ್ನ ಬೆಡಗಿನ ಹಾಡಿನಲ್ಲಿ ತಮ್ಮ ನಿಜ ಜೀವನದ ಕತೆಯನ್ನು ಸೈದ್ಧಾಂತಿಕವಾಗಿ ಅರುಹಲು ಕಾರಣನಾಗಿದ್ದಾನೆ. ಆದ್ದರಿಂದ ಬೆಡಗಿಗೆ ಬೆಡಗೇ ಉತ್ತರವಲ್ಲ. ತತ್ವದ ಪ್ರಶ್ನೆಯೊಂದಿಗೆ ಬೆಡಗಿನ, ವಿಲಾಸ ಕೃಷಿಯೆಲ್ಲಿದೆ ಎಂದು ಹುಡುಕುವ ಪ್ರಯತ್ನ ಮುಖ್ಯವಾಗಿರುತ್ತದೆ.

ವಚನಕಾರರಲ್ಲಿ ಹೃದಯ ತಟ್ಟುವ ಬೆಡಗಿನ ಹಾಡು ಇದಾಗಿದೆ.

''ಗಂಗಾದೇವಿ ಮುಂಡೆಯಾದಳು
ಗೌರಿ ದೇವಿ ಓಲೆಯ ಕಳೆದಳು
ಸೂರ್ಯಚಂದ್ರರಿಬ್ಬರೂ ನೀರಿಗಿಳಿದರಲ್ಲಾ

ವಾಯುದೇವ ವಿಮಾನ ಹೊತ್ತ
ವಾಸುದೇವ ತಲೆಗೊಳ್ಳಮನಿರಿಸಿದ
ಅಲ್ಲಿಂದತ್ತ ಗೊಗ್ಗೇಶ್ವರ ಸತ್ತನೆಂಬ ಸುದ್ದಿ"[೬೩]

ಈ ವಚನ ಸಂಪ್ರದಾಯಸ್ಥ ಮನಸ್ಸುಗಳಿಗೆ ಘಾಸಿಯನ್ನುಂಟು ಮಾಡುತ್ತದೆ. ಜಿಡ್ಡುಗಟ್ಟಿದ ಪರಂಪರೆಯಲ್ಲಿ ಅಲ್ಲಮನ ಈ ಮಾತುಗಳು ಬಾಣ ಬಿಟ್ಟಂತಿದೆ. ಮುಖ್ಯವಾಗಿ ಈ ವಚನ ಯೋಗದಲ್ಲಿ ವ್ಯಕ್ತವಾಗುತ್ತದೆ. "ಶರಣನ ಇಷ್ಟಲಿಂಗವು ಪ್ರಾಣಲಿಂಗ, ಭಾವಲಿಂಗ, ವಿಕಾಸವಾಗುತ್ತಿದ್ದಂತೆ ಜ್ಞಾನಶಕ್ತಿಯು ಸತಿಭಾವಕ್ಕೆ ಎರವಾಗಿ ನಿಲ್ಲುತ್ತವೆ. ಹಠಯೋಗ ಹೇಳುವ 'ಹ' ಎಂಬ ಸೂರ್ಯ ಅಥವಾ ಈಡಾನಾಡಿ, 'ಠ' ಎಂಬ ಚಂದ್ರ ಅಥವಾ ಪಿಂಗಳ ನಾಡಿಗಳ ಸ್ವರಗಳ ನಿರೋಧ ಉಂಟಾಗಿ, ಪ್ರಾಣವಾಯು ಸುಷುಮ್ನ ನಾಳದಲ್ಲಿ ಲಿಂಗಸಾಮರಸ್ಯದ ತೃಪ್ತಿಯಲ್ಲಿ ತೇಲುತ್ತದೆ. ಮಹಾಚೈತನ್ಯದ ಪರವಸ್ತು ಸಹಸ್ರಾರದಲ್ಲಿ ಮಹಾ ಘನದ ಆತ್ಯಂತಿಕ ಅರಿವನ್ನುಂಟು ಮಾಡುತ್ತದೆ. ಇಂಥ ಲಿಂಗೈಕ್ಯ ಪದ ನಾಮ, ರೂಪ, ನಾದ, ಬಿಂದು, ಕಳೆಗಳಿಂದ ಮುಕ್ತವಾದ ಮಹಾಶೂನ್ಯವೇ ಆಗಿರುತ್ತದೆ."[೬೪]

ಬೆಡಗಿನ ಭಾಷೆ ಕ್ಲಿಷ್ಟವಾದ್ದರಿಂದ ಅದರ ಶೋಧವನ್ನು ಅರಿಯಲು, ಸೃಜನಶಬ್ದಗಳ ಬಳಕೆ ಮತ್ತು ಅರ್ಥಗಳನ್ನು ಗ್ರಹಿಸುವ ಸಮರ್ಥನೆ ಇರಬೇಕು. ಆದರೆ ಜನಪದರ ತತ್ವಪದಗಳು ಹಾಗಲ್ಲ. ಪರಂಪರೆಯ ಭಾಷೆ, ಅರ್ಥ, ಸೌಂದರ್ಯಗಳನ್ನು ಹಾಡುಗಾರ ತತ್ವಗಳಾಗಿ ಪ್ರಯೋಗಿಸಿ, ಆಡು ನುಡಿಯ ಕಲೆಯ ಸೌಂದರ್ಯವನ್ನು ಬೆಡಗಿಗಾಗಿ ಬಳಿಸಿ ಜೀವಂತ ಲಯ ಸೃಷ್ಟಿಸುವನು. ಇದೇ ತತ್ವಪದದ ಇನ್ನೊಂದು ಭಾಗ.

**ಪ್ರಾಣಿ ಪಕ್ಷಿಗಳ ಬೆಡಗು :** ತತ್ವಪದಕಾರರ ಹಾಡುಗಳಲ್ಲಿ ಸತ್ವಪೂರ್ಣವಾದ ಬೆಡಗು ಹೊರಬರಬೇಕಾದರೆ ಅದು ಸಮುದಾಯದ ನಂಬಿಕೆಯನ್ನು ಜವಾಬ್ದಾರಿಯುತವಾಗಿ ಗುರುತಿಸಿಕೊಂಡಾಗ ಮಾತ್ರವೆಂಬುದನ್ನು ಗಮನಿಸಬೇಕು. ಮುಖ್ಯವಾಗಿ ತತ್ವಪದಕಾರ ಜನಪದರ ನಂಬಿಕೆಯನ್ನು ಪೂರ್ವಿಕರಿಂದ ಒಪ್ಪಿಕೊಂಡು ಬಂದಂಥ ಮೌಖಿಕ ಆಕರಗಳೇ ಕಥೆಗಳಾಗಿವೆಯೆಂದು ಸಮರ್ಥಿಸಬಹುದು. ಅವು ಪಂಚತಂತ್ರ ಕಥೆಗಳು, ವಡ್ಡಾರಾಧನೆಯ ಕಥೆಗಳು ಆಗಿ ತತ್ವಪದಕಾರರ ಹಾಡುಗಳ ತನಕ ತನ್ನ ವ್ಯಾಪ್ತಿಯನ್ನು ಹಿರಿದಾಗಿಸಿಕೊಂಡಿದೆ. "ಮುಖ್ಯವಾಗಿ ನಮ್ಮ ಜನಪದರ ಕಥೆಗಳಿಗೆ ಹಿರಿದಾದ ಸ್ಥಾನವಿದೆ. ಮಾನವನ ಬದುಕಿನ ಸುಗುಣ ಮತ್ತು ದುರ್ಗುಣಗಳನ್ನು ಮೃಗ, ಪಕ್ಷಿಗಳಿಗೆ ಆರೋಪಿಸಿ ಅವುಗಳ ಮೂಲಕ ಕಥಾ ನಿರೂಪಣೆ ಮಾಡುವುದು, ಹಾಡುಗಳನ್ನು ಕಟ್ಟುವುದು ಬಹು ಮುಖ್ಯವಾದ ಅಂಶವಾಗಿದೆ. ಇಂಥ ಸಂದರ್ಭದಲ್ಲಿ ಬೆಡಗಿನ ಉದ್ದಿಷ್ಟವಾದ, ನೀತಿ ಪ್ರತಿಪಾದನೆಗಾಗಿ ಸುಭಾಷಿತಗಳನ್ನು, ಶ್ಲೋಕಗಳನ್ನು, ಪುರಾಣ, ಧರ್ಮಶಾಸ್ತ್ರ ಹಾಗೂ ನೀತಿಶಾಸ್ತ್ರಗಳಿಂದ ಆಯ್ದು ಕಥೆ ಹೆಣೆಯಲಾಗಿದೆ."[೬೫]

ಇಂಥ ಸತ್ವಪೂರ್ಣ ಕಥೆಗಳ ಪ್ರೇರಣೆಯನ್ನು ಭಕ್ತಿ ಪರಂಪರೆಯ ಬೆಡಗಿನ ಹಾಡುಗಾರರು, ತಮ್ಮ ಅನುಭಾವದ ಮೂಲಕ ಪುನಃ ವ್ಯಾಖ್ಯಾನಿಸಿ ಹಾಡುಗಳಲ್ಲಿ ಸಮರ್ಥಿಸಿದ್ದಾರೆ. ತತ್ವಪದಗಳಲ್ಲಿ ಕಂಡುಬರುವ ಹಾಡುಗಳು ಕಥೆ, ಉಪಕಥೆ, ಒಳಕಥೆ, ಹೀಗೆ ಅನುಭಾವ ತರ್ಕದ ಮೂಲಕ ವಿವೇಚಿಸುತ್ತಾರೆ. ಪ್ರಾಣಿ ಪಕ್ಷಿಗಳ ಪರಿಚಿತ ವಿನ್ಯಾಸಗಳು ಪದಗಳಲ್ಲಿ ವಿಭಜಿಸುತ್ತಾ ಸಾಗುತ್ತದೆ. ಇಂಥ ಆಶಯ ತತ್ವಪದಕಾರರಲ್ಲಿ ಮರು ಪ್ರಯತ್ನದ ಸಂಧಾನವೆಂದು ಹೇಳಬಹುದು.

ಈ ಮುಖಾಂತರ ಬೆಡಗಿನ ಪ್ರಾಣಿ ಪಕ್ಷಿಗಳ ಸೈದ್ಧಾಂತಿಕ ಧಾರೆಗಳು ಮನುಷ್ಯ ಸ್ವಭಾವದ ಜೊತೆಗೆ ಬಾಂಧವ್ಯ, ನಂಬಿಕೆ, ಆರಾಧನೆ, ದೈವತ್ವ, ಪುನರ್ಜನ್ಮ ಹೀಗೆ ಏನೇ ಕಾರಣಗಳಾದರೂ ಅವುಗಳ ಒಟ್ಟು ಮೊತ್ತ ತತ್ವಪದಕಾರರ ಪ್ರಾಣಿ ಪಕ್ಷಿ ಸಂಕೇತಗಳ ಒಗಟುಗಳೆಂದು ಹೇಳಬಹುದು. ತತ್ವಪದಕಾರ ಪ್ರಾಣಿಯ ರೂಪಕವನ್ನು ಸ್ವೀಕರಿಸಿ ತಾನು ಸ್ನೇಹಿತನಂತೆ ಮಾತನಾಡುವ ದೃಷ್ಟಿಕೋನವು ಬಹು ಸಹಜವಾಗಿ ಹಾಡುಗಳಲ್ಲಿ ಕಂಡುಬರುತ್ತದೆ. "ಗಿಣಿಯೇ ಮನದಣಿಯೇ" "ಪರ್ವತದ ಮ್ಯಾಲೊಂದು ಫಣಿ ಆಲದಗಿಡ ಹುಟ್ಟಿ ಇರುವುದೊ ಅಯ್ಯ", "ಮೂರು ಕಾಲಿನ ಪಕ್ಷಿ ಮುಗಿಲ ಮ್ಯಾಲಿರುವುದೋ" "ಅಣ್ಣಾ ಮತ್ತೊಂದು ಬಂಡಿಯೊಳಗೆ ಆನೆ ಬಂದೈತಣ್ಣಾ", "ಈ ಭೂಮಿ ಮ್ಯಾಲೊಂದು ಮರವ ಹುಟ್ಟೈತಿ ಅದರ ಬಡ್ಡಿ ಮ್ಯಾಲಕ ಕೊಲ್ಲಿ ತೆಳ್ಯಾಕ ಬೇರ ಬಿಟ್ಟೈತಿ" ಇಂಥ ತಾತ್ವಿಕ ಶಬ್ದಗಳನ್ನು ತತ್ವಪದಕಾರ ತನ್ನ ಹಾಡುಗಳಲ್ಲಿ ನೇರವಾಗಿ ಬಳಸದೆ ಬೆಡಗಿನ ಅನುಭಾವದ ಮೂಲಕ ಒಂದು ಕಥಾ ಚಿತ್ರವನ್ನು ಕಟ್ಟುತ್ತಾನೆ.

> "ಸತ್ತ ಚೇಳೆಯವ್ವಾ ಬೆನ್ನತ್ತಿ ಕಚ್ಚಿತು ಕೇಳವ್ವಾ |
> ಮತ್ತು ಬ್ಯಾನೆ ಎದೆ ಕುತ್ತಿಗೆ ಕಣ್ಣೊಳು ಚಿತ್ತದಲಿ
> ಎತ್ತೆತ್ತಲಾಗುತಿದೆ | ಏಳು ಗೇಣು ಇತ್ತು ಮಣಿಗಳು
> ಏಳು ಅದಕೆ ಮುತ್ತು | ಕೇಳೆ ಬದುಕಿದುದು
> ಬಹಳಾಶ್ಚರ್ಯದೆ ಮತ್ತಿಷ್ಟೆ ಕುಂತದ್ದುಬಿದ್ದರದರಷ್ಟೆ
> ಉದ್ದ ಬಿದ್ದರಿನ್ನು ಸುದ್ದಿಗಿಲ್ಲ ಬ್ಯಾನೆ"೬೬

ತತ್ವಪದಕಾರರಲ್ಲಿ ಚೇಳು ಒಂದು ಸಂಕೇತವಾಗಿದೆ. ಇಲ್ಲಿ ಸತ್ತ ಚೇಳೆಂದು ಹೇಳುತ್ತಾನೆ. ಜೀವಂತ ಚೇಳೆನ್ನುವುದಿಲ್ಲ. ತತ್ವಪದಕಾರ ಗಿಡ ಮರಗಳಿಗೆ ಜೀವವಿರುವಂತೆ, ಹಾವು ಚೇಳು ಸತ್ತರೂ ಜೀವವಿದೆಯೆಂದು ಭಾವಿಸಿ ಇಂಥ ಬೆಡಗಿನ ಭಾಷೆಯಲ್ಲಿ ತತ್ವ ಕಟ್ಟುತ್ತಾನೆ.

ಮಿಥ್ಯೆ ಎಂಬ ಸತ್ತ ಚೇಳು, ಸುಖೇಚ್ಛೆ, ಆತ್ಮವಿಚಾರ, ನಿಸ್ಸಂಗ, ವಾಸನಾಕ್ಷಯ, ಆನಂದಿನಿ, ತೂರ್ಯ, ತೂರ್ಯಾತೀತ ಈ ಏಳು ಮಣಿಗಳು ಸತ್ತ ಚೇಳಿಗೆ ಮೂಡಿದಾಗ ಮತ್ತೆ ಚೈತನ್ಯವಾಗಿ

ಬದುಕಿತು. ಶವಾಸನದ ತೂರ್ಯಾವಸ್ಥೆಯಲ್ಲಿ ಸ್ಥಬ್ಧನಾಗುವುದು, ಇಲ್ಲಿ ಶಬ್ದಕ್ಕೆ ಮೀರಿದ ಅನುಭಾವವೆಂದರೆ ಚೇಳೆ ಎಂದು ತೋರುತ್ತದೆ.

ಸಾಮಾನ್ಯಾರ್ಥದಲ್ಲಿ ಹೀಗೆ ಗ್ರಹಿಸಬಹುದು. ಶಿಲ್ಪಗಳಲ್ಲಿ ಚೇಳಿನ, ಹಾವಿನ ಸಂಕೇತವನ್ನು ಕಾಣಬಹುದು. ಈ ಏಳುಮಣಿಯ ಚೇಳು ಹಾವನ್ನು ಎದುರಿಸುವ ಸಾಮರ್ಥ್ಯವುಳ್ಳಂಥ ವಿಷಕೀಟವಾಗಿದ್ದ, ಈ ಚೇಳು ಮನುಷ್ಯರಿಗೆ ಕಚ್ಚಿದರೆ ಮನುಷ್ಯರಿಗೆ ಔಷಧಿ ದೊರಕದೆ ಸಾವಿನಲ್ಲಿ ಕೊನೆಯಾಗುವನು. ಶಿಷ್ಯರು ಹಾವನ್ನು ಪ್ರತಿಮೆಯಾಗಿ ಸ್ವೀಕರಿಸಿ ಚೇಳನ್ನು ದೂರವಿಟ್ಟರೆ ತತ್ವಪದಕಾರ ಪರಂಪರೆಯ ಬೆಡಗನ್ನು ಅನುಭಾವದಲ್ಲಿ ಕಟ್ಟಿಕೊಡುತ್ತಾನೆ. ಸತ್ತ ಚೇಳು ಮತ್ತೆ ಎದ್ದಿತೆಂದಾಗ ಸಾಮಾನ್ಯ ನಂಬಿಕೆಯಲ್ಲಿ ಸತ್ತಿತು. ಬೆಡಗಿನಲ್ಲಿ ಬದುಕಿತು. ಬೆಡಗಿನ ಪರಂಪರೆಯಲ್ಲಿ ಇಲ್ಲಿ ಚೇಳಿನ ಪ್ರತೀಕ ಪಲ್ಲಟವಾಗುತ್ತದೆ.

"ಹಾಲ ನೇಮವ ಹಿಡಿದಾತ ಬೆಕ್ಕಾಗಿ ಹುಟ್ಟುವ
ಕಡಲೆಯ ನೇಮವ ಹಿಡಿದಾತ ಕುದುರೆಯಾಗಿ ಹುಟ್ಟುವ
ಅಗ್ಘವಣಿಯ ನೇಮವ ಹಿಡಿದಾತ ಕಪ್ಪೆಯಾಗಿ ಹುಟ್ಟುವ
ಪುಷ್ಪದ ನೇಮದ ಹಿಡಿದಾತ ತುಂಬಿಯಾಗಿ ಹುಟ್ಟುವ
ಇವು ಷಟ್‌ಸ್ಥಲದ ಹೊರಗು"[೬೭]

ಜ್ಞಾನದಂಥ ಹಾಲಿನ ಮನಸ್ಸುಳ್ಳ ಬೆಕ್ಕು ಪರಿಪೂರ್ಣ ಜ್ಞಾನವನ್ನು ಹೊಂದಿರುವುದು. ಬೆಕ್ಕು ಮತ್ತು ಮನುಷ್ಯನ ಸ್ನೇಹ ಅನ್ಯೋನ್ಯತೆಯ ಸಂಕೇತವು ಇದಾಗಿದೆ. ಕುದುರೆಯು ಇಷ್ಟ ದೇವರಾಗಿ ಮನವನ್ನು ಗೆಲ್ಲುವ ಶಕ್ತಿಯ ಸಂಕೇತವಾಗಿ ಮನುಷ್ಯನಲ್ಲಿ ಕಾರ್ಯನಿರ್ವಹಿಸುತ್ತಿರುತ್ತದೆ. ಕಪ್ಪೆ ಬ್ರಹ್ಮರಂಧ್ರದೊಳಗಣ ಪರಮಶಾಂತಿಯ ಬಿಂದುವಾಗಿ ಮನಸ್ಸೆಂಬ ಜಲದಲ್ಲಿ ಅವಿತುಕೊಳ್ಳುವುದು. ತುಂಬಿಯು ಪರಿಪೂರ್ಣ ಚಿಟ್ಟೆಯಾಗಿ ಹೂವಿಂದ ಹೂವಿಗೆ ಹಾರುವ ಅಹಂಕಾರದ ಜೀವ ಹಂಸವಾಗಿ ಭಕ್ತನ ಮನಸ್ಸಿನ ಏರಿಳಿತಗಳನ್ನು ಗಮನಿಸುತ್ತದೆ.

ವಚನಕಾರರು ಪ್ರಾಣಿ ಪಕ್ಷಿಗಳ ಸ್ವಭಾವಗಳನ್ನು ಬೆಡಗಿನ ಆಧ್ಯಾತ್ಮದ ಮನಃಶಾಸ್ತ್ರದ ಮೂಲಕ ಗ್ರಹಿಸಿದ್ದು ಸೀಮಿತವಾಗದೆ ಜನಪದರ ವಿಶಾಲವಾದ ನಂಬಿಕೆಯ ಜೊತೆಗೆ ಕೈಕೂಡಿಸುವುದಾಗಿದೆ. ಅಲ್ಲಮ ಪ್ರಭುವಿನಂಥವರು ಒಗಟಾಗಿ ಹೇಳಿದಾಗ ಬೆಡಗಿನ ಅರ್ಥಕ್ಕೆ ಗ್ರಹಣವಾಗುತ್ತದೆ. ಜನಪದ ತತ್ವಪದಕಾರರು ಬೆಡಗಿನ ವಿಕಾಸದ ಎಚ್ಚರಿಕೆಯಲ್ಲಿ ಪ್ರಾಣಿ ಸ್ವಭಾವದ ನಂಬಿಕೆಯನ್ನು ಸ್ವೀಕರಿಸಿದ್ದು, ಮತ್ತು ಪ್ರಾಣಿಗಳ ಸ್ನೇಹ ಮತ್ತು ಒಡನಾಟದಲ್ಲಿ ನಮ್ಮ ಜನಪದರು ಸೃಷ್ಟಿಸಿದ ಮೌಖಿಕ ಕಥೆಗಳೂ ಕಾರಣವೆಂಬ ಮಾತು ಅಷ್ಟೇ ಸತ್ಯ.

ವಚನಕಾರರ ಮತ್ತು ತತ್ವಪದಕಾರರ ಪ್ರತ್ಯೇಕತೆ ಯಾವ ನೆಲೆಯಲ್ಲಿ ನಿಗೂಢವಾಗಿದೆಯೆಂದು ಬೆಡಗಿನ ಪರಂಪರೆಯ ಆಳಕ್ಕೆ ಹೋದಂತೆಲ್ಲಾ ಅರಿವಾಗುತ್ತದೆ. ಆಧ್ಯಾತ್ಮದ ಸಂವಾದದಲ್ಲಿ ಬೆಡಗಾಗುತ್ತದೆ. ತತ್ವಪದಕಾರರಲ್ಲಿ ಪುನರ್ವ್ಯಾಖ್ಯಾನದ ಆಯ್ಕೆಯಾಗುತ್ತದೆ. ಗೂಗಲ್ಲು ಪರಪ್ಪಯ್ಯನ ತತ್ವಪದ ಹೀಗಿದೆ.

"ಗೂಗಿ ಹಳಿಯಲು ಭಾನು ತೇಜಕೆ ಕುಂದೆಂಟೇ ಯೋಗಿನಾಥ
ಶ್ವಾನ ಬೊಗಳಲು ಮಸ್ತಿ ಆನೆಗೆ ಕುಂದೆಂಟೆ ಯೋಗಿನಾಥ
ಜನವು ಹಳಿಯಲು ಕೊಡುವ ದಾತಗೆ ಕುಂದೆಂಟೆ ಯೋಗಿನಾಥ
ವಾನರ ಹಳಿಯಲು ವನಕೆ ಕುಂದುಂಟೆ ಯೋಗಿನಾಥ
ಕುರಿಯ ಹಳಿಯಲು ಕಟ್ಟು ಕಹಿಯುಂಟೆ ಯೋಗಿನಾಥ
ತೂರಿದ ಮಣ್ಣು ತಾ ಸೂರ್ಯಗೆ ಮುತ್ತಲುಂಟೆ ಯೋಗಿನಾಥ"[೬೮]

ಗೂಗಿ ಕತ್ತಲೆಯ ಪ್ರತಿರೂಪ. ಇದನ್ನು ಸಮಾಜದ ನಂಬಿಕೆಯಿಂದ ಹೊರಗಿಟ್ಟರು. ಮನುಷ್ಯನಿಗೆ ಕೇಡಾದರೆ ಸೂರ್ಯನಿಗೆ ಕೇಡಾಗಬೇಕೆಂದು ಗೂಗಿಯನ್ನು ಅಸ್ಪೃಶ್ಯತೆಯಿಂದ ನೋಡದೆ ಅದರ ಸ್ವಭಾವಗಳನ್ನು ಸೂರ್ಯನ ಹೋಲಿಕೆಯ ಮುಖಾಂತರ ಪವಿತ್ರಸ್ಥಾನ ಕೊಡುತ್ತಾನೆ. ಆನೆ ಮನುಷ್ಯ ಸ್ವಭಾವದ ಅಹಂಕಾರದ ಪ್ರಾಣಿಯೆಂದು ಆನೆಗಿಂತ ನಾಯಿಗೆ ಪ್ರಾಶಸ್ತ್ಯ ಕೊಡುವುದನ್ನು ಈ ಬೆಡಗಿನ ಭಾಷೆಯಲ್ಲಿ ಸ್ಪಷ್ಟವಾಗುವುದು. ಸಮೂಹದ ಕಲ್ಪನೆಯಲ್ಲಿ ನಾಯಿ ಭೈರವನ ಪ್ರೀತಿಯ ಪ್ರಾಣಿಯಾಗಿದ್ದು, ಕಾಶಿಯ ದೇವಸ್ಥಾನದಲ್ಲಿ ನಾಯಿಗೆ ಪ್ರವೇಶವಿದೆ. ಆದ್ದರಿಂದ ದೇವರಿಗೂ ಮತ್ತು ಮನುಷ್ಯರಿಗೂ ಪ್ರಿಯ ಸ್ನೇಹಿತನೆಂಬುದು ಬಹು ಗಮನೀಯವಾಗಿದೆ. ಅಲ್ಲಮ ಪ್ರಭುವಿನ ವಚನದಲ್ಲಿ "ಸಂಸಾರವೆಂಬ ಹೆಣಬಿದ್ದರೆ ತಿನ ಬಂದ ನಾಯಿ ಜಗಳ ನೋಡಿರೊ" ಈ ಬೆಡಗಿನ ಹಿಂದೆ ಗೂಡಾರ್ಥವಿದೆ. ಚೆಲುವಿದೆ. ಆದರೆ ಒಂದು ರೂಪಕದ ಹಿಂದೆ ಬೆಡಗಿನ ಚೆಲುವನ್ನು ಕಟ್ಟಿಕೊಡುವುದಾಗಿದೆ. ಕಪಿಗೆ ಕೋಡಗ, ಮನಸ್ಸು, ಎಂದು ಆಧ್ಯಾತ್ಮದಲ್ಲಿ ಸಾಂಕೇತಿಕ ಬೆಡಗಿದೆ. ಇದನ್ನು ಶಿಶುನಾಳ ಶರೀಫರ ಪದ್ಯದಲ್ಲೂ ಕಾಣಬಹುದು. ವಚನಕಾರರ ಕಲ್ಪನೆಯ ಬೆಡಗುಗಳು ತತ್ವಪದಕಾರರಲ್ಲಿ ಅಂತರ್ಗತವಾಗಿದೆ. ವಚನಕಾರರ ಶಾಸ್ತ್ರ ಸಮ್ಮತ ಬೆಡಗಾಗಿದ್ದರೂ, ಅಲ್ಲಿಯ ನಂಬಿಕೆಯ ಮೌಲ್ಯವನ್ನು ಉಳಿಸಿಕೊಳ್ಳುವ ಪ್ರಯತ್ನ ತತ್ವಪದಕಾರರಲ್ಲಿದೆ.

ಕನಕದಾಸರ ಕೆಲವು ಹಾಡುಗಳು ದಾಸ ಸಾಹಿತ್ಯದಲ್ಲಿ ಮುಂಡಿಗೆಗಳೆಂದು ಗುರುತಿಸಿಕೊಂಡಿವೆ. ಇವೂ ಸಹಿತ ಜನಪದರ ನಂಬಿಕೆ, ಘಟನೆ, ಕಥೆ, ಹಾಡು ಇತ್ಯಾದಿ ಪ್ರೇರಣೆಯಾಗಿವೆಯೆಂದು ಹೇಳಬಹುದು. ದಾಸ ಸಾಸಹಿತ್ಯದಲ್ಲಿ ಮುಂಡಿಗೆಗಳು ಪ್ರಚಾರಕ್ಕೆ ಬರಲು ದಾಸರ ಕ್ರಾಂತಿಕಾರಿಕ ಧೋರಣೆಗಳೂ ಕಾರಣವಾಗಿವೆ. ಇವು ನೇರವಾಗಿ ಭಕ್ತ ಮತ್ತು ಭಗವಂತನ ಹಾಡುಗಳಾಗದೆ ಜನಪದರ

ತಾತ್ವಿಕ ಅಂಥಃಸ್ಸತ್ವದ ಸಂವೇದನೆಯಾಗಿದೆ. ಇಲ್ಲಿ ತತ್ವಪದಕಾರರ ಕನಕದಾಸರ, ತತ್ವದ ಭಾಷೆಯ ನಿರೂಪಣೆಯಲ್ಲಿ ಒಂದೇ ಸಾಮ್ಯತೆಯನ್ನು ಗುರುತಿಸಬಹುದು.

"ಕೆಂಗಣ್ಣು ಮೀನಾಗಿ ನಮ್ಮ ರಂಗ |
ಗುಂಗಾಡಿ ಸೋಮನ ಕೊಂದನಾ
ಗುಂಗಾಡಿ ಸೋಮನ ಕೊಂದು
ವೇದವನು ಬಂಗಾರ ದೊಡನಿಗಿತ್ತಾನ್ಯಾ"[೨೯]

ಕನಕದಾಸರಿಗೆ ಗುಂಗಾಡೆಂಬ ರಕ್ತಹೀರುವ ಒಂದು ವರ್ಗವು ವೇದ ಪಠಣವನ್ನು ನಿರಾಕರಿಸುತ್ತಿರುವಾಗ ಆಗ ರಂಗನು ಚಿತ್ ಜ್ಞಾನವೆಂಬ ವೇದಗಳನ್ನು ನನಗೆ ನೀಡಿ ರಕ್ಷಣೆ ಕೊಟ್ಟನೆಂದು ಬೆಡಗಿನ ಭಾಷೆಯಲ್ಲಿ ಹೇಳುವನು "ಸತ್ಯವಂತನ ಸಂಗವೇ ತೀರ್ಥ, ಮನುಜ ಸೇವೆಯು ಸಾಕು ಸಾಕು, ಹರಿಯೇ ಸರ್ವೋತ್ತಮ ಹರಿಮಯವೆಲ್ಲವೂ ರಂಗಜಗದಂತರ್ಯ್ಯಾಮಿ, ಸತ್ಯ ಸುಖವುಳ್ಳ ಜನರಿಗೆ ಕುಲವಿಲ್ಲ ಕೇಶವನೊಲುಮೆಯಾಗುವ ತನಕ ಮನಸ್ಸು ಹರಿದಾಸರೊಳಿರಬೇಕು."[೩೦] ಮುಖ್ಯವಾಗಿ ಕನಕದಾಸರ ಮುಂಡಿಗೆಗಳು ಹೃದಯವನ್ನು ತಟ್ಟುವ ಹಾಡುಗಳಾಗಿವೆ.

"ಅಂಗಡಿ ಬೀದಿಯೊಳೊಂದು ಆಕಳು ಕರುನುಂಗಿತ್ತು
ಲಂಘಿಸುವ ಹುಲಿಯ ಕಂಡು ನರಿಯು ನುಂಗಿತ್ತು
ಹುತ್ತದೊಳಾಡುವ ಸರ್ಪ ಮದಗಜವ ನುಂಗಿತ್ತು
ಉತ್ತರ ದಿಶೆಯೊಳು ಬೆಳದಿಂಗಳಾಯಿತಮ್ಮಾ"[೩೧]

ತನುವೆಂಬ ಭೂಮಿಯಲಿ, ಶುಭ್ರಜ್ಞಾನ ಕೊಡುವ ಆಕಳು ಚಂಚಲ ಮನದ ಕರುವನ್ನು ನುಂಗಿತ್ತು. ಪ್ರಣವ ಜ್ಞಾನಿಯಾದ ನರಿಯು ಹುಲಿಯೆಂಬ ವ್ಯಾಘ್ರುವನ್ನು ನುಂಗಿತ್ತು. ಧ್ಯಾನ ಮತ್ತು ಯೋಗದಿಂದ ಅಹಂಕಾರಿ ಮನುಷ್ಯನ ಸ್ವಭಾವನ್ನು ಕುಂಡಲಿನಿ ಸರ್ಪವು ನುಂಗಿತ್ತು.

ಆಕಳಿನ ಹಿಂದೆ ಸತ್ಯನಿಷ್ಠೆಯ ಕತೆಯಿದೆ. ಕೃಷ್ಣನನ್ನು ಪೂಜಿಸುವ ಜನರಿಗೆ ಗೋವು ಕುಲದೇವತೆಯಾಗಿದೆ. ಹುಲಿ ವಿಶ್ವಾಸಕ್ಕೆ ಪಾತ್ರವಾದ ಗೋವಿನ ಕಥೆ ಪ್ರಚಾರದಲ್ಲಿದೆ. ಭಕ್ತಿಕಾಲದ ಹಾಡುಗಾರರಿಗೆ ಪಂಚತಂತ್ರ ಕಥೆಗಳು ಮೌಖಿಕ ಪ್ರೇರಣೆಯಾಗಿವೆ. ಆನೆ, ಕುದುರೆ, ಒಂಟೆ, ಇಲಿ, ಹುಲಿ, ಮೊಲ, ನಾಯಿ, ನರಿ, ಸಿಂಹ, ಕೋತಿ, ಮೀನು, ಮೊಸಳೆ, ಏಡಿ ಮತ್ತು ಕತ್ತೆಗಳಂತಹ ಪ್ರಾಣಿ ಲೋಕ ಗಿಳಿ, ಟಿಟ್ಟಿಭ, ಕಾಗೆಗಳಂತಹ ಪಕ್ಷಿಲೋಕವು ಬೆಡಗಿನ ಹಾಡುಗಳಲ್ಲಿ ಕಂಡುಬರುತ್ತವೆ. ಇವೆಲ್ಲವನ್ನು ಜನಪದರು ಕಥೆಗಳ ಮೂಲಕ ನೀತಿಯನ್ನು ಎಚ್ಚರಿಸುತ್ತಾ ತತ್ವಕಟ್ಟಿದರು. "ನದಿಯ ದಡಗಳೆರಡರ ನಡುವೆ ಗಿಡ ಪಕ್ಷಿ ಒಂದಾಗುತಿಹದೋ ಅಣ್ಣಾ | ಅದರ ಬೆಡಗನ್ನು ಏನ ಹೇಳಲಿ" (ಖೇಮಣ್ಣ) ಇದು ಕನಕದಾಸರ ಹಾಡಿನ ಆಶಯಕ್ಕೆ ಒಪ್ಪುತ್ತದೆ.

ಮುಖ್ಯವಾಗಿ ಬೆಡಗೆಂಬ ಅರ್ಥವು ವಚನಕಾರರಿಂದ ಪ್ರಾರಂಭವಾದರೂ ಅದನ್ನು ಸಮರ್ಥವಾಗಿ ದುಡಿಸಿಕೊಂಡವರೆಂದರೆ ತತ್ವಪದಕಾರರೇ, ಅದರಲ್ಲೂ ಶಿಶುನಾಳ ಶರೀಫ್‌ರ 'ಪಾರಿವಾಳದ ಆಟ ಛಂದಾ', 'ಹಾವು ತುಳಿದೇನ ಮಾನಿನಿ ಹಾವು ತುಳಿದೇನ', 'ಎಷ್ಟು ಕಾಡತಾದವಾ ಕಬ್ಬಕ್ಕಿ' ಬಾಲರಾಮಪ್ಪನ ಈ ಹಾಡು ಹೀಗಿದೆ.

ಏನು ಹೇಳಲಿ ಸಖಿಯೆ ಅದಕೆ ಕಾಯವಿಲ್ಲವೊ
ಇಂದು ಮುಖಿಯೆ | ಹಾವು ಭೂಮಿಯ ನುಂಗಿ
ಇರುವೆ ಹಾವನು ನುಂಗಿ | ಸೊಳ್ಳೆ ಇರುವೆಯನು
ಸಂಪೂರ್ಣ ತಾ ನುಂಗಿ | (ಅಪ್ರಕಟಿತ)

ಮನುಷ್ಯನ ಜೀವನವು ಶಂಕೆಯೆಂಬ ವಿಷಯವನ್ನು ಹೊಂದಿರುವ ಸರ್ಪವಾಗಿದೆ. ಇಂಥ ಅತಂತ್ರ ಮನಸ್ಸಿನ ಮನುಷ್ಯನ ಜೀವನವು ಇರುವೆಯ ಪ್ರಾಣವು ಕೊನೆಗೆ ಪ್ರಕೃತಿಯಲ್ಲಿ ಲೀನವಾಗುವುದು. ಇದನ್ನೆ ಹಾವು ಭೂಮಿಯ ನುಂಗಿ ಎಂದು ತತ್ವಪದಕಾರ ಹೇಳುವನು.

ಇದನ್ನೆ ಜನಪದರು ನೀರಿನಲ್ಲಿ ಮೀನಿನ ಹೆಜ್ಜೆ ತಿಳಿಯುವುದಿಲ್ಲ. ಭೂಮಿಯ ಮೇಲೆ ಹಾವಿನ ನೆಲೆ ಕಾಣುವುದಿಲ್ಲ. ಹಾವು ಪೊರೆ ಬಿಡುವುದರಿಂದ ಅದು ಚಿರಂಜೀವಿ ಎಂಬ ನಂಬಿಕೆ ಜನಪದರಲ್ಲಿದೆ. ಹಾವು ಭೂಮಿಯೊಳಗೆ ವಾಸಿಸುವುದರಿಂದ ತತ್ವಪದಕಾರರಲ್ಲಿ ಹಾವು ಭೂಮಿ ನುಂಗುವ, ಭೂಮಿ ಹಾವು ನುಂಗುವ, ಪ್ರತೀಕಗಳಿವೆ. ಇಂಥ ಬೆಡಗಿನ ವಿನ್ಯಾಸಗಳು ಕಥಾ ಮಾಧ್ಯಮದಿಂದ ನೇರವಾಗಿ ಮುಖಾಮುಖಿಯಾಗಿ ಕೊನೆಗೆ ಪಂಚತಂತ್ರ ಕಥೆಗಳಂತೆ ನೀತಿಯ ವಾಸ್ತವತೆಯನ್ನು ನಿರೂಪಿಸುತ್ತದೆ. ವಚನಕಾರರ ಪರಂಪರೆಯಲ್ಲಿ ಬೆಡಗಿನ ವಚನಗಳು ನಿದರ್ಶನವಾಗತ್ತಾ ಹೋಗುತ್ತದೆ. ಅಲ್ಲಿ ಟೀಕು ಮುಖ್ಯವಾಗಿರುತ್ತದೆ. ವ್ಯಾಖ್ಯಾನ ಮಾಡಬೇಕಾದರೆ ನೇರವಾಗಿ ಗ್ರಹಿಸಲು ಸಾಧ್ಯವಾಗುವುದಿಲ್ಲ.

ಆದರೆ ತತ್ವಪದಕಾರರಲ್ಲಿ ಟೀಕಿನ ಕೊರತೆಯಿರುವುದಿಲ್ಲ. ಏಕೆಂದರೆ ಜನಪದ ತತ್ವಪದಕಾರನಾದ್ದರಿಂದ ಜನಪದ ಮನಸ್ಸಿನಿಂದ ನೇರವಾಗಿ ಸಂಭಾಷಣೆಗೆ ತೊಡಗುತ್ತಾನೆ. ಬೆಡಗನ್ನೇ ಬುದ್ಧಿಮಟ್ಟದ ಗ್ರಹಿಕೆಯೆಂದು ತಿಳಿದು, ತಮ್ಮ ಹಾಡುಗಳಲ್ಲಿ ಬಳಸಿದ ತತ್ವಪದಕಾರರೂ ಉಂಟು. ಇದಕ್ಕೆ ಪರಿಹಾರ ತತ್ವಪದಕಾರನ ಭಾಷೆಯ ಜೊತೆಗೆ ನಾವೂ ಸಂಭಾಷಣೆಗೆ ತೊಡಗಿ, ಪ್ರಶ್ನೆ ಮತ್ತು ಉತ್ತರ ರೂಪದಲ್ಲಿ ಸಮಸ್ಯೆ ಪರಿಹಾರ ಮಾಡಿಕೊಂಡಾಗ, ಬೆಡಗು ತತ್ವದಲ್ಲಿ ಅಂದವಾಗಿ, ಚೆಲುವಾಗಿ ಕಾಣುತ್ತದೆ.

**ಅಡಿಟಿಪ್ಪಣಿ**

೧. ಗದ್ದಿಗಿ ಮಠ ಬಿ.ಎಸ್., ೧೯೬೬, ಕನ್ನಡ ಜಾನಪದ ಗೀತೆಗಳು, ಪು.೭೨

೨. ವೀರೇಶ ಬಡಿಗೇರ, ಜನಪದ ಸಂಗೀತ, ಪು.೪೯

೩. ವೀರೇಶ ಬಡಿಗೇರ, ೨೦೦೫, ಹಲಗೆ ಬಳಪ, ಪು.೬೧

೪. ಖೇಮಣ್ಣ, ವಿದೇಹ್ಯ ಕೈವಲ್ಯ ಸಾರಾಮೃತ, ಪ.೧೧೨, ಪು. ೧೨೭

೫. ಬಸವಲಿಂಗ ಸೊಪ್ಪಿಮಠ(ಸಂ), ೧೯೯೭, ನೀರಲಕೇರಿ ಬಸವಲಿಂಗರ ಸ್ವರವಚನಗಳು,

೬ ವೀರೇಶ ಬಡಿಗೇರ, ಉತ್ತರ ಕರ್ನಾಟಕದ ಜಾನಪದ ಗೀತ ಮೇಳಗಳು, ಪು.೨೦೪

೭. ವೀರೇಶ ಬಡಿಗೇರ, ೨೦೦೫, ಪೂರ್ವೋಕ್ತ, ಪು.೩೦

೮. ಖೇಮಣ್ಣ, ವಿದೇಹ್ಯ ಕೈವಲ್ಯ ಸಾರಾಮೃತ, ಪು.೨೦

೯. ಕೀರ್ತಿನಾಥ ಕುರ್ತಕೋಟಿ, ೧೯೯೫, ಕನ್ನಡ ಸಾಹಿತ್ಯ ಸಂಗಾತಿ, ಪು.೨೧೫

೧೦. ತಿಪ್ಪೇರುದ್ರಸ್ವಾಮಿ, ೧೯೬೩, ಶರಣರ ಅನುಭಾವ ಸಾಹಿತ್ಯ, ಪು.೮೬,

೧೧. ಬಸವಲಿಂಗ ಸೊಪ್ಪಿಮಠ(ಸಂ), ೧೯೯೯, ಪೂರ್ವೋಕ್ತ, ಪು.೧೫೪

೧೨. ವೀರೇಶ ಬಡಿಗೇರ, ೨೦೦೫, ಪೂರ್ವೋಕ್ತ, ಪು.೩೦

೧೩. ಬಸವಲಿಂಗ ಸೊಪ್ಪಿಮಠ, ೧೯೯೫, ಕೊಡೇಕಲ್ ಬಸವಣ್ಣ ಒಂದು ಅಧ್ಯಯನ, ಪು.೧೨೬

೧೪. ಜಗದ್ಗುರು ತೋಂಟದಾರ್ಯಮಠ(ಸಂ), ಎಸ್.ಎಸ್.ಭೂಸನೂರ ಮಠರ, ಗೌರವ ಅಭಿನಂದನಾ ಗ್ರಂಥ, ಪು.೧೭೪

೧೫. ಬಂಡೆಪ್ಪನವರ ಶಾಂತಮೂರ್ತಿ(ಸಂ), ೧೯೯೨, ವಿದೇಹ್ಯ ಕೈವಲ್ಯ ಸಾರಾಮೃತ, ಪು.೯

೧೬. ಅದೇ,

೧೭. ಬಸವಲಿಂಗ ಸೊಪ್ಪಿಮಠ, ೧೯೯೮, ಕೊಡೇಕಲ್ಲ ವಚನವಾಕ್ಯ, ಪು.೨೬೨

೧೮. ಬಸವಲಿಂಗ ಸೊಪ್ಪಿಮಠ, ೧೯೯೫, ಪೂರ್ವೋಕ್ತ, ಪು.೧೨೮

೧೯. ರವೀಂದ್ರನಾಥ ಕೆ.(ಸಂ), ಬಸವಯುಗದ ವಚನೇತರ ಸಾಹಿತ್ಯ, ಪ್ರಸ್ತಾವನೆ

೨೦. ಕುಮಾರ್ ಡಿ.ಎಸ್.(ಸಂ), ಕೂಡ್ಲೂರು ಬಸವಲಿಂಗರ ತತ್ವಪದಗಳು, ಪು.೧೨

೨೧. ಶಾಂತರಸರು, ೧೯೯೩, ಎಡೆದೊರೆ ನಾಡಿನ ಅನುಭಾವಿ ಕವಿಗಳು, ಪು. ೭೭

೨೨. ಜಗದ್ಗುರು ತೋಂಟದಾರ್ಯಮಠ(ಸಂ), ಪೂರ್ವೋಕ್ತ, ಪು.೧೮೭

೨೩. ಅದೇ

೨೪. ಕುಮಾರ್ ಡಿ.ಎಸ್.(ಸಂ), ಪೂರ್ವೋಕ್ತ, ಪು.೫೮

೨೫. ವೀರೇಶ ಬಡಿಗೇರ, ಪೂರ್ವೋಕ್ತ, ಪು.೬೧

೨೬. ಬಸವಲಿಂಗ ಸೊಪ್ಪಿಮಠ, ೧೯೯೫, ಪೂರ್ವೋಕ್ತ, ಪು.೧೨೮

೨೭. ಬಸವಲಿಂಗ ಸೊಪ್ಪಿಮಠ, ೨೦೦೧, ಗೂಗಲ್ಲು ಪರಪ್ಪಯ್ಯನ ತತ್ವಪದಗಳು,

೨೮. ನಾವಡ ಎ.ವಿ., ೧೯೯೭, ಜಾನಪದ ಕೈಪಿಡಿ, ಪು.೪೭

೨೯. ಶಾಂತರಸರು, ೧೯೭೩, ಪೂರ್ವೋಕ್ತ, ಪು. ೬೩

೩೦. ವೀರೇಶ ಬಡಿಗೇರ, ಪೂರ್ವೋಕ್ತ, ಪು.೯೮

೩೧. ಜಗದ್ಗುರು ತೋಂಟದಾರ್ಯಮಠ(ಸಂ), ಪೂರ್ವೋಕ್ತ, ಪು.೧೮೪

೩೨. ಬಸವಲಿಂಗ ಸೊಪ್ಪಿಮಠ, ೧೯೯೫, ಪೂರ್ವೋಕ್ತ, ಪು.೧೨೪

೩೩. ಗದ್ದಿಗಿಮಠ ಬಿ.ಎಸ್., ಕನ್ನಡ ಜಾನಪದ ಗೀತೆಗಳು ಪು.೨೪,

೩೪. ಬಸವಲಿಂಗ ಸೊಪ್ಪಿಮಠ, ೧೯೯೮, ಪೂರ್ವೋಕ್ತ, ಪು.೧೩

೩೫. ಕುಮಾರ ಡಿ.ಎಸ್.(ಸಂ) ೧೯೯೪, ಪೂರ್ವೋಕ್ತ, ಪು.೪೨

೩೬. ಬಸವಲಿಂಗ ಸೊಪ್ಪಿಮಠ, ೧೯೯೮, ಪೂರ್ವೋಕ್ತ, ಪು.೧೩

೩೭. ಮಾಣಿಕಪ್ಪನ ತತ್ವಪದಗಳ ಸಂಗ್ರಹ

೩೮. ಮಹಾಬಲೇಶ್ವರಪ್ಪ ಬಿ., ೧೯೯೭, ಹೈದ್ರಾಬಾದ್ ಕರ್ನಾಟಕದಲ್ಲಿ ರಾಜಕೀಯ ಚಳುವಳಿಗಳು, ಪು.೧೯

೩೯. ಮಾನಸಗಲ ವೆಂಕನಗೌಡ, ೨೦೦೨, ಪರಿಪೂರ್ಣ ತತ್ವಬೋಧಿನಿ, ಪ.೧೮, ಪು.೨೭

೪೦. ಬಸವಲಿಂಗ ಸೊಪ್ಪಿಮಠ(ಸಂ), ೧೯೯೭, ಪೂರ್ವೋಕ್ತ, ಪ.೧೪, ಪು.೭೬

೪೧. ಮಹಾಬಲೇಶ್ವರಪ್ಪ ಬಿ., ೧೯೯೭, ಪೂರ್ವೋಕ್ತ, ಪು.೪೭

೪೨. ಬಸವಲಿಂಗ ಸೊಪ್ಪಿಮಠ(ಸಂ), ೧೯೯೭, ಪೂರ್ವೋಕ್ತ, ಪು.೧೪೧

೪೩. ಅದೇ, ಪ.೧೧೭, ಪು.೧೦೯

೪೪. ವೀರೇಶ ಬಡಿಗೇರ, ೧೯೯೯, ಪೂರ್ವೋಕ್ತ, ಪು.೧೮೦

೪೫. ಬಸವಲಿಂಗ ಸೊಪ್ಪಿಮಠ(ಸಂ), ೧೯೯೮, ಪೂರ್ವೋಕ್ತ, ಪು.೨೭೮

೪೬. ಕುಮಾರ್ ಡಿ.ಎಸ್(ಸಂ), ೧೯೯೪, ಪೂರ್ವೋಕ್ತ, ಪ.೩೪, ಪು.೪೨

೪೭. ಶಿವಮೂರ್ತಿ ಬಂಡೆಪ್ಪನವರು(ಸಂ), ೧೯೯೨, ಪೂರ್ವೋಕ್ತ, ಪು.೪೩

೪೮. ಉಷಾದೇಸಾಯಿ ಡಿ., ೧೯೯೯, ಸುವರ್ಣಸಿರಿ, ಪು.೩

೪೯. ಬಸವಲಿಂಗ ಸೊಪ್ಪಿಮಠ(ಸಂ), ೧೯೯೭, ಪೂರ್ವೋಕ್ತ, ಪು.೧೨೪

೫೦. ವಿವಿಧ ಲೇಖಕರು, ೧೯೯೪, ಬೆಡಗಿನ ವಚನ ಪರಂಪರೆ, ಪು.೭೭

೫೧. ಜವರೇಗೌಡ ದೇ., ೨೦೦೧, ಜಾನಪದ ಅಧ್ಯಯನ, ಪು.೨೭೪

೫೨. ಕುಮಾರ್ ಡಿ.ಎಸ್(ಸಂ), ೧೯೯೪, ಪೂರ್ವೋಕ್ತ, ಪ.೩೫, ಪು.೪೩

೫೩. ವಿವಿಧ ಲೇಖಕರು, ೧೯೯೪, ಪೂರ್ವೋಕ್ತ, ಪು.೫೬

೫೪. ರಮಹತ್ ತರೀಕೆರೆ, ೨೦೦೬, ಕರ್ನಾಟಕದ ನಾಥ ಪಂಥ, ಪು.೧೩

೫೫. ಬಸವರಾಜ ಎಲ್., ಅಲ್ಲಮನ ವಚನ ಚಂದ್ರಿಕೆ, ಪ.೪೧೮, ಪು.೯೪

೫೬. ನಾಗರಾಜ ಡಿ.ಆರ್., ೨೦೦೬, ಅಲ್ಲಮಪ್ರಭು ಮತ್ತು ಶೈವ ಪ್ರತಿಭೆ, ಪು.೪೨

೫೭. ವಡಿಕೆ ತಾತಪ್ಪಯ್ಯ, ೧೯೫೭, ಅಮೃತ ಶಿಖಾಮಣಿ, ಪ.೫೩, ಪು.೫೦

೫೮. ವಿವಿಧ ಲೇಖಕರು, ೧೯೯೪, ಬೆಡಗಿನ ವಚನ ಪರಂಪರೆ, ಪು.೭೭

೫೯. ಅದೇ,

೬೦. ಜಯಶ್ರೀ ಸಬರದ(ಸಂ), ಗುರು ಶಿಷ್ಯರ ತತ್ವಪದಗಳು, ಪ.೫, ಪು.೧೯

೬೧. ವಡಿಕೆ ತಾತಪ್ಪಯ್ಯ, ೧೯೫೭, ಪೂರ್ವೋಕ್ತ, ಪ.೩೪, ಪು.೩೪

೬೨. ಬಸವಲಿಂಗ ಸೊಪ್ಪಿಮಠ(ಸಂ), ೧೯೯೮, ಪೂರ್ವೋಕ್ತ, ಪ.೬೩, ಪು.೩೭

೬೩. ವಿವಿಧ ಲೇಖಕರು, ೧೯೯೪, ಪೂರ್ವೋಕ್ತ, ಪು.೧೬

೬೪. ಅದೇ, ಪು.೧೬

೬೫. ವೀರೇಶ ಬಡಿಗೇರ, ೨೦೦೫, ಪೂರ್ವೋಕ್ತ, ಪು.೪೫

೬೬. ಗಬ್ಬೂರ ಹಂಪಣ್ಣ, ಕೈವಲ್ಯ ಕೈದೀವಿಗೆ, ಪು.೨೪

೬೭. ಬಸವರಾಜ ಎಲ್., ೨೦೦೧, ಅಲ್ಲಮನ ವಚನ ಚಂದ್ರಿಕೆ, ಪು.೨೯

೬೮. ಬಸವಲಿಂಗ ಸೊಪ್ಪಿಮಠ(ಸಂ), ೨೦೦೧, ಪೂರ್ವೋಕ್ತ, ಪು.೪೦

೬೯. ವೆಂಕಟೇಶಮೂರ್ತಿ ಎಚ್.ಎಸ್., ೧೯೯೫, ಕೀರ್ತನಕಾರರು, ಪು.೯೯

೭೦. ರಾಮಚಂದ್ರರಾವ್ ಸಾ.ಕೃ., ೨೦೦೩, ದಾಸ ಸಾಹಿತ್ಯ ಮತ್ತು ಸಂಸ್ಕೃತಿ, ಪು.೨೯

೭೧. ವೆಂಕಟೇಶ್ ಮೂರ್ತಿ ಎಚ್.ಎಸ್., ೧೯೯೫, ಪೂರ್ವೋಕ್ತ, ಪು.೯೯

೭೨. ಬಾಲರಾಮಪ್ಪ, ಅಪ್ರಕಟಿತ

## ಅಧ್ಯಾಯ ೬

# ಸಾಂಸ್ಕೃತಿಕ ಆಯಾಮ

೬

# ಸಾಂಸ್ಕೃತಿಕ ಆಯಾಮ

## ೬.೧. ಸಾಮಾಜಿಕ ಸ್ವರೂಪ ಹಾಗೂ ಆ ಕುರಿತ ಆಲೋಚನೆಗಳು

ತತ್ವಪದಕಾರರ ಸಾಮಾಜಿಕ ಚಿಂತನೆಯ ನೆಲೆಗಟ್ಟೆಂದರೆ ನಮ್ಮ ದೈನಂದಿನ ಬದುಕಿನಲ್ಲುಂಟಾಗುವ ಬಿಕ್ಕಟ್ಟಿನ ಸಂದರ್ಭದಲ್ಲಿ ನಮ್ಮ ಮನದಾಳದ ಅರಿವಿಗೆ ಕಾಣದ ಸತ್ಯವೂ ಪ್ರಾಮಾಣಿಕವೂ ಆದ ತಿಳುವಳಿಕೆಯಿಂದಾಗಿ ನಮ್ಮಲ್ಲಿ ಮೂಡುವ ಪ್ರಶ್ನೆಗಳು ಮತ್ತು ಚಿಂತನೆಗಳೆಂದು ಹೇಳಬಹುದು. ವ್ಯಕ್ತಿತ್ವ ಶೋಧದ ಭಾಗವಾಗಿ ತತ್ವಪದಕಾರರ ಚಿಂತನೆಗಳು ಮೂಡಿಬರುವುದರಿಂದ ಅವು ಬೌದ್ಧಿಕ ಬೆಳವಣಿಗೆಗೂ ಸಾಧ್ಯವಾಗುತ್ತವೆ. ಬದುಕುತ್ತಿರುವ ವ್ಯವಸ್ಥೆ ಬಗೆಗಿನ ಅತೃಪ್ತಿ, ಅಸಮಾಧಾನ ಮತ್ತು ಪ್ರಶ್ನಿಸುವ ಮನೋಭಾವವು ಸಾಮಾಜಿಕ, ರಾಜಕೀಯ ಅಥವಾ ಒಟ್ಟಾರೆ ನಮ್ಮ ಸಾಂಸ್ಕೃತಿಕ ಪರಿವರ್ತನೆಯ ನೋವು, ತುಡಿತಗಳಾಗಿ ಕಾಣಿಸುತ್ತವೆ.

ಪ್ರಜ್ಞಾವಂತರೆಂದು ಹೇಳಿಕೊಂಡು ಸಮಾಜದಲ್ಲಿನ ಏಕಾಢ್ಯ, ಭ್ರಷ್ಟಾಚಾರ, ಅಪ್ರಾಮಾಣಿಕತೆ ಜಾತೀಯಂತೆಯಂಥಾ ಕರ್ಮಕಾಂಡಗಳಿಗೆ ಕಾರಣವಾಗುವ ಜನರಿಗೆ ತಮ್ಮ ಸನ್ನಡತೆಯ ಮೂಲಕ ನಡೆ ನುಡಿಯಲ್ಲೊಂದಾಗುವ ಬಗೆಗಳನ್ನು ತೋರಿಸಿಕೊಟ್ಟರು. ತತ್ವವಿಚಾರದ ಸಾಮಾಜಿಕ ಕಳಕಳಿ ಎಂಬುದು ದಿನನಿತ್ಯದ ಮೌಢ್ಯ ಆಚರಣೆಗಳ ವಿಡಂಬನೆಗೆ ಮಾತ್ರ ಸೀಮಿತವಾಗದೆ ಸಂಕೀರ್ಣವಾಗಿರುವ ಸಾಮಾಜಿಕ ಸಂರಚನೆಗಳಲ್ಲಿನ ಸಮಸ್ಯೆಗಳನ್ನು ಅರಿಯುವತ್ತಾ ಬಗೆಹರಿಸುವ ಕ್ರಿಯೆಗೆ ಪ್ರೇರಣೆ ನೀಡಿದರು. ಇಂಥಾ ಜ್ವಲಂತ ಸಮಸ್ಯೆಗಳನ್ನು ಆರ್ಭಟಗಳಿಲ್ಲದ, ಆಡಂಬರವಿಲ್ಲದ ಅಹಂಕಾರ ಮುಕ್ತದಿಂದ ಸಹಜ ಚಿಂತನಾಕ್ರಮದ ಮೂಲಕ ಪ್ರಾಮಾಣಿಕವಾಗಿ ಬಿಡಿಸಿ ತೋರಿಸಿದರು. "ಪಾತಕ ಜನರೊಳು ಯಾತರ ಮಾತೇಳು ಮಾನಿನಿ ಭೀತಿಸಪವಾದ ದೆಡೆಯೊಳು ನೀತಿಲ್ಲದವರೊಳ್ಯಾತಕಮ್ಮ" ಗಬ್ಬೂರು ಹಂಪಣ್ಣ ಕವಿಯಾಗಿ ತನ್ನ ಮುಂದಿರುವ ನಿರರ್ಥಕ ಸಮಾಜದ ಕುರಿತು ಹಾಡುತ್ತಾನೆ.

ಸಾಮಾನ್ಯ ಜನರಿಗೆ ಮತವೆಂದರೆ ಸಮಾಜ, ತತ್ವವೇ ಲಿಂಗ, ವಿಭೂತಿ ಎಂದು ಪರಿಣಾಮಕಾರಿಯಾಗಿ ಅರುಹಿದರು. ತತ್ವಪದಕಾರರ ಗುರುವರ್ಗದ ಮಠಗಳು ಅಚಲ ಸಂಪ್ರದಾಯ ಪರಂಪರೆಯ ಮಠವಾಗಿ ಗುರುತಿಸಿಕೊಂಡಿತು. ಅಚಲ ಸಂಪ್ರದಾಯದಲ್ಲಿ ತತ್ವಪದ ಸಂಸ್ಕೃತಿಯ ಹಿರಿಮೆಯನ್ನು ಈ ರೀತಿಯಾಗಿ ಹೇಳಲಾಗಿದೆ.

ಜೀವಾತ್ಮ ಪದ್ಧತಿಯಿಂದ ಪರಮಾತ್ಮಪದ್ಧತಿ ಎಡೆಗೆ ತತ್ವವಿವೇಚನೆ ಮಾಡಲಾಗಿ ನಾನೇ ಪರಮಾತ್ಮನೆಂದು ಪರಿಗ್ರಹಿಸಿ ಈ ಪರಮಾತ್ಮನಿಗೂ ಕೂಡಾ ಸಂಕಲ್ಪಾದಿ ಪ್ರಕ್ರಿಯೆ ಇರುವುದರಿಂದ ಪರಮಾತ್ಮಾತೀತವನ್ನು ಪ್ರತಿಪಾದಿಸುವ ಪರಿಪೂರ್ಣ ಸಿದ್ಧಾಂತವೇ ಅಚಲ ಸಿದ್ಧಾಂತವೆಂದು ತತ್ವಪದಕಾರನಾದ 'ವೆಂಕನಗೌಡ' ವಿವರಿಸಿದರು.

ಈ ಭಾಗದ ದತ್ತಪರಂಪರೆಯ ಪೂಲಚಿಂತಿಮಠ, ಎಮ್ಮಡಿಗಿ ಮಠ, ಲಚ್ಚಣಸ್ವಾಮಿ ಮಠ, ಕುಂಡಸ್ವಾಮಿ ಮಠ, ಕಾಳಿದಾಸನ ಮಠಗಳು ಊರ ಹೊರಗಿದ್ದು ಇವೆಲ್ಲ ಜ್ಞಾನ ಕೊಡುವ, ಮೋಕ್ಷ ಪಡೆಯುವ ಉದ್ದೇಶದ ಮಠಗಳಾಗಿವೆ. ಇವೆಲ್ಲಾ ರಾಯಚೂರಿನಲ್ಲಿ ಗುರುಮಠದ ಆಶ್ರಮಗಳಾಗಿ ಗುರುತಿಸಿದ್ದನ್ನು ಕಾಣಬಹುದು. ತಮ್ಮ ಆಧ್ಯಾತ್ಮಿಕ ಚಿಂತನೆಯನ್ನು ಶಿವರಾತ್ರಿಯ ದಿನದಂದು ಅಮಾವಾಸ್ಯೆಯಂದು ಚರ್ಚಿಸುವ ಭಜನೆ ಮಾಡುವ ಉದ್ದೇಶದ ಕ್ರಿಯಾಶೀಲ ಆಚರಣೆಗಳಾಗಿವೆ. ವರ್ಷಕ್ಕೊಂದಾವರ್ತಿ ಜನರ ದೇಣಿಗೆಯಿಂದ ಅನ್ನದಾಸೋಹವನ್ನು ಮಾಡಲಾಗುತ್ತದೆ. ಆತ್ಮವಿಚಾರದಲ್ಲಿ ಹೆಸರುಗಳಿಸಿದ ವ್ಯಕ್ತಿಯು ಆಧ್ಯಾತ್ಮ ಸಿದ್ಧಾಂತಗಳನ್ನು ಇಂಥಾ ದಿನದಲ್ಲಿ ಹೇಳುವುದನ್ನು ಕಾಣಬಹುದು.

ಆತ್ಮಜ್ಞಾನದಂಥಾ ಆಧ್ಯಾತ್ಮಿಕ ಪರಿಭಾಷೆಯನ್ನು ಈ ಭಾಗದ ತತ್ವಪದಕಾರರು ಜ್ಞಾನಚಿಂತನೆಯ ಮಾನದಂಡವಾಗಿ ಸ್ವೀಕರಿಸಿದರು. ಯೋಗ ಮತ್ತು ಧ್ಯಾನದಂತಹ ಮಾರ್ಗಗಳನ್ನು ಮತೀಯ ಧರ್ಮಶ್ರದ್ಧೆ ಇಲ್ಲದ ಇಂತಹ ಚಿಂತನೆಗಳನ್ನು ಭಕ್ತಿಧರ್ಮದ ಹೆಸರಿನಲ್ಲಿ ಬಂಧಿಸಿ ಇಂದಿನ ಎಲ್ಲಾ ಸಮಸ್ಯೆಗಳನ್ನು ಮರೆಮಾಚುವ ಸಾಧನವನ್ನಾಗಿಸುವ ಅಪಾಯಕಾರಿ ಸ್ಥಿತಿಗೆ ಕೊಂಡೊಯ್ಯಲಾಗುತ್ತದೆ. ವೈಚಾರಿಕವೂ ಮಾನವೀಯವೂ ಆದ ಇಂತಹ ತತ್ವಚಿಂತನೆಗಳಾಗಿ ತತ್ವಪದಕಾರರನ್ನು ಎಲ್ಲಾ ಸಮುದಾಯಗಳು ಜೀವಂತವಾಗಿ ಹಿಡಿದಿಟ್ಟುಕೊಳ್ಳಲು ಸಾಧ್ಯವಾಯಿತು.

ತತ್ವಪದಗಳೆಂದರೆ ಧರ್ಮಜೀವನವನ್ನು ಸಾಧಿಸಲು ಸಹಾಯಕವಾಗುವಂತೆ ಮಾಡುವ ಯೋಗಶಾಸ್ತ್ರ. ತತ್ವಪದಕಾರರ ಪ್ರಕಾರ ಧರ್ಮವೆನ್ನುವುದು ತಾತ್ವಿಕ ಕಲ್ಪನೆಗಳನ್ನು ಒಪ್ಪಿಕೊಳ್ಳುವುದಾಗಲಿ ಕರ್ಮಾದರ್ಶ ಗಳನ್ನು ಆಚರಿಸುವುದಾಗಲಿ ಅಲ್ಲ. ಆದರೆ ಅದು ಒಂದು ರೀತಿಯ ಜೀವನ ಅಥವಾ ಅನುಭವ ಅನುಭಾವ. ಅದೊಂದು ಸತ್ಯದರ್ಶನದ ಅನುಭವವಾಗಿದೆ. ಹೀಗಾಗಿ ತತ್ವಪದಕಾರರು ತತ್ವಗಳನ್ನು ಧರ್ಮವನ್ನು ರೂಪಿಸುವ ಬದಲು ಬದುಕಿನಲ್ಲಿ ಅಳವಡಿಸಿಕೊಂಡು ಬೆಳೆಸಿದರು. ಅವರ ಸಾಮಾಜಿಕ ಕಾಳಜಿ ಮತ್ತು ಬದುಕಿನ ತಾತ್ವಿಕತೆ ಕುರಿತ ಜಿಜ್ಞಾಸೆಗಳು ಪ್ರತ್ಯೇಕಿಸಲ್ಪಟ್ಟ ಎರಡು ದಡಗಳಲ್ಲಿ ಅವು ಒಂದರೊಳಗೊಂದು ಬೆರೆತು ಹೋದ ಅಖಂಡ ದರ್ಶನಗಳು.

ಸಾಮಾಜಿಕ ಬದುಕಿನಲ್ಲಿ ಕಾಣುವ ಸಿದ್ಧಾಂತ ಮತ್ತು ಆಚರಣೆಗೂ ನಡುವೆ ಇರುವ ಬಿರುಕನ್ನು ಬರೀ ವಿಚಾರ ವಿಮರ್ಶೆ ವಿಡಂಬನೆಗೆ ಗುರಿ ಮಾಡದೆ ಅದನ್ನು ಸನ್ನಡತೆಯಿಂದ ಬೆಸೆಯುವುದು ಹೇಗೆ

ಎಂಬುದರತ್ತ ಗಮನಹರಿಸಿದರು. ಸಾಧಕನಾದವನು ಬಿಸಿ ನೀರಾಗದೆ ಬೆಂಕಿಯಂತೆ ಉಜ್ವಲವಾಗಿರಬೇಕೆಂಬ ಭಾವವನ್ನು ಪ್ರಕಟಿಸಿದರು. ತತ್ವಪದಕಾರರು ಹೆಚ್ಚಾಗಿ ಅನ್ಯಧರ್ಮಕ್ಕೆ ತೆರೆದುಕೊಂಡವರು. ಅನುಭಾವದಿಂದ ಪ್ರಾಪ್ತವಾಗುವ ಪ್ರತ್ಯಕ್ಷಜ್ಞಾನವನ್ನು ಅತೀಂದ್ರಿಯ ಸೀಮೆಯನ್ನು ಸದಾ ವಿಸ್ತರಿಸುತಿರುತ್ತದೆ. ಪ್ರಜ್ಞೆಯಿಲ್ಲದ ಬರೀ ಅಧ್ಯಯನ ಶುಷ್ಕವಾಗುತ್ತದೆ.

ಆಧ್ಯಾತ್ಮ ಹಾಗೂ ಆತ್ಮಪ್ರಜ್ಞೆಯ ಬಡತನದಿಂದ ನರಳುವ ಮನುಜರು ಕುಲಜ, ಕುಲಹಿನ ಎನ್ನುವ ಜಾತಿ ಅಪಮಾನಗಳು ಲಿಂಗಾಧಾರಿತ ಅಸಮಾನತೆಯಿಂದ ಅವಮಾನಿತರಾದ ದುಡಿವ ವರ್ಗಗಳು ನಿಸರ್ಗ ಒಳಗೊಂಡಂತೆ ಇವರನ್ನೆಲ್ಲಾ ಅಖಂಡವಾಗಿ ಗ್ರಹಿಸಿ ನಿರೂಪಿಸಿದರು. ಇವರು ಸೃಷ್ಟಿಸಿದ ಸಂದರ್ಭ, ಸನ್ನಿವೇಶಗಳು, ಪಾತ್ರಗಳು ತಾತ್ವಿಕ ಭಿತ್ತಿಗಳು ಆಯ್ದುಕೊಂಡ ಅಭಿವ್ಯಕ್ತಿ ರೂಪಗಳು ಕನ್ನಡ ಪರಂಪರೆಯ ಕ್ರಿಯಾಶೀಲ ನೆಲೆಗಳಾಗಿವೆ. ಅವರು ಬಳಸುವ ಬಹಳಷ್ಟು ವಿವರಗಳು, ನಿದರ್ಶನಗಳು, ಚಿಂತನೆಗಳು ಇದುವರೆಗಿನ ಕನ್ನಡ ವಿಮರ್ಶೆಯಲ್ಲಿ ಅಲಕ್ಷಿತ ವಿವರಗಳಾಗಿವೆ. ನಾನು ನನ್ನ ಪ್ರಬಂಧದಲ್ಲಿ ಇಂಥ ಅಲಕ್ಷಿತ ವಿವರಗಳನ್ನು ಆಯ್ದುಕೊಂಡೇ ಹೆಚ್ಚು ಮಾತನಾಡಲು ಪ್ರಯತ್ನಿಸಿದ್ದೇನೆ. ಏಕೆಂದರೆ ತತ್ವಪದಕಾರರನ್ನು ಬಿಡಿ ಬಿಡಿಯಾಗಿ ಕಂಡು ತಮ್ಮದೇ ಆದ ಆಕ್ಷೇಪಗಳಿಗನುಗುಣವಾಗಿ ವಿಮರ್ಶಿಸುವವರಿಗೆ ಇಂಥಾ ಅಲಕ್ಷಿತ ವಿವರಗಳು ಮುಖ್ಯವೆನಿಸುವುದಿಲ್ಲ. ಅಂದರೆ ಈಗಾಗಲೇ ಚಾಲ್ತಿಯಲ್ಲಿರುವ ಜನಜನಿತ ಅಭಿಪ್ರಾಯ ಹಾಗೂ ವಿಚಾರಗಳೇ ಪುನರಾವೃತ್ತಿಗೊಳ್ಳುತ್ತಿರುತ್ತವೆ. ಹೀಗಾಗಿ ಭಿನ್ನ ಸಂವೇದನೆಯುಳ್ಳ ತತ್ವಪದಕಾರರನ್ನು ಅರಿಯುವುದು ನಿರ್ದಿಷ್ಟ ಕೇಂದ್ರವೊಂದರ ಪ್ರವೇಶದಿಂದ ಸಾಧ್ಯವಾಗಲಾರದು. ತನ್ನ ಸ್ವಾರ್ಥವನ್ನಷ್ಟೇ ನೋಡುವ ಮನುಷ್ಯಕೇಂದ್ರಿತ ದೃಷ್ಟಿಕೋನಕ್ಕೆ ಬದಲಾಗಿ ಸೃಷ್ಟಿಯ ಕನಿಷ್ಟ ಜೀವಿಗಳನ್ನು ಸರಿಸಮಾನವಾಗಿ ಕಾಣುವ ಉದಾರ ಹಾಗೂ ಸಮಷ್ಟಿ ಪ್ರಜ್ಞೆಯಿಂದ ನೋಡಬೇಕಾಗುತ್ತದೆ. ಅವರ ಸಾಮಾಜಿಕ ಪ್ರಜ್ಞೆಯಿಂದ ಸ್ವರೂಪವೇ ಸಕಲ ಜೀವರಾಶಿಗಳಿಗೆ ಲೇಸನ್ನು ಬಯಸುವುದಾಗಿತ್ತು. ಚರಾಚರದೊಂದಿಗೆ ಬದುಕುವುದಾಗಿತ್ತು.

ಸಕಲ ಚರಾಚರಗಳಲ್ಲಿ ಮನುಷ್ಯನೇ ಶ್ರೇಷ್ಠ ಎನ್ನುವ ಭಾವನೆಯು ಯಾವತ್ತೂ ಮತಗಳ ತೀರ್ಮಾನವಾಗಿದೆ. ಈ ಭಾವನೆಯು ಮನುಷ್ಯನಲ್ಲಿ ಇತರ ಜೀವಿಗಳೂ ತನ್ನ ಲಾಭಕ್ಕಾಗಿಯೇ ಇವೆ ಎನ್ನುವ ಹಾನಿಕಾರಕ ನಿಲುವಿಗೆ ಕಾರಣವಾಗುತ್ತಾ ಬಂದಿವೆ. ಆತನಲ್ಲಿ ಉಪಭೋಗದ ಹಂಗನ್ನು ಜಾಸ್ತಿ ಮಾಡಿವೆ. ಇತರ ಜೀವಿಗಳಿಗಿಂತ ತಾನು ಪ್ರಧಾನ ಇತರ ಧರ್ಮಕ್ಕಿಂತ ತನ್ನ ಧರ್ಮಶ್ರೇಷ್ಠ ತನ್ನ ಪ್ರಪಂಚವನ್ನು ಆಳಕ್ಕೆ ಆದರ್ಶಯುತವಾಗಿ ಹಿಡಿಯುವುದು, ಇವು ಯಾವುವೂ ಸತ್ಯ ಹುಡುಕುವ ವ್ಯಕ್ತಿಗೆ ಹಿತವಾದ ದಾರಿಗಳಲ್ಲ. ಉಳಿದೆಲ್ಲ ಜೀವಿಗಳ ಬದುಕಿನ ಬಗೆಯನ್ನು ಎಷ್ಟು ಹೆಚ್ಚಾಗಿ ನಾವು ತಿಳಿಯುವೆವೋ ಅಷ್ಟು ಚೆನ್ನಾಗಿ ನಮ್ಮ ಹಿತವನ್ನು ಮಿತಿಯನ್ನು ತಿಳಿಯಲು ಸಹಾಯಕವಾಗುತ್ತದೆ. ಮಂಜರ್ಲಾ ಖಾದರ ಸಾಬನು ಹೇಳುವಂತೆ "ನಿನ್ನ ಬಾಳು ಭಿಕ್ಷುಕನ ಕನಸಿನಂತೆ, ನಾನು ನಾನೆಂದು

ರೂಪಿಸುವವನ ಮರೆತು ಕುಂತೆ, ತಿಳಿದುಕೊ ಇದು ಮಾಯದ ಸಂತೆ, ಕಣ್ಣಿಗೆ ತೋರುವ ಜಗವೆಲ್ಲಾ ಮೃಗ ಜಲದಂತೆ''.

ತತ್ವಪದಕಾರರ ಜೀವಕೇಂದ್ರಿತ ದೃಷ್ಟಿಕೋನ ಇಹಜೀವನದ ಘಟನೆ, ಸೃಷ್ಟಿಯ ಕನಿಷ್ಟ ಜೀವಗಳೊಂದಿಗೆ ಸಹಜ ಮೈತ್ರಿ ಮುಕ್ತ ಹಾಗೂ ಮಾನವೀಯ ಪ್ರತಿಗಳಿಗಾಗಿ ಹಂಬಲಿಸಿದವರು. ಸೃಷ್ಟಿಯನ್ನೇ ಅವರು ತಮ್ಮ ಸಾಮಾಜಿಕ ಪರಿಕಲ್ಪನೆಯ ನೆಲೆಗಟ್ಟನ್ನಾಗಿಸಿಕೊಂಡಿದ್ದರು. ಯಾವುದೇ ಒಂದು ನೆಲೆಯಲ್ಲಿ ನಿಂತು ಸೃಷ್ಟಿಯನ್ನು ಗಮನಿಸಲಿಲ್ಲ. ಸೃಷ್ಟಿಯ ಸಕಲಾನುಭವವನ್ನು ಶಬ್ದ ಮತ್ತು ಬಿಂಬ ರೂಪದಲ್ಲಿ ವಿವರಿಸಿದರು. ಒಟ್ಟು ಐಂದ್ರಿಕ ಜ್ಞಾನವು ಬಿಂಬ ಎನಿಸಿಕೊಂಡರೆ ಐಂದ್ರಿಕವಲ್ಲವಾದುದು ಶಬ್ದವಾಗುತ್ತದೆ. ಉದಾ. ''ನಾಯಿಬರುತಾದೊ ಮನುಜ ಎಚ್ಚರಿರ ಬೇಕೋ'' ಎನ್ನುವ ಸಾಲಿನಲ್ಲಿ ನಾಯಿ ಬಿಂಬವೆನಿಸಿಕೊಂಡರೆ ದೇವರು ಬರಿಯ ಶಬ್ದ ಮಾತ್ರವಾಗುಳಿಯುತ್ತದೆ. ಅಂದರೆ ಪರತತ್ವದ ವಿಚಾರಗಳನ್ನು ತಿಳಿಸುವಾಗ ಅವರು ಜನರಿಗೆ ಅರಿವು ಮೂಡಿಸಲು ಅಂತಹ ಸ್ಥಳೀಯ ಬಿಂಬಗಳ ಮೂಲಕ ಪ್ರಯತ್ನಿಸಿದರು. ನಾಯಿ, ಬೆಕ್ಕು, ಕೋಗಿಲೆ, ಚಿರತೆ, ಚೇಳು, ಹಾವು, ಊಸರವಳ್ಳಿ, ಜಾತಿಕೃತ ಕೋಡಗ ಇಂತಹ ಪಕ್ಷಿ ಪ್ರಧಾನ ಬಿಂಬಗಳು ಹೇರಳವಾಗಿ ತತ್ವಪದಕಾರರಲ್ಲಿ ಬಳಕೆಯಾಗುವುದನ್ನು ಕಾಣಬಹುದು.

ಕನ್ನಡ ಭಕ್ತಿ ಸಾಹಿತ್ಯದಲ್ಲಿ ಇಂಥ ವಸ್ತು ಬಿಂಬಗಳು ಹಲವು ಬಗೆ ಅರ್ಥಗಳನ್ನು ಪಡೆದುಕೊಳ್ಳುತ್ತಾ ಬಂದಿವೆ. ಇವು ಸಹಜ ಬದುಕಿನ ವಸ್ತುಗಳಾಗಬಹುದು. ಧರ್ಮ ಭಿತ್ತರಿಸುವ ಪರವಸ್ತು ಆಗಬಹುದು. ಸಾಹಿತ್ಯದ ವಸ್ತು ಗತಿಯೂ ಆಗಬಹುದು. ಬದುಕು, ಧರ್ಮ, ಸಾಹಿತ್ಯ ಈ ಮೂರು ಕೇಂದ್ರಗಳಲ್ಲಿ ಇಂತಹ ವಸ್ತು ಬಿಂಬಗಳು ಬರಿಯ ಪ್ರತಿಮೆ, ರೂಪಕ ಅಥವಾ ಶಬ್ದಗಳಾಗಿ ಬರದೇ ಜೀವಂತ ಬಿಂಬವಾಗಬೇಕೆನ್ನುವ ಉದ್ದೇಶ ಎಲ್ಲಾ ತತ್ವಪದಕಾರರಲ್ಲಿ ಎದ್ದು ಕಾಣುತ್ತದೆ. ಪೂರ್ವಕಲ್ಪಿತ ನಂಬಿಕೆಗಳು. ವ್ಯಾಖ್ಯಾನಗಳು ಹಾಗೂ ಈ ಬಗೆಯ ತಾತ್ವಿಕ ವಿಚಾರಗಳು ಹಿರಿಯ ಶಬ್ದಗಳಾಗಿದ್ದಂತೆ ಇವು ನಿಜದುದಯಕ್ಕೆ ನಮ್ಮನ್ನು ತಲುಪಿಸಲಾರವು. ಸಾಂಪ್ರದಾಯಿಕವಾಗಿ ಬಂದ ಸತಿ-ಪತಿ, ಗುರು-ಲಿಂಗ, ಜಂಗಮ ಎನ್ನುವ ಪರಿಕಲ್ಪನೆಗಳನ್ನು ತತ್ವಪದಕಾರರು ಯತಾವತ್ತು ಸ್ವೀಕರಿಸದೇ ಭಿನ್ನವಾಗಿ ಬಗೆದರು. ಸ್ಥಾವರ ಲಿಂಗ ಕಲ್ಪನೆಗಿಂತ ಭಿನ್ನವಾದ ಇವರ ಆತ್ಮಲಿಂಗದ ಕಲ್ಪನೆ ಇದಕ್ಕೆ ಉತ್ತಮ ನಿದರ್ಶನವಾಗಿದೆ. ಆದರೆ ಸಿದ್ಧ ಮಾದರಿಗಳ ಮೂಲಕ ತಮ್ಮ ಸಾಮಾಜಿಕ ಹಾಗೂ ತಾತ್ವಿಕ ಆಲೋಚನೆಗಳನ್ನು ಅರಿಯಲು ಬಿಡದೆ ಅನುಭವದ ವಿಸ್ತಾರ ವೈವಿಧ್ಯ ಸಾಮ್ಯತೆಗಳ ಮೂಲಕ ದಕ್ಕಿಸಿಕೊಳ್ಳುವ ಜೀವಂತವಾದ ಸ್ಥಳೀಯ ಬಿಂಬಗಳೇ ನಿಜದುದಯಕ್ಕೆ ದಾರಿಯಾಗಬಲ್ಲವೆಂಬ ಅರಿವು ಅವರಲ್ಲಿತ್ತು. ತತ್ವಪದಕಾರರ ಈ ಅನುಭವ ವೇದಾಂತ ಅದಮ್ಯ ಅಭಿವ್ಯಕ್ತಿ ಕ್ರಮಕ್ಕೆ ಮೂಲವಾಯಿತು. ಬಾಳಿನ ವಸ್ತು ವಿಷಯಗಳು, ಧಾರ್ಮಿಕ ನೆಲೆಯ ಪರವಸ್ತು ಸಾಮಾಜಿಕ ಸಂಘರ್ಷಗಳು ಸಾಹಿತ್ಯ, ಕಲೆಯ ವಸ್ತುಗತಿ ಇವೆಲ್ಲವುಗಳನ್ನು ಅನುಭವ ಮೂಲದಿಂದ ಅನುಲಕ್ಷಿಸುವ ರೀತಿ ಸದಾ ಚಲನಶೀಲವಾಗಿರುತ್ತದೆ. ಇದಕ್ಕೆ ನಾವು ಬಿಂಬಾತ್ಮಕ ಗ್ರಹಿಕೆ

ಎನ್ನಬಹುದು. ದಟ್ಟವಾದ ಜೀವನಾನುಭವಗಳಿಂದ ಹುಟ್ಟಿದ ತತ್ವಪದಕಾರರ ರಚನೆಗಳನ್ನು ರೂಪಗೊಂಡ ಅವರ ಬದುಕಿನ ಕಥನಗಳನ್ನು ಸಾಮಾಜಿಕ ಚಿಂತನೆಗಳನ್ನು ನಾವು ನಿಘಂಟು ಅಥವಾ ವಿಶ್ವಕೋಶ ಗ್ರಂಥಗಳಿಂದ ಅರಿತುಕೊಳ್ಳಲು ಸಾಧ್ಯವಿಲ್ಲ. ಇದಕ್ಕೆ ಅನುಭವದ ವಿಸ್ತಾರ ವೈವಿಧ್ಯಮಯ ಸಾಮ್ಯತೆಗಳೇ ಸೋಪಾನ ಮಾರ್ಗವಾಗಬೇಕು.

## ೬.೨. ಹಿಂದೂ ಮುಸ್ಲಿಂ ಧಾರ್ಮಿಕ ವ್ಯವಸ್ಥೆ ಮತ್ತು ಕೋಮು ಸಮಸ್ಯೆಗಳು

ಕ್ರಿ.ಶ.೧೭, ೧೮ನೇ ಶತಮಾನದ ಬ್ರಿಟಿಷ್ ಮತ್ತು ನಿಜಾಂ ಆಳ್ವಿಕೆಯಿಂದಾಗಿ ರಾಯಚೂರು ಜಿಲ್ಲೆಯಲ್ಲಿ ಧಾರ್ಮಿಕ ಮತ್ತು ಸಾಂಸ್ಕೃತಿಕ ಜೀವನದ ವ್ಯವಸ್ಥೆಯಲ್ಲಿ ಹುಟ್ಟಿಕೊಂಡ ಹಿಂದೂ ಮುಸ್ಲಿಂ ಕಥಾನಕ ಮಾದರಿಗಳನ್ನು ವಿಶೇಷವಾಗಿ ಅಧ್ಯಯನಕ್ಕೆ ಅಳವಡಿಸಿಕೊಳ್ಳಬೇಕಾದ ಅಗತ್ಯವಿದೆ. ಬಹುಮನಿ ಮತ್ತು ಆದಿಲ್ ಶಾಹಿ ಆಳ್ವಿಕೆಯಲ್ಲಿ ಈ ಪ್ರಾಂತ್ಯದ ಜನಸಮುದಾಯಗಳು ಭಿನ್ನ ಭಾಷೆ-ಸಂಸ್ಕೃತಿಯ ಪ್ರಭಾವಕ್ಕೆ ಅನಿವಾರ್ಯವಾಗಿ ಸಹಜವಾಗಿ ಒಳಗಾದವು. ಆದಿಲ್ ಶಾಹಿಗಳ ಔದಾರ್ಯದಿಂದಂತೂ ಎರಡು ಸಂಸ್ಕೃತಿಗಳ ಕೊಳು ಕೊಡೆ ಹೆಚ್ಚಾಯಿತು. ಇದರಿಂದ ಈ ಪ್ರಾಂತ್ಯದ ಹಿಂದೂ ಮತ್ತು ಮುಸ್ಲಿಂ ಸಮುದಾಯದೊಳಗೆ ವಿಚಿತ್ರವಾದ ಸಾಂಸ್ಕೃತಿಕ ರೂಪಾಂತರ ಏರ್ಪಟ್ಟಿತು. ಎರಡು ಭಿನ್ನ ಸಂಸ್ಕೃತಿಗಳು ಕೂಡಿಕೊಂಡು, ಹಿಂದೂ ಸಮುದಾಯಗಳಿಗೆ ಸೂಫಿ ಸಂತರು ದೈವವಾಗಿ ಪರಿಣಮಿಸಿದರು. ಇಸ್ಲಾಂ ಸಮುದಾಯಿಗಳಿಗೆ ಅನುಭಾವಿಗಳು ಪೂಜ್ಯರಾದರು. ಇದರ ಪರಿಣಾಮ ತತ್ವಪದಗಳಂತಹ ಮೌಖಿಕ ಸಾಹಿತ್ಯದ ಹೆಚ್ಚಳಕ್ಕೆ ಕಾರಣವಾಯಿತು.

ಬಹುಮುಖ್ಯವಾಗಿ ರಾಯಚೂರು ಜಿಲ್ಲೆ ತತ್ವಪದಕಾರರಲ್ಲಿ ವಿವಿಧ ಮತ ಧರ್ಮಗಳ ಪ್ರಭಾವ ಕಂಡುಬರುತ್ತದೆ. ಸೂಫಿ, ಹಿಂದೂ, ದತ್ತ, ಆರೂಢ ಇವುಗಳ ಲಕ್ಷಣಗಳು ಪ್ರಮುಖವಾಗಿ ಕಾಣುತ್ತವೆ. ಗುರು-ಶಿಷ್ಯರಾಗಿ ಬಾಳಿದ ಗದ್ದುಗೆ ಮಠ ಸಮಾಧಿಗಳಂತಹ ಕುರುಹುಗಳಿವೆ. ತಾತ್ವಿಕವಾಗಿ ಆಚರಣೆ ಹಾಗೂ ಸಾಧನೆಗಳಲ್ಲಿ ಪರಸ್ಪರ ಕೊಡುಕೊಳ್ಳುವಿಕೆ ನಡೆದದ್ದು ಇಲ್ಲಿ ಕಾಣುತ್ತದೆ. ತತ್ವಪದ ಪರಂಪರೆ ಬಹುಪಂಥೀಯ ವೈವಿಧ್ಯತೆಯಿಂದ ಕೂಡಿದ ಪಂಥ ಪರಂಪರೆ. ಇವರ ದಾರ್ಶನಿಕ ಬೇರುಗಳು ಒಂದು ರೀತಿಯ ಯೋಗದರ್ಶನದಲ್ಲಿವೆ. ಶಿವ ಹಾಗೂ ಶಕ್ತಿಕೇಂದ್ರಿತ ಪಂಥಗಳು ಈ ಪರಂಪರೆಯ ಸಾಧು, ಸಂತರ ಮೂಲ ಗುಣ, ವೇದ, ಶಾಸ್ತ್ರ, ಪುರಾಣ, ಯಾಗ, ಪೂಜೆಗಳಿಂದ ಮೋಕ್ಷ ಸಿಗುವುದಿಲ್ಲ. ಸಾಧನೆ ಮಾಡುವ ಅವಧೂತನಿಗೆ ಮಾತ್ರ ಮೋಕ್ಷ ಸಿಗುತ್ತದೆ ಎನ್ನುವುದು. ರಾಯಚೂರು ಜಿಲ್ಲೆಯ ಬಹಳಷ್ಟು ತತ್ವಪದಕಾರರು ಗುರುತಿಸಿಕೊಳ್ಳುವುದು ಕೃಷಿ, ವ್ಯಾಪಾರ, ನೇಕಾರಿಕೆ, ನೌಕರಿ, ಹಗ್ಗ ಹೆಣೆಯುವ ಮುಂತಾದ ದುಡಿಮೆಯ ಕೆಲಸಗಳ ಜೊತೆಗೆ, ಇವರ ಅಧ್ಯಯನ ಕೂಡಾ ಹೆಚ್ಚು ವೀರಶೈವೀಕರಣಗೊಂಡ ನೆಲೆಗಳಲ್ಲಾಗಿದೆ. ಹೀಗಾಗಿ ಈ ಭಾಗದ ತತ್ವಪದಕಾರರ ಅಧ್ಯಯನಗಳೆಂದರೆ ಅದು ಕೇವಲ ಸೌಹಾರ್ದದ ಅಥವಾ ಹಿಂದೂ ಮುಸ್ಲಿಂ ವಿದೇಹಿ ನೆಲೆಯ ಅಧ್ಯಯನಗಳಾಗಿಯೇ ಕಂಡುಬರುತ್ತವೆ.

ಸೂಫಿ ಮತ್ತು ಈ ಭಾಗದ ಅನುಭಾವಿಗಳ ಮಧ್ಯ ನಡೆದ ನಿರಂತರ ಕೊಡು ಕೊಳುವಿಕೆಗಳು ತುಂಬಾ ಗಮನಾರ್ಹವಾದಂಥವು. ಗೋವಿಂದ ಭಟ್ಟರಿಗೆ ಶರೀಫ್, ಬಂದೇನವಾಜನಿಗೆ ಸಿದ್ದಪ್ಪ ಶಿಷ್ಯನಾಗುವುದು ಸಾಮಾನ್ಯ. ಇಂಥ ತಾತ್ವಿಕ ಹರಿದಾಟಗಳು ಜನಪರಂಪರೆಯ ಒಳಗೆ ಸಾಂಸ್ಕೃತಿಕ ಕೊಡುಕೊಳೆಯಾಗಿ ಮುಂದುವರಿಯುತ್ತವೆ. ಇಂಥಾ ಅನುಭಾವಿಗಳ ಚಿಂತನೆಗಳನ್ನು ಪ್ರಭುತ್ವವಾದಿ ಮತವಾದಿ, ರಾಷ್ಟ್ರೀಯವಾದಿ ನೆಲೆಗಳಲ್ಲಿ ವ್ಯಾಖ್ಯಾನಿಸುವುದು ಹೆಚ್ಚು. ವಚನಕಾರರಿಂದ ಹಿಡಿದು ಕಳೆದ ಶತಮಾನದವರೆಗಿನ ೨೦೦ ವರ್ಷಗಳಲ್ಲಿ ಆಗಿ ಹೋದ ಅನುಭಾವಿಗಳನ್ನು ಒಂದೇ ಚೀಲದಲ್ಲಿ ತುಂಬುತ್ತಾ ಬರಲಾಗಿದೆ. 'ಮಹಿಪತಿದಾಸರ'ನ್ನು ದಾಸ ಸಾಹಿತ್ಯದ ಭಾಗವಾಗಿ, 'ಕಾಡಸಿದ್ದೇಶ್ವರ'ರನ್ನು ವೀರಶೈವ ಸಾಹಿತ್ಯದ ಭಾಗವಾಗಿ ಅರ್ಥೈಸಲಾಗಿದೆ. ಮಧ್ಯಕಾಲೀನ ಅನುಭಾವಿಗಳ ವಚನಗಳ ಸಂಪಾದನೆ, ಪ್ರಕಟಣೆ, ಶೋಧನೆ, ವ್ಯಾಖ್ಯಾನಗಳ ಹಿಂದೆ ಮತಾಭಿಮಾನ ಪ್ರಧಾನವಾಗಿ ಕೆಲಸ ಮಾಡಿದೆ. 'ತತ್ವಪದ'ಗಳನ್ನು 'ಸ್ವರವಚನ'ಗಳೆಂದು, ಸ್ವರ ವಚನಗಳೇ ತತ್ವಪದಗಳ ಹುಟ್ಟಿಗೆ ಕಾರಣವೆಂದು ಈವರೆಗೂ ನಂಬಲಾಗಿದೆ. ಆದರೆ 'ತತ್ವಪದ'ಗಳು ಸ್ವಭಾವತಃ ಪದಗಳು, ಹಾಡುಗಳೇ ಹೊರತು ವಚನಗಳಲ್ಲ, ಕಡಕೋಳು ಮಡಿವಾಳಪ್ಪ, ತಿಂಥಿಣಿ ಮೌನಪ್ಪಯ್ಯ, ಕೊಡೇಕಲ್ ಬಸವಣ್ಣ, ನೀರಲಕೇರಿ ಬಸವಲಿಂಗ, ಗೂಗಲ್ಲು ಪರಪ್ಪಯ್ಯ ಮುಂತಾದ ಅನುಭಾವಿಗಳನ್ನು ವೀರಶೈವ ಅನುಭಾವಿಗಳೆಂದು, ವೀರಶೈವ ಸಾಹಿತ್ಯ, ಧರ್ಮ, ಸಂಸ್ಕೃತಿಗಳನ್ನು ಉಳಿಸಿ ಬೆಳೆಸಿದವರೆಂದು ಗುರುತಿಸಲಾಗುತ್ತದೆ. ಇವರ ರಚನೆಗಳನ್ನು ವೀರಶೈವ ಷಟ್‌ಸ್ಥಲ ಮಾದರಿಯಲ್ಲಿ ವಿಂಗಡಿಸಲಾಗುತ್ತದೆ. ತತ್ವಪದಗಳಲ್ಲಿ ಗುರು, ಲಿಂಗ, ಜಂಗಮ, ಶಿವಗಳ ಪ್ರಸ್ತಾಪವಿದೆ ಎಂಬ ಮಾತ್ರಕ್ಕೆ ಈ ಅನುಭಾವಿಗಳನ್ನು ಇಸ್ಲಾಂ ಧರ್ಮದ ಪ್ರಚಾರಕರೆಂದು ತಿಳಿಯುವುದು ಅವರನ್ನು ಒಂದು ಮತಕ್ಕೆ ಮಿತಿಗೊಳಿಸಿಬಿಡುತ್ತದೆ.

ತತ್ವಪದಕಾರರ ನೆಲೆಗಳು ಇಂಥ ಸೀಮಿತ ಮತೀಯ ಚೌಕಟ್ಟಿನೊಳಗೆ ನಿಲ್ಲುವಂಥಾದ್ದಲ್ಲ. ಯಾವುದೇ ಒಂದು ಧರ್ಮ ಅಥವಾ ಮತಗಳ ರಕ್ಷಣೆಗೆ ಅನುಭಾವಿಗಳೆಂದು ಕರೆಯುವುದು ಸರಿಯಲ್ಲ. ಅನೇಕ ವಚನಕಾರರು ಅನುಭಾವಿಗಳು ಲಿಂಗಧಾರಣಾ ವಿರೋಧಿಗಳು. ಅಲ್ಲಮನ ಕಾಲದಿಂದಲೂ ಈ ಧಾರೆ ಬೇರೆಯಾಗಿಯೇ ಉಳಿದು ಬಂದಿದೆ. ತಿಂಥಿಣಿ ಮೌನಪ್ಪಯ್ಯ, ಕೊಡೇಕಲ್ ಬಸವಣ್ಣ ತೋಂಟದ ಸಿದ್ದಲಿಂಗ ಪರಂಪರೆಯಲ್ಲಿ ಬರುವ ಬೋಳಬಸವರು ಕೂಡ ಇಷ್ಟಲಿಂಗವಿರೋಧಿಗಳು. ಆದರೆ ಇಂಥಾ ಅನೇಕ ತಾತ್ವಿಕ ವೈರುಧ್ಯಗಳು ವೀರಶೈವ ಕಟ್ಟಿನಲ್ಲಿ ಮರೆ ಮಾಚುತ್ತವೆ. ಇಂಥಾ ನೆಲೆಗಳು ತತ್ವಪದಕಾರರನ್ನು ಸ್ವತಂತ್ರವಾಗಿ ಓದಲು ಅಡ್ಡಿಪಡಿಸುತ್ತವೆ.

ಮತ್ತೊಂದು ಸಂಗತಿ ಎಂದರೆ ತತ್ವಪದಕಾರರನ್ನು ಮತೀಯ ಸಾಮರಸ್ಯವಾದಿಗಳೆಂದು ವ್ಯಾಖ್ಯಾನಿಸುವ ನೆಲೆಗಳು, ಅನ್ಯಭಾಷಾ ಆಕ್ರಮಣದಿಂದ ರೋಸಿ ಹೋಗಿ ತಮ್ಮ ಧರ್ಮರಕ್ಷಣೆ ಮಾಡಲು ಕನ್ನಡ ಜೊತೆ

ಉರ್ದುವನ್ನು ಅಥವಾ ಉರ್ದುವಿನ ಜೊತೆ ಕನ್ನಡವನ್ನು ಈ ಭಾಗದ ತತ್ವಪದಕಾರರು ಬಳಸಿ ಬೆಳೆಸಿದರು. ನಿಜಾಂಶಾಹಿ ಆಡಳಿತದಿಂದ ರಕ್ಷಣೆ ಪಡೆಯಲು ರಾಯಚೂರು ಜಿಲ್ಲೆಯ ತತ್ವಪದಕಾರರು ಸಂತ ಫಕೀರರ ವೇಷದಲ್ಲಿ ತಿರುಗುತ್ತಿದ್ದರು. ಪಂಡಿತ ಚಂದ್ರಶೇಖರ ಶಾಸ್ತ್ರಿಗಳಂಥವರು ಮುಸಲ್ಮಾನರ ಆಳ್ವಿಕೆಯ ಉಪಟಳ ಕಾಲದಲ್ಲಿ ಇತರರು ತಮ್ಮ ಧರ್ಮ ರಕ್ಷಣೆಯನ್ನು ಮತ್ತು ದೇವಾಲಯಗಳನ್ನು ರಕ್ಷಿಸಿಕೊಳ್ಳಲು ಮುಸಲ್ಮಾನೀ ಸಂಕೇತಗಳನ್ನು ಬಳಕೆಗೆ ತಂದರು ಎಂದು ಹೇಳುತ್ತಾರೆ. ಇಂಥಾ ವ್ಯಾಖ್ಯಾನವನ್ನು ಕಪಟಳ್ ಕೃಷ್ಣರಾಯರಂಥವರು ಅಲ್ಲಗಳೆಯುತ್ತಾರೆ. ಅವರ ಹಸಿರು ಪೇಟ, ಕರಿಕೋಟುಗಳಂಥಹ ದಿರುಸುಗಳನ್ನು ಮುಂದಿಟ್ಟುಕೊಂಡು ಸಾಮರಸ್ಯದ ಅಥವಾ ಸಂಘರ್ಷದ ಚರ್ಚೆಗಳನ್ನು ಬೆಳೆಸುವ ಚಿಂತನೆಗಳು ತತ್ವಪದಕಾರರನ್ನೇ ತಪ್ಪಾಗಿ ವ್ಯಾಖ್ಯಾನಿಸುತ್ತವೆ. ಅನುಭಾವಿಗಳ ರಚನೆಗಳಲ್ಲಿ ಆಳುವ ಪ್ರಭುಗಳನ್ನು ಕಂದಾಚಾರಗಳಲ್ಲಿ ಹೂತು ಹೋದ ಸಾಂಪ್ರದಾಯಿಕ ಮತಗಳನ್ನು ಕಟುವಾಗಿ ವಿಮರ್ಶಿಸುವುದು ಸಾಮಾನ್ಯ. ಚರಿತ್ರೆಯ ವಿವರಗಳನ್ನು ಬೆಡಗಿನ ಭಾಷೆಯಲ್ಲಿ ಬಳಸುವ ಇವನ್ನು ನಮ್ಮ ಕಲ್ಪನೆಯ ಚರಿತ್ರೆಯ ವ್ಯಾಖ್ಯಾನಕ್ಕೆ ಎಳೆದುತರುವುದು ಅನೇಕ ಸಮಸ್ಯೆಗಳಿಗೆ ದಾರಿ ಮಾಡುತ್ತದೆ. ಜನಸಮುದಾಯಗಳು ದುಡಿಮೆಯ ಜೊತೆಯಲ್ಲಿ ತತ್ವಪದಗಳನ್ನು ಹಾಡುತ್ತಿದ್ದರು. ಬದುಕಿನ ತಾಪತ್ರಯಗಳನ್ನು ಮರೆಯಲು ಇವು ಜನರಿಗೆ ಆತ್ಮಸಂಗಾತಿಗಳಾಗಿದ್ದವು.

ಬಡತನ ಅಲೆಮಾರಿ ಜೀವನ ರೂಢಿಸಿಕೊಂಡ ಪಿಂಜಾರ ಮಂಜರ್ಲಾ, ಖಾದರ ಸಾಹೇಬ, ಉರುಕುಂದೀರಣ್ಣನ ಸಾಮೀಪ್ಯದಿಂದ ಅಲ್ಲಾವುದ್ದೀನನು ಖಾದರಲಿಂಗನಾಗುವ ಸಂಕರ ಸ್ವರೂಪಿ ಕಾಣ್ಕೆಗಳು ಮತೀಯವಾದಿ ಸರಳತೆಯಿಂದ ತುಂಬಾ ಭಿನ್ನವಾದಂಥವು. ಅರವಲಿ ಬಿಜಲಿ ವಸ್ತಾದನ ಮಾತಿನಂತೆ

> "ಊರಿಗೊಂದು ಸ್ನೇಹವ ಮಾಡು
> ಎಂಟೆಂಟು ದಿನಕೆ ಲೆಕ್ಕವ ಮಾಡು
> ತಾಸೊತ್ತಿರಲಿಕ್ಕೆ ವಸ್ತಿಯ ಮಾಡು
> ವೈರಿ ಬಂದರೆ ಧೈರ್ಯವ ಮಾಡು
> ರಾಮ ರಹೀಮರ ಸ್ಮರಣೆಯ ಮಾಡು"[೧]

ಸ್ನೇಹ, ತಿರುಗಾಟ, ಸಾಧನೆಯಂತಹ ಪರಿಕಲ್ಪನೆಗಳು ಬರೀ ಕ್ಲೀಷೆಗೊಂಡ ಪದಗಳಲ್ಲ, ಬದುಕನ್ನು ಒಳಗಿನಿಂದ ಅರ್ಥೈಸುವ ಅಂತಃಸ್ವರೂಪದ್ದು. "ಶರೀಫರು ಸೇರಿದಂತೆ ಮುಸ್ಲಿಂ ತತ್ವಪದಕಾರರಲ್ಲೇ ಹಿಂದುಳಿದ ಸಾಂಸ್ಕೃತಿಕವಾಗಿ ಕೀಳಿರಿಮೆಗಳ ಅತಂತ್ರಗಳಲ್ಲಿ ಬದುಕುವ ಪಿಂಜಾರ, ಪರದೇಶಿ, ಜಾತಿಗಾರ ಸಮುದಾಯಕ್ಕೆ ಸೇರಿದವರೆಂಬುದನ್ನು ಗಮನಿಸಬೇಕು. ಕನ್ನಡ ಹಾಗೂ ತೆಲುಗು ಮಾತೃಭಾಷೆಯುಳ್ಳ ಪಿಂಜಾರರಿಗೆ ಬಹಶಃ ಉರ್ದುಭಾಷಿಕತೆಯಿಂದ ದೂರವಿರುವ ಕಾರಣದಿಂದ ಸಾಂಪ್ರದಾಯಿಕ ಇಸ್ಲಾಂ

ಪರಂಪರೆಗಿಂತ ಆಯಾ ಪ್ರದೇಶದ ದೈವಗಳನ್ನು ಆಚರಣೆಗಳನ್ನು ಮೈಗೂಡಿಸಿಕೊಳ್ಳುವುದು ಸುಲಭವಾಗಿದೆ."[೨] ಹೀಗಾಗಿ ತತ್ವಪದಕಾರರು ಜನಪದರ ಸಾಂಸ್ಕೃತಿಕ ಹಬ್ಬವನ್ನು ವರ್ಣಿಸುವ ನೆಲೆಗಳೂ ಕೂಡಾ ಗಮನಾರ್ಹವಾದಂಥವುಗಳು. ಅರವಲಿ ಬಿಜಲಿ ವಸ್ತ್ರಾದನ ಪದ್ಯವೊಂದು ಹಿಂದೂ ಧಾರ್ಮಿಕ ಸಂಪ್ರದಾಯಸ್ಥರಿಗೆ ಆಕರ್ಷಿತವಾದ ಶೈಲಿ ಇಲ್ಲಿದೆ

"ಜಾತ್ರೆಯು ಬಲು ಛಂದ ನೋಡಲಿಕ್ಕೆ
ಅರ್ತಿಲಿಂದ ಸೇನೆ ಸಡಗರ ನಂದಿ
ಕೋಲುಗಳಿಂದ | ಪಾತ್ರದವರಾಡುವರು
ಪಸಂದ | ಮಾತಾಪಿತನ ಬೆಳಕಲಿ
ಪ್ರದಕ್ಷಿಣೆ ನಡೆ ತೇರಿಗೆ ನಮ್ಮ ಗುರು"[೩]

ಗ್ರಾಮದಲ್ಲಿ ಅನೇಕ ಗ್ರಾಮದೇವತೆಗಳ ಉತ್ಸವಗಳಲ್ಲಿ ಪಲ್ಲಕ್ಕಿ ಸೇವೆ, ನಂದಿಕೋಲು ಕುಣಿತವನ್ನು ಕಾಣಬಹುದು. ಶೈವ ಸಂಪ್ರದಾಯದ ಈ ಹಬ್ಬವನ್ನು ಮುಸ್ಲಿಂಯೇತರರೂ ಆಚರಿಸುವುದು ತಿಳಿದುಬರುತ್ತದೆ. ಇಂಥ ಹಾಡುಗಳು ರಾಜಕೀಯ ಹಾಗೂ ಸಾಮಾಜಿಕ ರಂಗಗಳಲ್ಲಿ ಹಿಂದೂ ಮುಸ್ಲಿಂರ ನಡುವೆ ಸಂಘರ್ಷ ತೋರಿದರೂ ಅವರಿಬ್ಬರಲ್ಲಿ ಆಧ್ಯಾತ್ಮಿಕ ಪ್ರವೃತ್ತಿಯವರಲ್ಲಿ ಸಾಮರಸ್ಯಕ್ಕೆ ಯಾವ ಭಾದೆಯೂ ಇರಲಿಲ್ಲ ಎನ್ನುವ ಶಂಭಾ ಜೋಷಿಯವರ ಮಾತನ್ನು ನೆನಪಿಗೆ ತರುತ್ತದೆ.

ರಾಯಚೂರು ಜಿಲ್ಲೆಯಲ್ಲಿ ಕಾಣುವ ಮುಸ್ಲಿಂ ತತ್ವಪದಕಾರರ, ಅವರ ನಡೆ ನುಡಿಗಳು ಹಿಂದೂ ಮುಸ್ಲಿಂ ಸೂಫಿ ಸಂತರು ಎನ್ನುವ ವಿಭಾಗೀಕರಣವನ್ನು ಮೀರಿದಂಥವು. ಮುಸ್ಲಿಂರು ಈ ಭಾಗದಲ್ಲಿ ಖಾದರಲಿಂಗನನ್ನು ಜಗದ್ಗುರುವೆಂದು ಭಾವಿಸುವುದನ್ನು ಕಾಣಬಹುದು. ಆದೋನಿ ತಾಲೂಕಿನ ಕೌತಾಳಂ ಖಾದರಲಿಂಗ ಹಾಗೂ ಉರುಕುಂದಿ ಈರಣ್ಣನ ಸ್ನೇಹವು ಹಿಂದೂ ಮುಸ್ಲಿಂ ಧಾರ್ಮಿಕ ಸಾಮರಸ್ಯ ಎನ್ನುವ ವ್ಯಾಖ್ಯಾನವನ್ನು ಮೀರಿದಂಥವು. ಖಾದರಲಿಂಗನು ಮೊದಲು ಅಲ್ಲಾ ಉದ್ದೀನನಾಗಿದ್ದು, ಉರುಕುಂದೀರಣ್ಣನ ಸಾಮೀಪ್ಯದ ಪವಾಡ ಕತೆಯಿಂದ ಖಾದರಲಿಂಗನಾದನೆಂಬ ದಂತಕತೆಯಿದೆ. "ಇವರಿಬ್ಬರಲ್ಲಿ ನಡೆಯುವ ಲಿಂಗಸಂಬಂಧಿ ಜಿದ್ದಾಜಿದ್ದಿ ಕುತೂಹಲವಾದದ್ದು. ಈ ಇಬ್ಬರೂ ಸಂತರು ತಮ್ಮ ತಮ್ಮ ಲಿಂಗಶಕ್ತಿಯನ್ನು ಪರೀಕ್ಷಿಸುವ ಜಿದ್ದಿಗೆ ಬೀಳುತ್ತಾರೆ. ಒಂದು ಭಾವಿಯಲ್ಲಿ ತಮ್ಮ ತಮ್ಮ ಲಿಂಗಗಳನ್ನು ಹಾಕುತ್ತಾರೆ. ಈರಣ್ಣನದು ಬೆಳ್ಳಿಲಿಂಗ, ಅಲ್ಲಾ ಉದ್ದೀನನದು ಖರ್ಜೂರ ಲಿಂಗ. ಈಗ ತಮ್ಮ ತಮ್ಮ ಲಿಂಗಗಳನ್ನು ಪಡೆದು ಕರೆದುಕೊಳ್ಳುತ್ತಾರೆ. ಈರಣ್ಣ ಕರೆಯುತ್ತಾನೆ. ಲಿಂಗ ಬರುವುದಿಲ್ಲ. ಅಲ್ಲಾ ಉದ್ದೀನ ಕರೆಯುತ್ತಾನೆ ಈರಣ್ಣನ ಲಿಂಗ ಬಂದು ಅಲ್ಲಾ ಉದ್ದೀನ ಕಾಲಿಗೆ ಸುತ್ತಿಕೊಳ್ಳುತ್ತದೆ. ಅಂದಿನಿಂದ ಅಲ್ಲಾ ಉದ್ದೀನನು ಕಾಲಿಗೆ ಲಿಂಗ ಕಟ್ಟಿಕೊಂಡು ಖಾದರಲಿಂಗನಾಗುತ್ತಾನೆ."[೪] ಖಾದರ ಲಿಂಗನ ವಂಶಜರು ಮತ್ತು ಭಕ್ತರು ಈಗಲು ಕಾಲಿಗೆ ಲಿಂಗವನ್ನು ಕಟ್ಟಿಕೊಳ್ಳುತ್ತಾರೆ. ಸಿಂಧನೂರು ತಾಲ್ಲೂಕಿನ ಮುಕ್ಕುಂದಿ

ಗ್ರಾಮದ ಗಡ್ಡೆ ಖಾದರ ಲಿಂಗ ರಾಯಚೂರಿನ ಖಾದರಗುಂಡು ಮಸೀದಿ-ಕೌತಾಳಂ ಖಾದರ ಲಿಂಗನನ್ನು ನೆನಪಿಸುತ್ತವೆ.

ಇಷ್ಟಲಿಂಗದ ಸ್ಥಿತ್ಯಂತೀಕರಣದ ಇಂಥಾ ಸಂವಾದಗಳನ್ನು ಅಂಬಿಗರ ಚೌಡಯ್ಯ, ಕಾಳವ್ವೆನವರಂಥವರಲ್ಲಿ ಕಾಣುತ್ತೇವೆ. ಲಿಂಗ ನಿರಾಕರಣೆಯ ಇಂಥಾ ಅನುಭಾವಿಕ ನೆಲೆಗಳು ತತ್ವಪದಕಾರರನ್ನು ವೀರಶೈವ ತಾತ್ವಿಕ ಚೌಕಟ್ಟಿನಿಂದ ಭಿನ್ನವಾಗಿ ನೋಡಲು ಪ್ರಚೋದಿಸುತ್ತವೆ.

ಸ್ವಾತಂತ್ರ್ಯಪೂರ್ವದಲ್ಲಿ ಕೋಮುವಾದದ ದುಷ್ಪರಿಣಾಮಗಳನ್ನು ಕಂಡ ತತ್ವಪದಕಾರರು ಆ ಸಮಯದಲ್ಲಿ ನಾಡಿಗೆ ಅವಶ್ಯಕವಾಗಿದ್ದ ಹಿಂದೂ ಮತ್ತು ಮುಸ್ಲಿಂರನ್ನು ಭಾವೈಕ್ಯತೆಯಲ್ಲಿ ಬೆಸೆದು, ತಮ್ಮ ಹಾಡುಗಳಲ್ಲಿ ವಿವರಿಸಿದರು. ಆಧ್ಯಾತ್ಮಿಕ ಚೈತನ್ಯವನ್ನು ಸೌಹರ್ದಯುತವಾದ ಚೌಕಟ್ಟಿನಲ್ಲಿ ಹುದುಗಿಸಿ ಸಮಾಜದ ಬೆಳವಣಿಗೆಯನ್ನು ವಿಶಾಲವಾಗಿಸಿದರು. ಧರ್ಮ ಧರ್ಮಗಳ ಸೌಂದರ್ಯದ ಮಹತ್ವವನ್ನು ಈ ಕೋಮುವಾದಗಳು ಮರೆ ಮಾಡಿದ್ದವು. ತಮ್ಮ ತಮ್ಮ ಸತ್ಯದ ಧರ್ಮಗಳಿಗೆ ಆವರಿಸಿಕೊಂಡಿರುವ ದೂಳನ್ನು ಕೊಡುಹಬೇಕೆಂಬುದು ತತ್ವಪದಕಾರರ ನಿಲುವಾಗಿತ್ತು.

> ''ಅಲಾಯಿ ಎಂಬುದು ಏನಿದು
> ಯಾರ್ಯಾರಿಗೆ ಇದು ತಿಳಿದಿಲ್ಲ
> ತಿಳಿದ ಮ್ಯಾಲಾ ಅವರುಳಿದಿಲ್ಲಾ
> ಉಳಿದ ಮ್ಯಾಲ ಅವರಳಿದಿಲ್ಲ''[೫]

ನಿಜಲಿಂಗ ವೀರಭದ್ರೇಶನ ಈ ಹಾಡು ಹಿಂದೂ ಮುಸ್ಲಿಂ ಎನ್ನುವ ಭಾವೈಕ್ಯತೆಯ ಹುಸಿತನವನ್ನು ಮೀರಿದ ನೆಲೆಯದಾಗಿದೆ. ಆಚರಣೆಯ ಒಳಗಿನ ವೈರುಧ್ಯವನ್ನು ಕಾಣಿಸುವ ಇದು ಅನ್ಯಮತದ ವಿಡಂಬನೆಯಾಗಿದೆ. ವಸ್ತುನಿಷ್ಠ ವಿಮರ್ಶೆಯಾಗಿದೆ. ಚೆನ್ನೂರು ಜೂಲ್ ಸಾಹೇಬನ ಒಂದು ಹಾಡಿನಲ್ಲಿ ''ಭವವೆಂಬ ಭಿಂಖಸ್ಯೆ | ಕರ್ಮವೆಂಬ ಕೆಂಪಸ್ಯೆ | ಅರಿವಿನ ಅಲಾಯಿ ಮೂರು ಕೂಡಿ | ಮೊಹರಂ ಮಾಡಿದನಾ'' ಎನ್ನುವಲ್ಲಿ ಮೊಹರಂ ಆಚರಣೆಯನ್ನು ಅದರ ಲೌಕಿಕಾರ್ಥಕ್ಕಿಂತ ಭಿನ್ನವಾದ ಅನುಭಾವದರ್ಥಕ್ಕೆ ವಿಸ್ತರಿಸಿದ್ದು ಕಾಣುತ್ತದೆ. ನೀರಲಕೇರಿ ಬಸವಲಿಂಗ, ವೆಂಕಟಾಪೂರು ಖೇಮಣ್ಣ ಮುಂತಾದವರು ಇಂಥಾ ಅಲಾಯಿಯನ್ನು ತನು, ಮನ, ಸಾಮರಸ್ಯದ ರೂಪಕವಾಗಿ ಬಳಸಿ ಹಾಡಿದ್ದಾರೆ. ದುಃಖ ಮೂಲ ಆಚರಣೆಯಾದ ಅಲಾವಿಯನ್ನು ಸಂಭ್ರಮದಿಂದ ಕುಣಿದು ಕುಪ್ಪಳಿಸಿ ಮಾಡುವುದು ತತ್ವಪದಕಾರರಿಗೆ ಅಭಾಸವಾಗಿ ಕುಣಿಯುವುದು ದೇವರನ್ನು ದಫನ್ ಮಾಡುವುದು ಅನುಭಾವಿಗಳಿಗೆ ಸಹ್ಯವಾದ ಸಂಗತಿಯಾಗಿರಲಿಲ್ಲ. ವಡಿಕೆ ತಾತಪ್ಪಯ್ಯನು

> ''ತನ್ನ ನಿಜವ ತಾ ತಿಳಿದಂತೆ
> ಪುರುಷನಿಗಿನ್ನೇನಿನ್ನೇನೊ ನಮ್ಮ

ಇನ್ನೇನಿನ್ನೇನೊ ಧೀರತನದಿ

ಪರತತ್ವ ತಿಳಿದ ಮೇಲೆ

ಊರೇನೋ ಕೇರೀನೋ ತಮ್ಮ

ಕೇರೀನೋ ಊರೇನೋ.

ಈಶ ಭೀಮೇಶನೊಳಿದ್ದ ಮೇಲೆ

ದೇಶೇನೋ ಕೋಶೇನೋ ತಮ್ಮಾ

ಕೇರೀನೋ ದೇಶೇನೋ ತಮ್ಮಾ."[೬]

ವ್ಯಕ್ತಿ ತನ್ನ ಮನದ ಮದಗಳನ್ನು ದಫನ್ ಮಾಡಿಕೊಳ್ಳಬೇಕೆಂಬುದು ತತ್ವಪದಕಾರನ ಸ್ಪಷ್ಟ ನಿಲುವಾಗಿದೆ. ಕುಲ, ಜಾತಿ ಮೀರಿ ನಿಲ್ಲುವ ತತ್ವವನ್ನು ಹೇಳದ ಸಂತರಿಲ್ಲ. ಅದರಲ್ಲೂ ತತ್ವಪದಕಾರರು ಸೂಫಿಗಳು ಜಾತಿ ಕುಲದ ಕಿಂಚಿತ್ ವಾಸನೆ ಉಳಿಸಿಕೊಂಡವರಲ್ಲ. ಮತ ಧರ್ಮಗಳನ್ನು ಮೀರಿ ನಿಲ್ಲಬೇಕೆಂಬ ತತ್ವವನ್ನು ಒತ್ತಿ ಹೇಳಿದ್ದಾರೆ. ಹಾಗೆ ಬಾಳಿದ್ದಾರೆ. ಶಿಲ್ಲಪ್ಪ ಒಂದು ಪದದಲ್ಲಿ "ಆರೂಢ ನಮ್ಮ ಕುಲ" ಎಂದಿದ್ದಾನೆ. ಆರೂಢರೆಂದರೆ ಜೀವನ್ಮುಕ್ತರೆಂದರ್ಥ. ಆದರೂ ಜಾತಿ ಮತಗಳನ್ನು ಮುಂದಿಟ್ಟುಕೊಂಡು ನಮ್ಮಲ್ಲಿ ಸಂಘರ್ಷಗಳು ನಡೆಯುತ್ತಲೇ ಇವೆ.

"ಕುಲ ಕುಲ ಅಂತಿರಿ ನಿಮ್ಮದ್ಯಾವ ಕುಲ ನಮಗೆ ಹೇಳಿರಿ | ಮರ್ಮಾ ತಿಳಿಯಲಾರದೆ ಕುಂತೀರಿ ಮರ್ಮಗೆಟ್ಟು ಮರಣಾದೀರಿ" ಎನ್ನುವ ಮಾತುಗಳಾಗಲೀ ಮೋಟ್ನಳ್ಳಿ ಹಸನ್ ಸಾಬನು "ನಮ್ಮ ದೇವರೆಂಬುದು ಏನೋ | ನಿಮ್ಮ ದೇವ ಎತ್ಯೋ ನೀವೆತ್ಯೋ | ನಮ್ಮ ದೇವರು ನಿಮ್ಮ ನಿಮ್ಮ ದೇವರು ಎಲ್ಲಾ ಒಂದಿಲ್ಲೇನೋ | ನಿನ್ನ ನೀ ತಿಳಿದರ ನೀನೇ ದೇವರಲ್ಲೇನೋ |" ಎಂದು ಹೇಳುವ ಹಿತವಚನಗಳು ದೇಹ ಆತ್ಮಗಳಿಗೆ ಕುಲದ ಗುರುತಿಲ್ಲ. ಆದರೆ ಮನುಷ್ಯ ತನ್ನ ಸ್ವರ್ಥಕ್ಕಾಗಿ ಎಲ್ಲವನ್ನು ಬಳಸಿಕೊಂಡು ಹಾಳಾಗುತ್ತಿದ್ದಾನೆ ಎನ್ನುವ ಅರ್ಥವನ್ನು ಪ್ರಕಟಿಸುತ್ತವೆ! ಒಳಗಿನ ಮೈಲಾ ತೊಳೆಯದೆ ಮ್ಯಾಲಿನ ಖೇಲಾ ಪ್ರದರ್ಶಿದಿದರೆ ಅದೇ ಮನುಷ್ಯನ ಅಧೋಗತಿ. 'ಸಬ್ ಕೆಹತೆ ಈಶ್ವರ ಅಲ್ಲಾ ಇದರ ಬೇಫ್ ಯಾರಿಗೂ ಇಲ್ಲಾ" ಎನ್ನುವ ಚೆನ್ನೂರು ಜಿಲಾಲ್ ಸಾಬನ ಮಾತುಗಳು ಕುಲಚಲಕ್ಕೆ ಹೋರಾಡಿದ ಛಲಮಾರಿಗಳಿಗೆ ಹೇಳಿದವಾಗಿವೆ. ದುಡಿದುಣ್ಣುವ ವರ್ಗಗಳಲ್ಲಿ ಕುಲದ ಬೇರುಗಳು ಯಾವಾಗಲೂ ಬಲಗೊಳ್ಳುವುದಿಲ್ಲ. ಅವು ಬಲಗೊಳ್ಳುವುದು ಬೌದ್ಧಿಕತೆಯನ್ನೇ ಬಂಡವಾಳವಾಗಿಸಿಕೊಂಡ ವರ್ಗಗಳಲ್ಲಿ.

ಗೊಬ್ಬೂರಿನ ಸುಲ್ತಾನಪುರದ ಮರಡಿ ದರ್ಗಾ, ಬೀಳಗಿಯ ಹಸನ್ ಡೋಂಗ್ರಿ ದರ್ಗಾ, ರಾಯಚೂರಿನ ಶಮ್ ಶಾಲಮ್ ದರ್ಗಾ, ಕಲ್ಮಲಾ ಕರಿಯಪ್ಪ ತಾತ, ಯರಗೇರಾದ ಮಕಮಲ್ ಕೋಶ್ ಖಾದ್ರಿ ದರ್ಗಾ, ಗಿಲ್ಕೆ ಸೂಗೂರಿನ ಸೈಯ್ಯದ್ ಯಾಸೀದ್ ಪೀರ ದರ್ಗಾ, ಸಿಂಧನೂರು ತಾಲ್ಲೂಕಿನ ಆಲಂಬಾಷಾ, ಯದ್ದಲದೊಡ್ಡಿಯ ಹಜರತ್ ಷಾವಲಿ, ಸಿಂಧನೂರಿನ ಷಾ ಹುಸೇನ, ಸುಲ್ತಾನ ಪುರದ

ಗಂಗಾಧರೇಶ್ವರ ಸ್ವಾಮಿ ಮಠ, ಬಾಲರಾಮಪ್ಪನ ಸ್ನೇಹಿತನಾದ ಸಿಕಂದರ ಪಾಶನ ಗದ್ದುಗೆ ಇವೆಲ್ಲಾ ರಾಯಚೂರು ಜಿಲ್ಲೆಯ ಧರ್ಮ ಸಹಿಷ್ಣುತೆಯ ಕೇಂದ್ರಗಳಾಗಿವೆ. ಹಿಂದೂ ಸಂತರ ಗದ್ದುಗೆಗಳಲ್ಲಿ ಮುಸ್ಲಿಂರು ಕಾಣುವುದು. ಮುಸ್ಲಿಂ ಸಾಧು ಸಂತರ ಗದ್ದುಗೆಗಳಿಗೆ ಹಿಂದೂಗಳು ಪೂಜಾರಿಗಳಾಗುವುದು. ಇಂತಹ ಸಂಗತಿಗಳು ಧಾರ್ಮಿಕ ಸಾಮರಸ್ಯದ ಕೊಡುಕೊಳಿಕೆಗಳಾಗಿ ಕಾಣುತ್ತವೆ. ಏಕೆಂದರೆ ಪ್ರಭುತ್ವ ದಬ್ಬಾಳಿಕೆ ಹಾಗೂ ಧಾರ್ಮಿಕ ಬಡತನಗಳು ಹಿಂದೂ ಮತ್ತು ಮುಸ್ಲಿಂ ಸಂತರ ಅನುಭಾವದ ಒಂದೇ ರೂಪದಲ್ಲಿದ್ದವು. ಪ್ರಭುತ್ವ ವಿರುದ್ಧದ ಪ್ರತಿಭಟನೆಯಲ್ಲಿ ಇಬ್ಬರೂ ಒಂದೇ ಆಗಿದ್ದರೂ ದಾರಿ ಭಿನ್ನವಾದರೂ ಗುರಿ ಮಾತ್ರ ಒಂದೇ ಆಗಿತ್ತು. ಹೀಗಾಗಿ ಇಂಥ ಹಲವಾರು ಸಮಾನ ನೆಲೆಗಳು ಜಿಲ್ಲೆಯ ತತ್ವಪದಕಾರರಲ್ಲಿ ಕಾಣುತ್ತೇವೆ. ಖೇಮಣ್ಣನ ಹಾಡಿನಲ್ಲಿ ದೈವರೂಪಿತ ಅಲ್ಲಾಹನನ್ನು "ನಮಾಜು ಮಾಡಿದೆನೊ ದಿನ ದಿನ ನಮಾಜು ಮಾಡಿದನೊ | ನಮಾಜು ಮನಸಿನ ಆವಾಜ ಕೇಳಿ | ಸುಮನಸಿನ ಚಿತ್ತವು ಗೊತ್ತಿಲಿ ಯಿಡಿಸಿ."

ತತ್ವಪದಕಾರರ ಹಾಡುಗಳ ರಚನೆಯ ಸ್ವರೂಪದಿಂದ ತಮ್ಮ ಅಧ್ಯಯನದ ಅನುಭವದಿಂದ ಇದು ಮುಸ್ಲಿಂ ಧರ್ಮದ ಆಶಯವೆಂದು ಪರಿಗಣಿಸುತ್ತೇವೆ. ಹಿಂದೂ ಧರ್ಮದ ಧ್ಯಾನದ ಪರಿಕಲ್ಪನೆಯಿಂದ ವಿಶಾಲವಾಗಿಸುತ್ತೇವೆ. ಆದರೆ ತತ್ವಪದಕಾರ ಧರ್ಮದ ಮನೋವ್ಯಾಪ್ತಿಯನ್ನು ಮೀರಿ ಆರಾಧಿಸಿ ವಿಸ್ತರಿಸಿದ್ದನ್ನು ಇವರ ಹಾಡುಗಳಲ್ಲಿ ಕಾಣುತ್ತೇವೆ. ನಲವಡಿ ಶ್ರೀಕಂಠಶಾಸ್ತ್ರಿಗಳ ಲಾವಣಿಯಲ್ಲಿ ಈ ರೀತಿ ವ್ಯಕ್ತವಾಗಿದೆ.

> "ಗಾಣದಾಳ ಸ್ಟೇಷನ್ನಡಿ ಗಾಡಿಯ ನಿಲ್ಲಿಸಿ
> ಲೂಟಿಯ ಮಾಡಿದರು ಮಾನವತಿಯರನು
> ಹಿಡಿದೆಳೆದೊಯ್ಯುತ ಮಾನಹಾನಿಯನ್ನೆಸಗಿದರು."[೭]

ತತ್ವಪದಕಾರರು ಅಂದಿನ ಸಂಘರ್ಷ ಸಮಾಜದಲ್ಲಿ ತಮ್ಮ ವ್ಯಕ್ತಿತ್ವವನ್ನು ಈ ರೀತಿಯಾಗಿ ಗುರುತಿಸಿಕೊಳ್ಳುವುದನ್ನು ಕಾಣಬಹುದು. ಮುಸ್ಲಿಂ ಕೋಮುವಾದಿಗಳು ಆರ್ಥಿಕವಾಗಿ ಹಿಂದುಳಿದ ಮುಗ್ಧ ಹಿಂದೂ ಜನರನ್ನು ಕೃಷ್ಣ, ನರಸಿಂಹ, ವೀರಭದ್ರರು ಅಲ್ಲಾಹನ ಅವತಾರವಾದ ಶಿವಶರಣ ಚೆನ್ನಬಸವೇಶ್ವರರೆಂದು ದಾರಿ ತಪ್ಪಿಸುವ ಕೆಲಸವನ್ನು ಮುಸ್ಲಿಂ ಕೋಮುವಾದಿಗಳು ಮಾಡುವುದನ್ನು ತತ್ವಪದಕಾರರು ತಿಳಿಸದಿದ್ದರೂ ಸಮಾಜದ ಶಿಕ್ಷಿತ ಜನರು ಹಿಂದೂ ಧರ್ಮದ ಮೇಲಾಗುವ ಮತಾಂತರ ಶೋಷಣೆಯನ್ನು ಕಂಡು ಧಿಕ್ಕರಿಸಿದರು. ಸಮಾಜವೇ ತಮ್ಮದೆಂದುಕೊಂಡ ಹಿಂದೂ ಮುಸ್ಲಿಂ ತತ್ವಪದಕಾರರು ಒಬ್ಬ ದೇವರನ್ನು ಸ್ತುತಿಸದೆ ಬಹುದೇವತೋಪಾಸನ ಆಕಾಂಕ್ಷೆಗಳಾಗಿ ಸಮೂಹದ ಜನರಿಗೆ ಆಧ್ಯಾತ್ಮಿಕವಾಗಿ ಪ್ರಬಲತೆಯೊಂದಿಗೆ ಪ್ರೋತ್ಸಾಹಿಸುವುದು ಅವರ ಅನೇಕ ತತ್ವಪದಗಳಲ್ಲಿ ಗುರುತಿಸಬಹುದು. ಗೂಗಲ್ಲ ಪರಪ್ಪಯ್ಯ ಚಿಕ್ಕ ಪುಟ್ಟ ದೈವಗಳನ್ನು ಉದ್ದೇಶಿಸಿ ಈ ರೀತಿ ಮಾತನಾಡಿದ್ದಾನೆ. "ಹನುಮಂಗೆ ಚಪ್ಪೆಂದು

ಹಸ್ತಿ ಮುಖಗಣಪಂಗೆ ಕುಸುಮ ಕೋದಂಡನಿಗೆ | ಹಿಂಡು ದೇವರು ಪೂಜೆಗೊಂಬ ಪುಂಡ ದೇವಿಗೆ'' ಇವೆಲ್ಲಾ ತತ್ವಪದಕಾರರಲ್ಲಿ ಮಾನಸಿಕವಾಗಿ ಕೋಮುವಾದವನ್ನು ತಡೆಯುವ ಪ್ರಕ್ರಿಯೆಯಾಗಿದೆ.

ಜನಪದ ಕವಿಗಳಾದ ತತ್ವಪದಕಾರರ ಮುಖ್ಯ ಗುಣವೆಂದರೆ ಸ್ಥಳೀಯ ದೈವಗಳನ್ನು ಆರಾಧಿಸುವುದು ಮತ್ತು ತಮ್ಮ ಅಂಕಿತವನ್ನಾಗಿಸಿಕೊಂಡಿರುವುದು. ಗುರುಸ್ಮರಣೆ ಇವರ ಅಂತಿಮ ಗುರಿಯಾದರೂ ತಮ್ಮ ಸರಿಕಂಡ ದೈವಗಳಿಗೆ ವಶವಾಗಿದ್ದಾರೆ. ಇಂಥಾ ಹಲವಾರು ಸಂಗತಿಗಳಲ್ಲಿ ಸೂಫಿಗಳ ಪ್ರಭಾವ ತತ್ವಪದಕಾರರ ಮೇಲೆ ಸಾಕಷ್ಟು ಆಗಿದೆ. ಫಕೀರನಾಗಬೇಕಾದರೆ ಈ ಮನ ದಿಕ್ಕಾರ ಮಾಡಿಕೊಂಡಿರಬೇಕು. ''ಏಖಲ್ ಖಾಜಾ ಸಾಕ್ಷಾತ್ ಶಿವನು'' ಎಂದು ಹೇಳುವ ತತ್ವಪದಕಾರರು ಬಹುದೇವತೋಪಾಸಕರಾಗಿದ್ದರು. ರಾಯಚೂರು ಜಿಲ್ಲೆಯ ತತ್ವಪದಕಾರರಿಗೂ ಸೂಫಿಗಳಿಗೂ ಅಂಥಾ ವ್ಯತ್ಯಾಸವಿಲ್ಲ. ಮುಸ್ಲಿಮೇತರ ತತ್ವಪದಕಾರರಿಗೆ ಅನೇಕ ಜನ ಮುಸ್ಲಿಂ ಶಿಷ್ಯರಿದ್ದಾರೆ.

''ಗೊಬ್ಬೂರು ಹತ್ತಿರ ಸುಲ್ತಾನ ಪುರದ ದಿನ್ನಿಯ ಮೇಲೆ ಅಕರಾಮ ಸಾಹೇಬನ ಗದ್ದುಗೆ ಇದೆ. ಒಮ್ಮೆ ಹಂಪಣ್ಣ ಅರಿಷಿಣ ಬೆಳ್ಳೊಳ್ಳಿ ಮಾರಿ ಗಿಡದ ನೆರಳಿನಲ್ಲಿ ಕುಳಿತಿದ್ದ. ಅಲ್ಲಿಯ ಮುಲ್ಲಾ ಏ ಹಂಪಣ್ಣ ನೀ ಪದ ಮಾಡ್ತೀಯಂತಲ್ಲಾ ನಮ್ಮ ದೇವರ ಮ್ಯಾಲೀನೂ ಒಂದು ಪದ ಮಾಡಲ್ಲಾ ಎಂದ. ಆಗ ಹಂಪಣ್ಣನು ದೇವರು ಆನೆ ಅಕರಾಮ ಸಾಹೇಬ | ದೊಡ್ಡ ಪೀರ ಭಾವದಲಿ ನೀ ಭಜಿಸೊ ಪೂರಾ| ಘನ ಮೂರುತಿ ತಾನಾದರೆ ಮಣಿಪುರ ನಾಥ''[೭]

ಅಕರಾಮ ಸಾಹೇಬ ಪ್ರಖ್ಯಾತ ಮುಸ್ಲಿಂ ಸಂತನೆಂದು ಉನ್ನತೀಕರಿಸಿದ ಗೊಬ್ಬೂರು ಹಂಪಣ್ಣ ಮುಸ್ಲಿಂ ಧರ್ಮದ ದಾರ್ಶನಿಕ ಮಾರ್ಗಗಳನ್ನು ದಾಟಿ ಅಂತರಂಗದ ಪ್ರಜ್ವಲತೆಯಲ್ಲಿ ಶಿವಾದ್ವೈತದಂತೆ ಹಾಡಿದ್ದು ಉಲ್ಲೇಖಾರ್ಹವಾಗಿದೆ. ತತ್ವಪದಕಾರರ ಈ ರೀತಿಯ ಪ್ರಕ್ರಿಯೆಗಳನ್ನು ಗುರುತಿಸುವಾಗ ವಿವಿಧತೆಯಲ್ಲಿ ಏಕತೆ ಸಾಧಿಸುವುದು, ಮಾನವತಾವಾದವನ್ನು ಒಪ್ಪಿಕೊಳ್ಳುವುದು ತತ್ವಪದಕಾರರ ಗುರಿಯಾಗಿದೆ. ಇದನ್ನು ತತ್ವಪದಕಾರ ಎಲ್ಲಿಯೂ ಕೋಮು ಸೌಹಾರ್ದತೆ ಎಂದೆನ್ನುವುದಿಲ್ಲ.

ಮೊಹರಂ ಹಬ್ಬವು ಭಾರತದಲ್ಲಿ ಕೋಮು ಸೌಹಾರ್ದತೆಯ ಹಬ್ಬವಾಗಿ ಕಂಡುಬರುತ್ತದೆ. ಇದನ್ನು ಮೊಹರಂ ಹಬ್ಬ ಅನ್ನುವುದಕ್ಕಿಂತ ಹಿಂದೂ ಮುಸ್ಲಿಂರ ಭಾವೈಕ್ಯತೆಯ ಹಬ್ಬವೆಂದರೆ ಹೆಚ್ಚು ಸೂಕ್ತವಾಗುತ್ತದೆ. ಮುಖ್ಯವಾಗಿ ಇಸ್ಲಾಂ ಧರ್ಮವು ಮನುಷ್ಯರ ನೋವು ನಲಿವು ಹುಟ್ಟು ಸಾವು ಇಂತಹ ಆಳವಾದ ಅವಶ್ಯಕತೆಗಳಿಗೆ ಸ್ಪಂದಿಸುವಂತಾದ್ದಾಗಿದೆ. ಮನುಷ್ಯರ ಅಸಂಖ್ಯಾತ ಆಕಾಂಕ್ಷೆಗಳಿಗೆ ಇನ್ನಾವುದೇ ವ್ಯವಸ್ಥೆಯು ದೊರಕಿಸಿಕೊಡಲಾಗದ ಪರಿಹಾರೋಪಾಯಗಳನ್ನು ಮುಸ್ಲಿಂ ಧರ್ಮದ ಈ ಹಬ್ಬವು ದೊರಕಿಸಿಕೊಡುತ್ತದೆ. ನೀರಲಕೇರಿ ಬಸವಲಿಂಗಪ್ಪನು ಮೊಹರಂ ಹಬ್ಬದ ಆಚರಣೆ ಕುರಿತು ಹೀಗೆಂದು ಹೇಳುತ್ತಾನೆ.

"ಅಲಾವಿನಾಡಿರೋ ಪೀರನ ಅಲಾವಿನಾಡಿರೊ
ಭವಸ್ಯೆ ಕೆವಸ್ಯೆ ಧೂಲಯಾಲ ಅನ್ನಿರಿ ಜನರೆ
ಹದಿನೆಂಟು ಕುಲದ ದೈವವು ಕೂಡಿ ಲಿಂಗದ
ಮೇಲೆ ಲಾಡಿ ಹಾಕುವಿರಿ ತುರುಕರ ಲಾಡಿ
ಕೊರಳೊಳು ಹಾಕಿ ಮುಟ್ಟೇರಿ ತಟ್ಟಿರಿ
ಎಂಬುವುದೇಕೆ".[೮]

ತತ್ವಪದಕಾರರ ಇಂಥಾ ಅಲಾವಿ ಹಾಡುಗಳು ಯಾವ ಭಕ್ತಿ ಪರಂಪರೆಯಲ್ಲೂ ದೊರಕುವುದಿಲ್ಲ. ಒಂದು ಆಧ್ಯಾತ್ಮಿಕ ಸಂಬಂಧ ಇನ್ನೊಂದು ರಾಜಕೀಯ ಸಂಬಂಧವಾಗಿ ತತ್ವಪದ ಪರಂಪರೆಯೊಂದಿಗೆ ಬೆಸೆದು ಕೊಂಡವುಗಳಾಗಿವೆ.

ಮುಖ್ಯವಾಗಿ ಈ ಭಾಗದಲ್ಲಿ ಹಿಂದು ಮುಸ್ಲಿಂ ಇಂಥಾ ಧಾರ್ಮಿಕ ನೆಲೆಯನ್ನು ರಾಜಕೀಯ ಪಕ್ಷಗಳು ತಮ್ಮ ಪ್ರಚಾರ ಕಾರ್ಯಗಳನ್ನಾಗಿ ಮಾಡಿಕೊಳ್ಳುತ್ತಿವೆ. ಇಫ್ತೆಹಾರ ಕೂಟಗಳಲ್ಲಿ ರಾಜಕಾರಣಿಗಳು ಭಾಗವಹಿಸಿ ಹಿಂದೂ ಜನರ ದಿಕ್ಕು ತಪ್ಪಿಸುವ ಮುಸ್ಲಿಂ ವಿಶ್ವಾಸ ಗಳಿಸುವ ನಾಟಕೀಯತೆಯನ್ನು ಕಂಡು ಶಿಕ್ಷಿತ ಜನರು ವಿಡಂಬಿಸಿ ನಕ್ಕಿದ್ದಿದೆ.

ಇಂದಿನ ಸರಕಾರವು ಕೋಮಗಲಭೆಗಳ ಮತ್ತು ಕೋಮುವಾದಿಗಳ ಪ್ರಚಾರ ಕಾರ್ಯವನ್ನು ಯಶಸ್ವಿಯಾಗಿ ನಡೆಯದ ಸರಕಾರದ ಜಡತೆಯನ್ನು ಸಹ ಕೋಮುವಾದ ಹೆಚ್ಚುವಂತೆ ಮಾಡಿರುವ ಅಂಶಗಳಲ್ಲಿ ಒಂದಾಗಿದೆ. ಹಲವಾರು ಬಾರಿ ಕೇಂದ್ರ ಸರಕಾರವು ಕೋಮುವಾದಿ ಪಕ್ಷಗಳೊಂದಿಗೆ ವಿವಿಧ ರಾಜ್ಯಗಳಲ್ಲಿ ಚುನಾವಣೆ ಹೊಂದಾಣಿಕೆಗಳನ್ನು ಮತ್ತು ಒಪ್ಪಂದಗಳೊಳಪಟ್ಟು ಅವರೊಂದಿಗೆ ಸರಕಾರ ರಚಿಸುವುದು ಅವರಿಗೆ ಪ್ರೋತ್ಸಾಹ ನೀಡಿದಂತಾಗಿದೆ. ಕಮ್ಯುನಿಸ್ಟ ಮತ್ತು ಮುಸ್ಲಿಂ ಲೀಗ್ ಅಂಥಹ ಪಕ್ಷಗಳ ಜೊತೆಗೆ ಕೈಜೋಡಿಸಿ ಸರಕಾರ ರಚಿಸಿದ್ದು ಮತ್ತು ಅಧಃಪತನವಾದಂತಹ ಕೆಲ ಸರಕಾರದ ಘಟನೆಗಳು ನಮ್ಮ ಮುಂದಿವೆ.

## ೬.೩. ರಾಜಕೀಯ ಆವರಣ

ರಾಯಚೂರು ಜಿಲ್ಲೆಯ ತತ್ವಪದಕಾರರು ಒಂದು ರೀತಿಯಲ್ಲಿ ವಿಷಮ ರಾಜಕೀಯ ಪ್ರಭುತ್ವವುಳ್ಳ ಪರಿಸರದಲ್ಲಿ ರೂಪುಗೊಂಡವರು. ಆಳುವ ರಾಜರ ಪುರಸ್ಕಾರಕ್ಕಿಂತ ಅವರ ಆಶ್ರಯಕ್ಕಿಂತ ಹೆಚ್ಚಾಗಿ ಮುಕ್ತವಾಗಿ ಇರಬಯಸಿದವರು ತತ್ವಪದಕಾರರು.

ದೇವದುರ್ಗದ 'ಚೆನ್ನಮಲ್ಲ' ಕವಿಯನ್ನು ಸುರುಪುರದ ದೊರೆಗಳು ಬಹು ಗೌರವದಿಂದ ಕಾಣುತ್ತಿದ್ದರು. ಬಳಗಾನೂರು 'ಮರಿಸ್ವಾಮಿ'ಯನ್ನು ಚಾರಿತ್ರ್ಯಹೀನರೆಂದು ಕರೆದಿದ್ದ. ಇದರಿಂದ

ನ್ಯಾಯಾಲಯಕ್ಕೆ ಹೋಗುವ ಪರಿಸ್ಥಿತಿ ಉಂಟಾಯಿತು. ಈ ಆಘಾತದಿಂದ ಮರಿಸ್ವಾಮಿಗಳು ಕೆಲವೇ ದಿನಗಳಲ್ಲಿ ಕೊನೆಯಾದರು. ಇವು ಆಧುನಿಕ ಪ್ರಜಾಪ್ರಭುತ್ವ ವ್ಯವಸ್ಥೆಯ ಭಿನ್ನ ಉದಾಹರಣೆಗಳಾಗಿವೆ.

ತತ್ವಪದಕಾರರು ಸಂತ ಸಾಧುಗಳ ತತ್ವಸಿದ್ಧಾಂತಗಳನ್ನು ರಾಜಧರ್ಮವಾಗಿ ಸ್ವೀಕರಿಸಿದ್ದು, ಬಹಳ ಕಡಿಮೆ. ಬಹುಸಂಖ್ಯಾತ ಮತಗಳಿಗೆ ಮನ್ನಣೆ ಕೊಡುವ ರಾಜಕೀಯ ಭಾಗವಾಗಿ ಪ್ರಭುತ್ವವು ಇಂಥಾ ತತ್ವಪದಕಾರರ ಗೋರಿ ಗುಡಿಗಳಿಗೆ ಸಣ್ಣಪುಟ್ಟ ದೇಣಿಗೆ ನೀಡಿರಬಹುದಷ್ಟೇ ಇದು ಜನಪ್ರಿಯ ಸಂತರಿಗೆ ದೇವತೆಗಳಿಗೆ ಮನ್ನಣೆ ನೀಡಿ ಜನ ಬೆಂಬಲ ಪಡೆಯುವ ತಂತ್ರವೂ ಆಗಿತ್ತು. ಆಧುನಿಕ ರಾಜಕಾರಣದಲ್ಲಿ ಇದನ್ನು ಕಾಣುತ್ತೇವೆ. ಸ್ಥಳೀಯ ಜನಸಮುದಾಯಗಳ ಜೊತೆ ನೇರ ಸಂಬಂಧ ಇರಿಸಿಕೊಳ್ಳುವ ಮಾಂಡಲೀಕರು ಕೆಳಹಂತದ ಅಧಿಕಾರಿಗಳು, ಜಮೀನ್ದಾರರು ಇದನ್ನು ಮಾಡುತ್ತಿದ್ದರು. ಇದರಿಂದ ಇಂದಿಗೂ ತತ್ವಪದಕಾರರು ದಾರ್ಶನಿಕ ರೂಪದಲ್ಲಿ ಉಳಿಯುವ ಬದಲಾಗಿ ಆರಾಧನೆಯ ರೂಪದಲ್ಲಿ ಜನಮಾನಸದಲ್ಲಿ ಉಳಿದಿದ್ದಾರೆ. "ಇವರು ಅನುಭಾವಿಕ ವ್ಯಕ್ತಿತ್ವದಿಂದಲೇ ಜನಸಾಮಾನ್ಯರನ್ನು ಆಕರ್ಷಿಸಿದರು. ಸಮಜದಲ್ಲಿ ತುಂಬಿದ್ದ ಅರಾಜಕತೆಯನ್ನು ಕಮ್ಮಿ ಮಾಡಲು ಪರೋಕ್ಷವಾಗಿ ಕಾರಣರಾದರು. ಇವರು ಯಾವುದೇ ಜಾತಿಯಲ್ಲಿ ಹುಟ್ಟಿರಬಹುದು. ಆ ಜಾತಿ ಧರ್ಮವನ್ನು ಪ್ರಚಾರ ಮಾಡುವ ಯಾವುದೇ ಕೆಲಸಕ್ಕೆ ಕೈಹಾಕಲಿಲ್ಲ. ಅಧಿಕಾರ, ಸಂಪತ್ತು, ಭೋಗವನ್ನು ಖಂಡಿಸಿದರು ಮತ್ತು ಅಂಥ ವ್ಯವಸ್ಥೆಯನ್ನು ತಮ್ಮ ಅನುಭವದಿಂದ ನಿಯಂತ್ರಿಸಿದರು."[೯]

ತತ್ವಪದಕಾರರು ತಾವು ಹೊಂದ ಪ್ರದೇಶದ ಸಮುದಾಯಗಳಲ್ಲಿ ಸೇರಿ ಅನುಭಾವ ಹರಡಲು ಹೊದರೇ ವಿನಃ ಯಾವುದೇ ಧರ್ಮ ಪ್ರಸಾರಕ್ಕೆ ಹೋಗಲಿಲ್ಲ. ಜನ ಮಾತ್ರ ತಮ್ಮನ್ನು ಬದಲಿಸ ಬಂದವರನ್ನೇ ಬದಲಿಸಿಬಿಟ್ಟರು. ಸ್ಥಳೀಯ ಸಾಂಸ್ಕೃತಿಕ ಲಯಕ್ಕೆ ತಮ್ಮನ್ನು ಮಾರ್ಪಡಿಸಿಕೊಂಡಿರಬೇಕು. ಕರ್ನಾಟಕ ಸಂಸ್ಕೃತಿಯ ಅನೇಕ ಗುಟ್ಟುಗಳು ಇಂಥ ಕಗ್ಗಂಟುಗಳಲ್ಲಿ ಹೊಳೆಯುತ್ತವೆ. ಜನಸಮುದಾಯವು ತತ್ವಪದಕಾರರನ್ನು ಪವಾಡ ಪುರುಷರನ್ನಾಗಿ ಆರ್ಥಿಕ, ಸಾಮಾಜಿಕ ಸಂದರ್ಭದಲ್ಲಿ ಒಂದು ಪ್ರತಿಷ್ಠಿತ ಶಕ್ತಿಗಳನ್ನು ಎದುರಿಸಿ ಸೋಲಿಸುವುದು ಒಂದಾದರೆ, ಇನ್ನೊಂದು ರೋಗ, ಬರಗಾಲ, ಸಾವು, ಬಂಜೆತನ ಮುಂತಾದ ಜನತೆಯ ಕಷ್ಟಗಳಲ್ಲಿ ಬಂದು ಪರಿಹಾರ ನೀಡುವುದು.

ಜಾತ್ರೆ, ಉತ್ಸವ, ಉರುಸುಗಳಲ್ಲಿ ಸರ್ವಜಾತಿ ಅಂತಸ್ತುಗಳ ಜನ ಭಾಗವಹಿಸುವುದು ನಿಜವಾದರೂ ಸಾಮಾಜಿಕವಾಗಿ, ಆರ್ಥಿಕವಾಗಿ ಕೆಳಸ್ತರದವರೇ ಹೆಚ್ಚು. ಸಾಮಾಜಿಕ ಸ್ಥಿತಿಯ ಕಾರಣದಿಂದ ಶಿಷ್ಟ ಧರ್ಮವನ್ನು ಪಾಲಿಸಲಾಗದ ಸಮುದಾಯಗಳಿಗೆ ತತ್ವಪದಕಾರರು ಧಾರ್ಮಿಕ ಹಕ್ಕನ್ನು ಅನುಭವಿಸಲು ಪರ್ಯಾಯ ಅವಕಾಶ ಒದಗಿಸಿದರು. ಬಹುದೇವತಾರಾಧಕ ಸಂಸ್ಕೃತಿಯಲ್ಲಿ ಹಾಗೂ ಗುರುಪರಂಪರೆಯಲ್ಲಿ

ಬೆಳೆಯಲು ಕೆಲ ಸಮುದಾಯಕ್ಕೆ ಆರಾಧನೆ ಪ್ರಿಯರಾದರು. ಅನುಭಾವಿಗಳು ಉಗ್ರವಿಚಾರವಾದ ಬಿಟ್ಟುಕೊಟ್ಟು ದೇಶೀಯ ನೆಲೆಗಳತ್ತ ನೋಡಿದರು. ಇದರ ಪರಿಣಾಮವಾಗಿ ಹುಟ್ಟಿದ ಸಂವೇದನೆಗಳು ಭಿನ್ನವಾದ ಸಾಂಸ್ಕೃತಿಕ ಹೊಣೆಗಾರಿಕೆಯನ್ನು ರೂಪಿಸಿದವು. ಸಮುದಾಯದ ಭಾಗವಾಗಿ ಸೃಷ್ಟಿಸಿರುವ ಜಾತ್ಯಾತೀತ ಸಂಸ್ಕೃತಿಯ ಜತೆ ಸಂವಾದ ಮಾಡುವುದು ಹಾಗೂ ಆ ಮೂಲಕ ವರ್ತಮಾನದ ಮತೀಯವಾದಿ ರಭಸಗಳನ್ನು ಎದುರಿಸಲು ಬೇಕಾದ ಪರ್ಯಾಯ ಮನಸ್ಸನ್ನು ಕಟ್ಟುವುದು ಇವರ ಹಂಬಲವಾಗಿತ್ತು.

ಸಾಮಾಜಿಕ ಶ್ರೇಣಿಕರಣದ ಹಿನ್ನೆಲೆಯಲ್ಲಿ ಹುಟ್ಟುವ ಕೆಲವು ಪಂಥಗಳು ಸಮಾನತೆಯ ಆಶಯವನ್ನು ಇಟ್ಟುಕೊಂಡಿರುತ್ತವೆ. ತತ್ವಪದಕಾರರು ವರ್ಣಭೇದವನ್ನು ಕಟುವಾಗಿ ನಿರಾಕರಿಸುವ ಮೂಲಕ ತಮ್ಮ ಕಾಲಮಾನದ ಒತ್ತಡಗಳನ್ನು ನಿವಾರಿಸುತ್ತಾರೆ. ಸಮಾಜದ ಬಹುತೇಕ ಕೆಳಜಾತಿಗಳು ಹಾಗೂ ಕಸುಬುದಾರ ಸಮುದಾಯಗಳು ತಮ್ಮ ಅಸ್ಮಿತೆಯನ್ನು ಕಂಡುಕೊಂಡವು. ಇದಕ್ಕೆ ಅನುಭಾವಿಗಳು ಆಧ್ಯಾತ್ಮಿಕ ಮಾರ್ಗವನ್ನು ಹಿಡಿದರು. ಗ್ರಾಮೀಣ ಬದುಕಿನ ಆಚಾರ ವಿಚಾರಗಳನ್ನು ತಮ್ಮ ಅವಿಭಾಜ್ಯ ಅಂಗವೆಂದು ಖಚಿತತೆಯಿಂದ ಅಭಿವ್ಯಕ್ತಿಪಡಿಸಿದರು.

ಈ ಜಗತ್ತು ಒಂದು ಕಾಡು. ಆ ಕಾಡಿನಲ್ಲಿ ಸಾಂಸ್ಥಿಕ ಧರ್ಮದವರು ಒಂದು ಜಾತಿಯ ಮರವಾದರೆ ತತ್ವಪದಕಾರರು ಎಲ್ಲ ಜಾತಿಯ ಮರಗಳನ್ನೂ ಹೊಟ್ಟೆಯಲ್ಲಿಟ್ಟುಕೊಂಡ ಒಂದು ಕಾಡು. ಇದು ಒಂದು ಜೀವಂತ ಪರಂಪರೆ. ತತ್ವಪದಗಳು ಒಂದು ಕಾವ್ಯ ಪ್ರಕಾರವಲ್ಲ. ಅದೊಂದು ಸಂಸ್ಕೃತಿ ಆಚರಣೆ. ಯಾಕೆಂದರೆ ಅದಕ್ಕೆ ಒಂದು ಸಾಮೂಹಿಕ ಚಹರೆಯಿದೆ. ಸಂಗಿತ, ಹಾಡುಗಾರಿಕೆ, ತಾತ್ವಿಕತೆ, ಧೂಪದೀಪಗಳು ಎಲ್ಲವೂ ಅದರಲ್ಲಿ ಕೂಡಿಕೊಳ್ಳುತ್ತವೆ. ಜೊತೆಗೆ ಅದಕ್ಕೊಂದು ಪವಿತ್ರ ಭೂಗೋಳವಿದೆ. ಅದು ನಡೆಯುವುದು ಸಂತರ ಸನ್ನಿಧಿಯಲ್ಲಿ, ಗದ್ದುಗೆಯಲ್ಲಿ, ದೇವಸ್ಥಾನದ ಹಜಾರದಲ್ಲಿ. ಮೇಲು ಅಥವಾ ಕೆಳ ಸಾಂಸ್ಕೃತಿಕ ಆಚರಣೆ ನಂಬಿಕೆಗಳ ವಿಷಯದಲ್ಲಿ ನಮ್ಮ ಅನುಭಾವಿಗಳು ಸಮುದಾಯದ ವಿವಿಧ ಧರ್ಮದ ಜನರನ್ನು ಒಟ್ಟಾಗಿ ಕಂಡಿದ್ದಾರೆ. ಇವರು ಮೇಲೆ ಕೆಳ ಸಂಸ್ಕೃತಿಗಳ ಸಂಕೇತಗಳ ವಿಚಾರದಲ್ಲಿ ಸ್ವೀಕಾರಭಾವವನ್ನು ತಾಳಿ ಆ ಎಲ್ಲ ಬಾಹ್ಯ ಆಚರಣೆಗಳ ವೈವಿಧ್ಯದಲ್ಲಿ ಅಂತರಂಗದ ಅನುಭಾವದ ಏಕತೆಯನ್ನು ಹುಡುಕುತ್ತಾರೆ.

ಗ್ರಾಮೀಣ ಬದುಕಿನ ಆಚಾರ ವಿಚಾರಗಳನ್ನು ತಮ್ಮ ಬದುಕಿನ ಅವಿಭಾಜ್ಯ ಅಂಗವೆಂದು ಖಚಿತತೆ ಯಿಂದ ಅಭಿವ್ಯಕ್ತಿಸುತ್ತಾರೆ. ಇದೇ ಜನಪದರ ಸಾಂಸ್ಥಿಕ ರೂಪವಾಗಿ ಜಾತ್ರೆ, ಉತ್ಸವ, ಹಬ್ಬಗಳಾಗಿ ನೃತ್ಯ, ಬಜನೆ ಮಾಡುವ ಸಾಂಸ್ಕೃತಿಕ ಪ್ರಕ್ರಿಯೆಯನ್ನು ಕಾಣಬಹುದು. ಸಾಂಸ್ಕೃತಿಕ ಪರಂಪರೆ ಚಲನಶೀಲ ವಾದದ್ದು. ಚಾರಿತ್ರಿಕ ದೃಷ್ಟಿಯಿಂದ ಅದರ ಚಲನೆಯನ್ನು ಎಲ್ಲಾ ಮಿತಿಗಳೊಂದಿಗೆ ನಾವು ಗಂಭೀರವಾಗಿ

ಪರಿಗಣಿಸುತ್ತೇವೆ. ಆದರೆ ಯಾವುದೇ ಮೌಲ್ಯಗಳು ನಂಬಿಕೆ ವಿಚಾರಗಳು ಸಮಕಾಲೀನ ಸಂದರ್ಭದಲ್ಲಿ ಅರ್ಥ ಕಳೆದುಕೊಂಡಾಗ ಸ್ಥಗಿತಗೊಳ್ಳುತ್ತವೆ.

## ೬.೪. ಆರ್ಥಿಕಾವರಣ

ತತ್ವಪದಕಾರರ ಆರ್ಥಿಕತೆ ಎಂದರೆ ಇವತ್ತಿನ ಬಂಡವಾಳಶಾಹಿ ಮನೋಧರ್ಮದಿಂದ ಅರ್ಥೈಸುವಂಥಾದ್ದಲ್ಲ. ಅದು ಹಣ ವಿನಿಮಯ ಸ್ವರೂಪಕ್ಕಿಂತ ಭಿನ್ನವಾದ ವಸ್ತುವಿನಿಮಯ, ಸಾಮಗ್ರಿ ವಿನಿಮಯ ಸ್ವರೂಪದ್ದು. ಉಪಜೀವನ ಹಾಗೂ ಉತ್ಪಾದನಾ ಸ್ವರೂಪದ್ದು, ತತ್ವಪದಕಾರರು ಒಂದೇ ಸಾಮಾಜಿಕ ಹಿನ್ನೆಲೆಯಿಂದ ಬಂದವರಲ್ಲ. ಕಾರಣ ಅವರ ಬದುಕು ಮಠಗಳ ಗದ್ದುಗೆಗಳ ಅಸ್ತಿತ್ವ, ಜನರ ಭಾವುಕ ಶ್ರದ್ಧೆ, ಭಕ್ತಿ ಇವೆಲ್ಲವೂ ಸಮಾಜದ ಮೂರ್ತವಾದ ಆರ್ಥಿಕ ಚಟುವಟಿಕೆಗಳ ಜೊತೆಗೆ ದಟ್ಟ ಸಂಬಂಧವನ್ನು ಹೊಂದಿವೆ. ಜಾತ್ರೆ, ಕೃಷಿ, ಹಬ್ಬ, ವ್ಯಾಪಾರ, ಆರಾಧನೆ, ಆಚರಣೆ ಇವೆಲ್ಲಾ ಆರ್ಥಿಕ ಪರಿಕಲ್ಪನೆಯಾದರೂ ಒಂದರೊಳಗೊಂದು ಬೆರತಂಥವು. ಕೆಲವೊಂದು ಸಂತರ ಗದ್ದುಗೆಗಳಿಗೆ ಅರ್ಪಿಸುವ ಹಾಲು, ತುಪ್ಪ, ಜೇನು, ಹೂವು, ಹಣ್ಣು, ಅನ್ನ, ಕಾಳು, ದನ ಇಂತಹ ಸಂಗತಿಗಳು ಕೃಷಿ ಹಾಗೂ ಜಾನುವಾರು ಸಂಸ್ಕೃತಿಗೆ ಸಂಬಂಧಪಟ್ಟಂಥವು. ಕಾರಣ ಜನರ ಭಕ್ತಿ ಶ್ರದ್ಧೆಗಳೇ ಸತ್ಯ ಒಂದು ಬಗೆಯದಾದರೆ ಅವರ ದುಡಿಮೆಯ ಮೇಲೆ ತತ್ವಪದಕಾರರಂಥ ಸಾಧು ಸಂತರ ಅಸ್ತಿತ್ವ ನಿಂತಿದೆ ಎನ್ನುವುದು ಇನ್ನೊಂದು ಸತ್ಯವಾಗಿದೆ. ತತ್ವಪದಕಾರರು ಕರ್ನಾಟಕದ ಬೇಸಾಯ ನೇಕಾರಿಕೆ, ಪಶುಪಾಲನೆ, ವ್ಯಾಪಾರ, ಕರಕುಶಲ ಕಲೆಗಳು ಮುಂತಾದ ಅನೇಕ ದುಡಿಮೆಯ ಕೆಲಸಗಳ ಜತೆಗೆ ಬೆಸೆದುಕೊಂಡಿದ್ದಾರೆ.

ರಾಯಚೂರು ಜಿಲ್ಲೆಯ ತತ್ವಪದಕಾರರು ಅತ್ಯಂತ ಹೆಚ್ಚು ಸಂಬಂಧ ಹೊಂದಿರುವುದು ಭೂಮಿ ಹಾಗೂ ಕೃಷಿ ಸಂಸ್ಕೃತಿಯ ಜೊತೆಗೆ. ಅನೇಕ ಹಳ್ಳಿಗಳಲ್ಲಿ ಇಂಥ ಸಂತರ ಮಠಗಳಿಗೆ ಭೂದಾನ ಜಲದಾನ ಮಾಡಿದ ವಿವರಗಳು ಸಿಗುತ್ತವೆ. ತತ್ವಪದಕಾರ್ತಿಯಾದ 'ಹನುಮಂತವ್ವ'ನ ಆಶ್ರಮಕ್ಕೆ ಆಡೋನಿ ಭಕ್ತೋರ್ವಳು ೪ ಎಕರೆ ೩೦ ಗುಂಟೆ ಭೂಮಿಯನ್ನು ದಾನ ಮಾಡಿದ್ದಾಳೆ. ಲಿಂಗಸೂಗುರಿನ ಐದನಾಳ ಗ್ರಾಮದ ಭಕ್ತರು ನೀರಲಕೇರಿ ಬಸವಲಿಂಗರ ಕಾರ್ತಿಕ ಮಾಸದಲ್ಲಿ ಜಾತ್ರೆಯನ್ನು ಆಚರಿಸುವುದರೊಂದಿಗೆ ಶತಮಾನೋತ್ಸವವನ್ನು ಆಚರಿಸುವುದು ತಿಳಿದುಬರುತ್ತದೆ. ಐದನಾಳು ಗ್ರಾಮದ ಭಕ್ತರು ಬಸವಲಿಂಗಪ್ಪರ ಗದ್ದುಗೆಗೆ ಇಲ್ಲಿಯ ಜನರು ಊರ ಹೊರಗೆ ಜಾಗ ಕೊಟ್ಟು ೪ ಎಕರೆ ಭೂಮಿಯನ್ನು ದಾನ ಮಾಡಿದ್ದಾರೆ. ಅಮಾವಸ್ಯೆ ಅಥವಾ ಜಾತ್ರೆಯ ಸಮಯದಲ್ಲಿ ಬಂದ ಭಕ್ತಾದಿಗಳು ಹಣ ಅಥವಾ ದವಸ ಧಾನ್ಯಗಳನ್ನು ಅರ್ಪಿಸಿ ಕೃತಾರ್ಥರಾಗಿದ್ದನ್ನು ಕಾಣಬಹುದು. ಬಲರಾಮಪ್ಪನ ದೇವಸ್ಥಾನಕ್ಕೆ ಅಡಿತಿ ಅಂಗಡಿ ವ್ಯಾಪಾರದ ಮಳಿಗೆಗಳಿಂದ ಬಾಡಿಗೆಗೆ ಬರುತ್ತದೆ.

ತತ್ವಪದಕಾರರ ವ್ಯಕ್ತಿತ್ವದ ಹಿಂದಿನ ಉತ್ಪನ್ನವು, ಆರ್ಥಿಕ ಸ್ಥಿತಿಗತಿಗಳು, ಭಕ್ತ ಜನತೆಯ ಆಕಾಂಕ್ಷೆಯ ಮೇರೆಗೆ ಪರಸ್ಪರ ತಿಳುವಳಿಕೆಯ ವಿಚಾರ ವಿನಿಯಮವಾಗಿವೆ ಎಂದು ಹೇಳಬಹುದು. ಕಾಳು ಅನ್ನವಾಗಿ ದಾಸೋಹವಾಗಿ, ದಾಸೋಹ ತಿರುಗಿ ಕಾಳಾಗಿ ಬಾಳಾಗುವ ಸ್ವರೂಪದ್ದು, ಭೂಮಿ ಹಾಗೂ ಬಾಳಿಗೂ ಅಭಿನ್ನವಾದ ಉತ್ಪಾದಿತ ಸಂಬಂಧವನ್ನು ಇಲ್ಲಿ ಕಾಣುತ್ತೇವೆ. ನೀರು ಆವಿಯಾಗಿ ಮೋಡವಾಗಿ ಮತ್ತೆ ನೀರಾಗಿ ಹೇಗೆ ಬಂದು ಆವರ್ತನಾಶೀಲವಾದ ಸಂಸ್ಕೃತಿಯನ್ನು ನಿರ್ಮಿಸುತ್ತದೋ ಅಂಥಾ ಒಂದು ಸಂಬಂಧವನ್ನು ತತ್ವಪದಕಾರರಲ್ಲಿ ಕಾಣುತ್ತೇವೆ. ಮಂದಕಲ್ ಭೀಮಲಿಂಗಪ್ಪನಲ್ಲಿ ಹೀಗಿದೆ.

"ಹಸಿನೋಡಿ ಬಿತ್ತ ಬೇಕು ಗಟ್ಟಿ ಬೀಜ
ದಿನ ದಿನ ಬೆಳೆಯುವುದೆಂಥಾ ತೇಜಾ
ಕಸ ಕಳೆ ಕಿತ್ತೆಹಾಕಬೇಕು ಅರಿವಿನ
ಮನು ಜಾ ಮರೆಯದಂತೆ ನೀ ನೋಡಿ
ಬೆಳೆಯೋ"[೧೦]

ಇಲ್ಲಿನ ಭೂಮಿ ಬೆಳೆಯಂಥ ಸಾವಯಾವ ಸಂಬಂಧಗಳು ಬರೀ ಕೃಷಿ ಚಟುವಟಿಕೆಗಳಾಗದೆ ಸಮುದಾಯದ ಪ್ರಜ್ಞಾ ಭಾಗಗಳಾಗಿ ಕಾಣುತ್ತವೆ. ಅಂದರೆ ಉತ್ತಮ ಕೃಷಿಯಿಂದ ಉತ್ತಮ ಬದುಕು ಉತ್ತಮ ಬದುಕಿನಿಂದ ಉತ್ತಮ ಸಮಾಜದಂಥಹ ಸ್ವಾನುಭವ ಸಂವೇದನೆಗಳನ್ನು ಕಾಣುತ್ತೇವೆ. ತತ್ವಪದಕಾರರ ಆರ್ಥಿಕ ಚಿಂತನೆಗಳಿಂದ ಪರಾವಲಂಭಿತನವನ್ನು ಬಯಸದ ಸ್ವನಿರ್ಮಿತ ಸ್ವಾವಲಂಭ ಸ್ವರೂಪಮುಖಿ ಚಿಂತನೆಗಳಾಗಿವೆ. ಕೂಡಲೂರು ಬಸವಲಿಂಗಪ್ಪನು ಹೇಳುವಂತೆ

"ಒಕ್ಕಲು ಮಗ ಒಳ್ಳೆಯನಮ್ಮ ಈತ
ಮುಕ್ಕಣ್ಣ ಶಿವನೆಂದು ತಿಳಿದುಕೊಳ್ಳಮ್ಮ
ನಾನೆಂಬೊ ಅಹಂಕಾರದ ಕಠಿಣದ ಭೂಮಿಗೆ
ತಾನೊಂದು ನೇಗಿಲು ಹೂಡಿದನಮ್ಮಾ"[೧೧]

ಎನ್ನುವಲ್ಲಿ ಸ್ವಾವಲಂಭಿಯಾದ ಅಂತಃಸತ್ವವುಳ್ಳ ಬಾಹ್ಯ ಹಾಗೂ ಆಂತರಿಕ ಕೃಷಿಯನ್ನು ವಿಶ್ಲೇಷಿಸುತ್ತಾನೆ. ಬಹಳಷ್ಟು ತತ್ವಪದಕಾರರು ಜಾತ್ರೆ ಉತ್ಸವಗಳಲ್ಲಿ ಕಾಲಜ್ಞಾನದ ಹೇಳಿಕೆಗಳು ಬಲಿಕೊಡುವ ಬೂದಿ ನೀಡುವ ಸಂಪ್ರದಾಯಗಳು ಫಲವಂತಿಕೆಯ ಪ್ರತೀಕವಾಗಿವೆ. ಹೀಗೆ ಕೆಲವು ತತ್ವಪದಕಾರರು ಪಶುಸಂಸ್ಕೃತಿಯ ಬಗ್ಗೆ ಮಾತನಾಡುವುದು ಕಾಣುತ್ತದೆ. ತತ್ವಪದಕಾರರ ತಿರುಗಾಟದ ಗುಣವೂ ಇದರಲ್ಲಿ ಒಂದು. ತಮ್ಮ ನೆಲೆಗೆ ತಕ್ಕ ಭಾಗ ಅಥವಾ ಗುರುವನ್ನು ಅರಸುತ್ತಾ ಹೋಗುವುದು, ತಕ್ಕ ಸ್ಥಾನ ದೊರೆತಾಗ ನೆಲೆ ನಿಲ್ಲುವುದು, ಅಲ್ಲಿ ತಮ್ಮ ಆಧ್ಯಾತ್ಮಿಕ ಅನುಭವವನ್ನು ಹುರಿಗೊಳಿಸಿಕೊಳ್ಳುವುದಲ್ಲದೆ ಸಾಮಾಜಿಕ

ಕಳಕಳಿಯನ್ನು ತೋರುವುದು. ಅದನ್ನು ಜಾಗೃತ ಪ್ರಜ್ಞೆಯನ್ನಾಗಿ ಮಂಡಿಸುವ ವಿಚಾರಗಳು ಅವರನ್ನು ಪಾಲನಾಸ್ಪದಾನ ಹಾಗೂ ಸ್ವಾವಲಂಭಿ ಆರ್ಥಿಕ ಚಿಂತನೆಗಳ ಫಲಿತವಾಗಿದೆ.

ಇದು ಅಲ್ಲದೆ ನೇಕಾರಿಕೆ, ವ್ಯಾಪಾರ, ಕರಕುಶಲ, ವಸ್ತುಗಳ ಉತ್ಪಾದನೆ, ಗುಡಿಕೈಗಾರಿಕೆ ಹಿನ್ನೆಲೆಯಿಂದ ಬಂದ ತತ್ವಪದಕಾರರ ಸಂವೇದನೆಗಳು ಆರ್ಥಿಕವಾದ ಸಬಲತೆಯನ್ನು ಸಮುದಾಯಗಳಿಗೆ ನೀಡುವುದೇ ಆಗಿತ್ತು. ಹೀಗಿದ್ದರೂ ಇಂಥಾ ಸಾಧು ಸಂತರ ಮಠಗಳು ವ್ಯಾಪಾರಿ ಮಾರ್ಗವನ್ನು ರಾಜಕೀಯ ನೆಲೆಗಳನ್ನು ಆಕರ್ಷಿಸುತ್ತಿವೆ. ರಾಜಕೀಯ ಭವಿಷ್ಯವನ್ನು ತೀರ್ಮಾನ ಮಾಡುವ ಉಪಜಾತಿಗಳನ್ನು ಸಂಘಟಿಸುವ ಸಂಕುಚಿತ ಫಲಾಪೇಕ್ಷೆಗಳು ಪ್ರಸ್ತುತ ದಿನಗಳಲ್ಲಿ ಪ್ರಧಾನವಾಗಿ ಗುರುತಿಸಿಕೊಂಡಿವೆ. ಆದರೆ ವೈಯಕ್ತಿಕ ಸಾಧನೆಯ ಮೂಲಕ ಬಿಡುಗಡೆಯಾಗಬೇಕು, ಮೋಕ್ಷ ಹೊಂದಬೇಕು ಎಂದು ಹೇಳುವ ತತ್ವಪದಕಾರರಿಗೆ ಇಂಥಾ ಆಕರ್ಷಣ ಗುಣ ಕಡಿಮೆ ಎಂದೇ ಹೇಳಬಹುದು.

ಪರಂಪರೆಯಲ್ಲಿ ಶ್ರಮ ಹಾಗೂ ಸ್ವಾವಲಂಭಿ ಗುಣಕ್ಕಿಂತ ಶ್ರಮವಿಲ್ಲದ ಹಾಗೂ ಪರಾವಲಂಬಿ ಗುಣ ಹೆಚ್ಚು ಮಂಜೂರಿಗೆ ಬಂದದ್ದು, ಪ್ರಾಶಸ್ತ್ಯ ಪಡೆದದ್ದು ಎದ್ದು ಕಾಣುತ್ತದೆ. ಇಂದು ಚಿಕ್ಕ ಪುಟ್ಟ ಶಾಲೆಗಳು ಸಹಿತ ತಮಗೆಂದು ಮಠ ಕಟ್ಟಿಕೊಂಡು ಅದಕ್ಕೊಂದು ಗುರುವನ್ನು ನೇಮಿಸಿಕೊಂಡು ಸಾಮಾಜಿಕ ಸಂಘಟನೆ ಮಾಡಿ ಅದನ್ನು ಆಧುನಿಕ ರಾಜಕಾರಣದೊಂದಿಗೆ ಸಮೀಕರಿಸಿ ಲೌಕಿಕ ಪ್ರಯೋಜನ ಪಡೆಯುತ್ತಿರುವ ನಿದರ್ಶನಗಳು ನಮ್ಮ ಕಣ್ಣ ಮುಂದಿವೆ. ಇಂದು ತತ್ವಪದಕಾರರಿಗೆ ಸಂತರಿಗೆ ಪರಾಮಾರ್ಥಿಕವಾದ ಹಾಗೂ ಧಾರ್ಮಿಕವಾದ ಅಸ್ತಿತ್ವ ಸಿಗುವುದಕ್ಕಿಂತಲೂ ಹೆಚ್ಚಾಗಿ ಲೌಕಿಕವಾದ ಅಸ್ತಿತ್ವಗಳು ಸಿಗುತ್ತಿವೆ. ಖ್ವಾಜಾ ಬಂದೇ ನವಾಜ್, ತಿಂಥಿಣಿ ಮೋನಪ್ಪಯ್ಯನವರಂತ ಶಾಶ್ವತ ಜಾಗಗಳು ಅವರ ಸಂತ ತನಕ್ಕಾಗಿ ಮುಂಚೂಣಿಗೆ ಬರದೆ ಸಮಕಾಲೀನ ಆರ್ಥಿಕ, ಧಾರ್ಮಿಕ, ರಾಜಕಾರಣದ ಭಾಗಗಳಾಗಿ ನಿರ್ವಚನಗೊಳ್ಳುತ್ತಿವೆ. ದಮನಿತ ವರ್ಗಗಳ ಧ್ವನಿಯಾಗಿ ಹುಟ್ಟಿದ ಇಂಥಾ ಸಂತ ಸಾಧು ಅನುಭಾವಿಗಳ ಪರಂಪರೆಗಳು ಅವರ ಅನುಯಾಯಿಗಳು ಇಂದು ತುರೀಯ ವ್ಯವಸ್ಥೆಯ ಮೂಲಕ ಪ್ರಗತಿ ಪಡೆಯಲು ಯೋಚಿಸುತ್ತಿರುವುದು ಪ್ರಜಾಪ್ರಭುತ್ವದ ವ್ಯಂಗವೇ ಆಗಿದೆ.

**ಅಡಿಟಿಪ್ಪಣಿಗಳು**

೧. ಬಸವರಾಜ ಸಬರದ(ಸಂ), ೨೦೦೦, **ಹೈದ್ರಾಬಾದ್ ಕರ್ನಾಟಕದ ತತ್ವಪದಗಳು,** ಪು.೧೩೦

೨. ಅದೇ,

೩. ರಹಮತ್ ತರೀಕೇರಿ, ಮುಸ್ಲಿಂ ತತ್ವಪದಕಾರರು ಹೀಗೆನ್ನಲು ಏಕೆ ಕಷ್ಟವಾಗುತ್ತದೆ.

೪. ವಡಿಕೆ ತಾತಪ್ಪಯ್ಯ, ೧೯೫೭, **ಅಮೃತ ಶಿಖಾಮಣಿ,** ಪು.೧೦೯

೫. ಅಮರೇಶ ನುಗುಡೋಣಿ, ೧೯೯೯, **ನುಡಿವ ಬೆಡಗು,** ಪು.೪೫

೬. ನಲವಡಿ ಶ್ರೀಕಂಠ ಶಾಸ್ತ್ರಿಗಳು, ೧೯೯೮, ಹೈದ್ರಾಬಾದ್ ಕರ್ನಾಟಕದ ರಜಾಕಾರರ ಲಾವಣಿಗಳು, ಪು.೭

೭. ಶಾಂತರಸರು, ೧೯೭೩, ಎಡೆದೊರೆ ನಾಡಿನ ಅನುಭಾವ ಕವಿಗಳು

೮. ಬಸವರಾಜ ಸಬರದ, ಪೂರ್ವೋಕ್ತ, ಪು.೧೩೦

೯. ಅಮರೇಶ ನುಗಡೋಣಿ, ೧೯೫೭, ಪೂರ್ವೋಕ್ತ, ಪು.೧೪

೧೦. ಮಂದಕಲ್ ಭೀಮಲಿಂಗಪ್ಪ ಅಪ್ರಕಟಿತ

೧೧. ಬಸವರಾಜ ಸಬರದ, ಪೂರ್ವೋಕ್ತ, ೧೧೪

೭

# ಅಧ್ಯಯನದ ಫಲಿತಗಳು

ರಾಯಚೂರು ಜಿಲ್ಲೆಯಲ್ಲಿ ಬದುಕಿ ಹೋದ ಸುಮಾರು ೩೦ ಜನ ತತ್ವಪದಕಾರರನ್ನು ಈ ಪ್ರಬಂಧದದಲ್ಲಿ ಅಧ್ಯಯನಕ್ಕೆ ಅಳವಡಿಸಲಾಗಿದೆ. ತತ್ವಪದಕಾರರು ಸ್ವಭಾತಃ ಯಾವುದೇ ರೀತಿಯ ಅಕಾಡೆಮಿಕ್ ಆದ ಕಾಲ್ಪನಿಕ ವಿಂಗಡನೆಗಳಿಗೆ ಒಗ್ಗುವುದಿಲ್ಲ. ಆದರೆ ನನ್ನ ಅಧ್ಯಯನದ ಸುಸೂತ್ರತೆ ಹಾಗೂ ಖಚಿತತೆಗೋಸ್ಕರ ಒಂದು ಸೀಮಾ ರೇಖೆಯನ್ನು ಇಲ್ಲಿ ನಾನು ಹಾಕಿಕೊಂಡಿರುವುದು ಅಗತ್ಯ ವೆನಿಸುತ್ತದೆ. ಆದರೂ, ಎಷ್ಟೋ ಸಂದರ್ಭದಲ್ಲಿ ಇದನ್ನು ಮೀರಿ ತತ್ವಪದಕಾರರನ್ನು ವ್ಯಾಖ್ಯಾನಿಸಲಾಗಿದೆ.

ರಾಯಚೂರು ಜಿಲ್ಲೆಯಲ್ಲಿ ಕಾಣಿಸುವ ಹೆಚ್ಚಿನ ತತ್ವಪದಕಾರರು ಸ್ವಭಾತಃ ಕೆಳವರ್ಗಗಳಿಂದ ಬಂದವರಾಗಿದ್ದಾರೆ. ಇಲ್ಲಿ ಕಾಣುವ ಸೂಫಿಗಳು, ಆರೂಢರು, ಅವಧೂತರು, ದರ್ವೇಶಿಗಳು ಸಾಧು ಸನ್ಯಾಸಿಗಳು ರೂಢಿಗೊಂಡ ಸಾಮಾಜಿಕ ಹಾಗೂ ಧಾರ್ಮಿಕ ಪರಿಧಿಗಳನ್ನು ಮೀರಿ ನಿಂತವರು. ಹಾಗೆಯೇ ಬದುಕಿ ತೋರಿಸಿ, ಅದನ್ನೇ ತಮ್ಮ ಹಾಡುಗಳಲ್ಲಿ ಪ್ರತಿಪಾದಿಸಿದವರು. ಒಂದು ರೀತಿ ಶೋಷಿತ ಜನಗಳ ತಣ್ಣನೆಯ ಪ್ರತಿಭಟನೆಗಳಾಗಿ ಇವರ ಹಾಡುಗಳು ಹುಟ್ಟಿಬಂದಂತವು. ವ್ಯವಸ್ಥೆಯ ಎಲ್ಲಾ ಅಸಂಗತತನಗಳಿಗೆ ತಮ್ಮ ಈ ನಾದಮಯ ಹಾಡುಗಳ ಮೂಲಕ ಪ್ರತಿಕ್ರಿಯೆ ತೋರಿಸಿದವರು. ಇಂತಹ ನೆಲೆಗಳೇ ವೈವಿಧ್ಯಮಯ ತಾತ್ವಿಕ ಅಭಿವ್ಯಕ್ತಿಗಳಿಗೆ ಪ್ರೇರಣೆಯನ್ನು ಒದಗಿಸಿದವು. ಅವರ ಹಾಡುಗಳ ಗೇಯ ಗುಣವೇ ಅವರನ್ನು ಸುತ್ತಲಿನ ಸಮಾಜದೊಂದಿಗೆ ನಿಖಟತೆಯನ್ನ ಸಾಧಿಸಿಕೊಳ್ಳಲು ಕಾರಣವಾಯಿತು. ಹೀಗೆ ಕಾರಣವಾದ ಸಂಗತಿಗಳ ಕುರಿತು ಇಲ್ಲಿ ಚರ್ಚಿಸಲಾಗಿದೆ.

ರಾಯಚೂರು ಜಿಲ್ಲೆಯ ತತ್ವಪದಕಾರರ ಹಾಡುಗಳಲ್ಲಿ ಬಹುಮುಖ್ಯವಾಗಿ ಕಾಣುವ ವಿಶಿಷ್ಟ ಸಂಗತಿ ಎಂದರೆ ಪಾರಂಪರಿಕ ಮೌಲ್ಯಗಳ ಅಪವರ್ಗೀಕರಣ. ಗುರು, ಲಿಂಗ, ಜಂಗಮ, ಸತಿ ಪತಿ, ಅನುಭಾವ ಮುಂತಾದ ಪಾರಂಪರಿಕ ದಾರ್ಶನಿಕ ಪರಿಕಲ್ಪನೆಯ ನೆಲೆಗಳನ್ನು ಪುನರ್ ವ್ಯಾಖ್ಯಾನಕ್ಕೆ ಗುರಿ ಮಾಡಿದರು. ಭಕ್ತನನ್ನು ವ್ರತ ಪ್ರಧಾನವಾಗಿ ಕಾಣುವುದಕ್ಕಿಂತ ಭಿನ್ನವಾಗಿ ಕ್ರಿಯೆ ಪ್ರಧಾನವಾಗಿ ಗುರುತಿಸಿದರು. ಅಂದರೆ ಅರಿವು ಮತ್ತು ಕ್ರಿಯೆಗಳ ಸಾಂಘೀಕರಣವನ್ನು ಪ್ರತಿಪಾದಿಸಿದರು. ಅದನ್ನು ಜೀವನದ ಮೌಲ್ಯವಾಗಿಸಿದರು.

ಸಾಮಾನ್ಯವಾಗಿ ತತ್ವಪದಗಳನ್ನು ಸ್ವರವಚನ ಹಾಗೂ ಕೈವಲ್ಯ ಪದಗಳ ಒಡಲಿನಿಂದ ನಿಷ್ಪನ್ನಗೊಂಡವು ಎಂದು ವ್ಯಾಖ್ಯಾನಿಸಿದ್ದುಂಟು. ರಾಯಚೂರು ಜಿಲ್ಲೆಯ ಒಟ್ಟು ತತ್ವಪದಕಾರರ ಅಭಿವ್ಯಕ್ತಿಯ ನೆಲೆಗಳನ್ನು ಗಮನಿಸಿದಾಗ ಸ್ವರವಚನಗಳಿಗಿರುವಂತಹ ನಿರ್ದಿಷ್ಟ ಗುಣಲಕ್ಷಣಗಳು ಹಾಗೂ ಶ್ರೇಷ್ಠತೆ ಪ್ರಧಾನವಾಗಿರತಕ್ಕಂತಹ ರಾಗ ಲಕ್ಷಣಗಳ ಗೊಡವೆ ಇಲ್ಲಿಲ್ಲ. ಹೀಗಾಗಿ ಈ ಸ್ವರೂಪದ ಸಾಹಿತ್ಯಕ್ಕಿಂತ ಭಿನ್ನವಾದ ಹಾಗೂ ವಿಭಿನ್ನ ಉದ್ದೇಶವನ್ನು ಹೊಂದಿರುವ ಹಾಡುಗಳಾಗಿವೆ. ಸ್ವರವಚನಗಳಂತೆ ವೈರಾಗ್ಯ ಪರವಾದ ತತ್ವಗಳನ್ನು ಹೇಳದೆ ಜನಮುಖಿ ಎನಿಸುವ ಹಾಗೂ ಜೀವ ಪರವಾದ ಒಂದು ಅರ್ಥಪೂರ್ಣ ಭಾವನೆಗಳನ್ನು ಇವು ಹೊಂದಿವೆ. ಸ್ವರವಚನಕಾರರು ತತ್ವಕ್ಕಾಗಿ ಹಾಡಿದರೆ, ತತ್ವಪದಕಾರರು ಸ್ವ ಸಂತೋಷಕ್ಕಾಗಿ, ಆತ್ಮವಿಮರ್ಶೆಗಾಗಿ ನಿರಾಡಂಬರವಾಗಿ ಹಾಡಿದರು. ಇವು ಏಕತಾರಿಯಂತಹ ಲಯ ಪ್ರಧಾನ ವಾದ್ಯಕ್ಕೆ ಹೆಚ್ಚು ಹೊಂದುವ ನಾದ, ಲಯ ಪ್ರಧಾನ ಹಾಡುಗಳು. ಸ್ವರವಚನಗಳು ಮತ್ತು ಕೈವಲ್ಯ ಹಾಡುಗಳು ಶಿಷ್ಟತೆಯೆಡೆಗೆ ವಾಲಿದರೆ ತತ್ವಪದಗಳು ದೇಸೀ ಎಡೆಗೆ ಹೆಚ್ಚು ಹೊಂದುವಂತಹವು ಹಾಗೂ ಅವುಗಳಿಗಿಂತ ಭಿನ್ನವಾದಂತವು ಎನ್ನುವ ಸಂಗತಿಗಳನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ರಾಯಚೂರು ಜಿಲ್ಲೆಯಲ್ಲಿ ಕಾಣುವ ತತ್ವಪದಕಾರರು ಬಹು ಭಾಷೆ ಹಾಗೂ ಬಹು ಭಾಷಾ ಪರವಾದಂತಹ ಸಾಂಸ್ಕೃತಿಕ ಸಂಕೀರ್ಣತೆಗಳನ್ನು ಮೈಗೂಡಿಸಿಕೊಂಡವರು. ಇವರನ್ನು ಪ್ರಚಲಿತವಾಗಿರುವ ನಿರ್ದಿಷ್ಟ ಅಧ್ಯಯನ ವಿಧಾನಗಳ ಮೂಲಕ ವಿವೇಚಿಸಲು ಸಾಧ್ಯವಾಗಲಾರದು. ಬಹುಮುಖಿ ಅಧ್ಯಯನದ ಮೂಲಕ ಮಾತ್ರ ಅವರ ಒಡಲ ಸಂವೇದನೆಗಳನ್ನು ತಿಳಿದುಕೊಳ್ಳುವುದು ಸಾಧ್ಯ. ಪ್ರಸ್ತುತ ಅಧ್ಯಯನವು ಅಂತಹ ಸಾಧ್ಯತೆಯನ್ನು ಮೈಗೂಡಿಸಿಕೊಂಡು ಬೆಳೆದಿದೆ.

ರಾಯಚೂರು ಜಿಲ್ಲಾ ತತ್ವಪದಕಾರರ ಪರಂಪರೆ ಎಂದರೆ ಯುದ್ಧಗಳ ನಾಡಿನಲ್ಲಿ ವಿರಕ್ತಿಯನ್ನು ಚಿಗುರಿಸಿದ ವಿರಕ್ತಿಯೊಳಗೇ ಪ್ರಭುತ್ವವನ್ನು ಧಿಕ್ಕರಿಸುವ, ಸಶಕ್ತ ಪರಂಪರೆ. ಇಲ್ಲಿನ ಯೋಗಿಗಳು ಜನಸಮುದಾಯದಲ್ಲಿ ಮೂಡಿಸಿದ ವಿರಕ್ತಿಯು ಪಾರಂಪರಿಕ ನೆಲೆಯಲ್ಲಿ ವ್ಯಾಖ್ಯಾನಗೊಂಡ ವೈರಾಗ್ಯ ಅಥವಾ ಸನ್ಯಾಸ ಎಂಬ ಸ್ವರೂಪದ್ದಲ್ಲ. ಪ್ರಾಪಂಚಿಕ ಸುಖಗಳ ಮೇಲೆ ಅತಿಯಾದ ವ್ಯಾಮೋಹವನ್ನು ಇಟ್ಟುಕೊಳ್ಳದೆ ಬದುಕಬೇಕೆಂಬ ಧಾರಣಾಶಕ್ತಿಯುಳ್ಳದ್ದು. ಇಂತಹ ಧಾರಣಾಶಕ್ತಿಯೇ ಲೌಕಿಕವನ್ನು ಮೀರುವ ಅನುಭಾವದತ್ತ ನಡೆಯುವ ಸಾಮರ್ಥ್ಯವನ್ನು ತತ್ವಪದಕಾರರಿಗೆ ಹಾಗೂ ಅವರ ಅನುಯಾಯಿಗಳಿಗೆ ಹೇಗೆ ನೀಡಿತು ಎನ್ನುವ ದರ್ಶನವನ್ನು ಇಲ್ಲಿ ಕಾಣಲಾಗಿದೆ.

ಭೋಗ ಪ್ರಧಾನವಾದ ಪ್ರಭುತ್ವ ಶಕ್ತಿಗಳ ಮುಂದೆ ವಿರಕ್ತತನವು ದೊಡ್ಡ ಪ್ರತಿಭಟನೆಯೇ ಆಗಿದೆ. ದಾಹ ಪ್ರಧಾನ ಬದುಕಿನ ವಿಷಯ ಲೋಲುಪತೆ, ಕ್ಷಾಮ, ಸಾಂಕ್ರಾಮಿಕ ರೋಗ, ಅರಾಜಕತೆಗಳಿಂದ ಬೇಸತ್ತ ಜನರನ್ನು ಈ ನಿಲುವಿಗೆ ಪರಿವರ್ತಿಸುವುದು ಸಂತರಿಂದ ಸಾಧ್ಯವಾಯಿತು. ಆತಂಕಗೊಂಡ ಮನಸ್ಸುಗಳಿಗೆ ತಮ್ಮ ಹಾಡುಗಳ ಮೂಲಕ ಸಾಂತ್ವನಗೊಳಿಸಿದರು. ಆ ಮೂಲಕ ಸಾಂಪ್ರದಾಯಿಕವಾದ

ದಾರ್ಶನಿಕ ನೆಲೆಗಳ ಮೀರಿ ಹೊಸ ರೀತಿಯ ಸಂಚಲನೆಗೆ ಕಾರಣರಾದರು. ತತ್ವಪದಕಾರರು ದೈವದ ನೆಲೆಗಿಂತ ಆತ್ಮತತ್ವದ ವಿಕಾಸಕ್ಕಾಗಿ ಶ್ರಮಿಸಿದರು. ಗುರು ಲಿಂಗ ಎನ್ನುವ ಅವರ ದಾರ್ಶನಿಕ ಚಿಂತನೆಗಳು ಅಧೀನತೆಯನ್ನು ಮೀರುವ ಪರಿಕಲ್ಪನೆಗಳಾಗಿ ಒಡಮೂಡಿದ ರೀತಿಗಳ ಕುರಿತು ಸೂಕ್ಷ್ಮವಾಗಿ ಚರ್ಚಿಸಲಾಗಿದೆ.

ಜಿಲ್ಲೆಯ ತತ್ವಪದ ಪರಂಪರೆ ಬಹುಪಂಥೀಯ ವೈವಿಧ್ಯತೆಯಿಂದ ಕೂಡಿದ ಸಂತ ಪರಂಪರೆ ಇವರ ದಾರ್ಶನಿಕ ಬೇರುಗಳು ಒಂದು ರೀತಿಯ ಯೋಗದರ್ಶನದಲ್ಲಿವೆ. ಕ್ರಿಯೆ ಈ ಯೋಗದರ್ಶನದ ಬಹುಮುಖ್ಯ ಭಾಗ. ಜಿಲ್ಲೆಯ ಬಹಳಷ್ಟು ತತ್ವಪದಕಾರರು ಗುರುತಿಸಿಕೊಳ್ಳುವುದು ಕೃಷಿ, ವ್ಯಾಪಾರ, ನೇಕಾರಿಕೆ, ನೌಕರಿ, ಹಗ್ಗ ಹೆಣೆಯುವ ಮುಂತಾದ ದುಡಿಯುವ ಕೆಲಸಗಳ ಜೊತೆಗೆ ಇವರ ಬಗ್ಗೆ ನಡೆದ ಅಧ್ಯಯನ ಕೂಡ ಹೆಚ್ಚು ವೀರಶೈವೀಕರಣಗೊಂಡ ನೆಲೆಯದ್ದಾಗಿದ್ದರೂ, ಹಿಂದೂ ಮುಸ್ಲಿಂ ಸೌಹಾರ್ದತೆಯ ಫಲಿತಗಳೆಂಬಂತೆ ಬಿಂಬಿಸಲಾಗಿದೆ. ಸದರಿ ಅಧ್ಯಯನವು ಇವೆರಡೂ ನೆಲೆಗಳನ್ನು ಮೀರಿ ನಿಲ್ಲುವ ಪ್ರಯತ್ನ ಮಾಡಿದೆ. ಕಾರಣ ಸೂಫಿ ಮತ್ತು ಈ ಭಾಗದ ಅನುಭಾವಿಗಳ ಮಧ್ಯೆ ಹಾಗೂ ಜನಗಳ ಮಧ್ಯೆ, ನಿರಂತರ ಕೊಡುಕೊಳ್ಳುವಿಕೆಗಳುನಡೆದಿವೆ. ಬಂದೇ ನವಾಜನಿಗೆ ಸಿದ್ದಪ್ಪ ಶಿಷ್ಯನಾಗುವುದು, ತಿಪ್ಪಣ್ಣ ತಾತನಿಗೆ, ಯರ್ರಮಾರೆಪ್ಪನಿಗೆ ಚಿದಾಹುಸೇನ ಶಿಷ್ಯನಾಗುವುದು ಇಂತಹ ತಾತ್ವಿಕ ಹರಿದಾಟಗಳು ಜನಪರಂಪರೆಯ ಒಳಗೆ ಸಾಂಸ್ಕೃತಿಕ ಕೊಡು ಕೊಳ್ಳುವಿಕೆಗಳಾಗಿ ಕೆಲಸ ಮಾಡಿವೆ. ಇಂತಹ ಅನುಭಾವಿಗಳ ಚಿಂತನೆಗಳನ್ನು ಪ್ರಭುತ್ವವಾದಿ ಹಾಗೂ ರಾಷ್ಟ್ರೀಯವಾದಿ ನೆಲೆಗಳಲ್ಲಿಟ್ಟು ನೋಡಲಾಗಿದೆ. ಈ ಸಂಗತಿಗಳು ತತ್ವಪದಕಾರರ ಹಾಗೂ ಅವಹಾಡುಗಳ ಸಂಪಾದನೆ, ಪ್ರಕಟಣೆ, ಶೋಧನೆ, ವ್ಯಾಖ್ಯಾನಗಳ ಹಿಂದೆ ಕೆಲಸ ಮಾಡಿದ ರೀತಿಗಳ ಕುರಿತು ಚರ್ಚಿಸಲಾಗಿದೆ.

ತತ್ವಪದಕಾರರನ್ನು ಹೀಗೆ ಮತಧರ್ಮಗಳ ಚೌಕಟ್ಟಿಗೆ ಹೊಂದಿಸಿ ನೋಡುವ ಕ್ರಮವನ್ನು ಈ ಅಧ್ಯಯನ ಅನುಮಾನದಿಂದ ನೋಡಿದೆ. ಅನೇಕ ಅನುಭಾವಿಗಳು ಲಿಂಗಧಾರಣ ವಿರೋಧಿಗಳು, ಅಲ್ಲಮನ ಕಾಲದಿಂದಲೂ ಈ ಧಾರೆ ಬೇರೆಯಾಗಿಯೇ ಬೆಳೆದು ಬಂದಿದೆ. ತಿಂತಿಣಿ ಮೋನಪ್ಪಯ್ಯ, ಕೊಡೇಕಲ್ಲು ಬಸವಣ್ಣ, ತೋಂಟದ ಸಿದ್ಧಗ ಪರಂಪರೆಯಲ್ಲಿ ಬರುವ ಬೋಳ ಬಸವರು ಇಷ್ಟಲಿಂಗ ವಿರೋಧಿಗಳಾಗಿದ್ದರು. ಇದೊಂದು ಸಂಗತಿಯಾದರೆ ತತ್ವಪದಕಾರರನ್ನು ಮತೀಯ ಸಾಮರಸ್ಯವಾದಿಗಳೆಂದು ವ್ಯಾಖ್ಯಾನಿಸುವ ನೆಲೆ ಇದು. ಮತ್ತೊಂದು ರೀತಿಯ ಆತ್ಮರಕ್ಷಿತ ವಿಶ್ಲೇಷಣೆಯಾಗಿದೆ. ಸಾಮರಸ್ಯ ಎನ್ನುವ ಪದ ಹುಟ್ಟಿದ್ದೇ ರಾಷ್ಟ್ರೀಯವಾದಿ ಚರಿತ್ರೆ ಕಾಲಘಟ್ಟದಲ್ಲಿ. ಇಂತಹ ಕಲ್ಪಿತ ಚೌಕಟ್ಟನ್ನು ಮೀರಿ ಇಲ್ಲಿನ ತತ್ವಪದಕಾರರು ಹಾಗೂ ಜನಗಳುರ್ದು, ಕನ್ನಡ, ಹಿಂದೂ-ಮುಸ್ಲಿಂ ಎನ್ನುವ ಪರಿಕಲ್ಪನೆಗಳನ್ನು ಬದುಕಿನ ಭಾಗವಾಗಿಸಿಕೊಂಡವರು. ಇವರನ್ನು ನಿರ್ದಿಷ್ಟವಾದ ವಾದ ಅಥವಾ ಕಲ್ಪನೆಯಲ್ಲಿಟ್ಟು ಮಾಡುವ ಅಧ್ಯಯನ ಪಾರ್ಶ್ವಿಕವೆನಿಸುತ್ತ

ತತ್ವಪದಕಾರರು "ಮನಒಲಿಸುವ" ಹಾಗೂ "ತೊಡಗಿಸುವ" ಸಂಗತಿಗಳು ಒಂದು ಅನುನಯ ಮಾರ್ಗವಿರುವ ಅವರ ಸಾಮಾಜಿಕ ಕಳಕಳಿಯನ್ನು ತೋರಿಸುವಂತವಾಗಿವೆ. ಹೀಗಾಗಿ ನನ್ನ ಒಟ್ಟು ಅಧ್ಯಯನವು ತತ್ವಪದಕಾರರ ಬಗ್ಗೆ ಪ್ರಚಲಿತವಾಗಿರುವ ಅಧ್ಯಯನ ದಾರಿಗಳನ್ನು ಪುನರ್ ಪರಿಶೀಲನೆಗೆ ಒಳಪಡಿಸುತ್ತಾ ಹೊಸ ರೀತಿಯ ಕಾಣ್ಕೆಗಳತ್ತ ಸಾಗುವ ಪ್ರಯತ್ನ ಮಾಡಿದೆ. ಇದರಿಂದ ತತ್ವಪದಕಾರರನ್ನು ಬಹುಕೋನದಿಂದ ಅಧ್ಯಯನಿಸಲು ಇಲ್ಲಿ ಸಾಧ್ಯವಾಗಿದೆ.

ಈ ಎಲ್ಲ ಸಂಗತಿಗಳು ಹೊಸದಾಗಿ ೧೦ ತತ್ವಪದಕಾರರನ್ನ ಹುಡುಕುವ ಮತ್ತು ಹೊಸದಾಗಿ ನಿರ್ವಚಿಸುವ ನನ್ನ ಅಪೇಕ್ಷೆಗೆ ಉತ್ತಮ ಪ್ರೇರಣೆಯನ್ನು ನೀಡಿವೆ. ಒಟ್ಟು ಅಧ್ಯಯನ ಜಿಲ್ಲೆಯ ತತ್ವಪದಕಾರರನ್ನ ವಿಭಿನ್ನವಾಗಿ ನೋಡುವಲ್ಲಿ, ವ್ಯಾಖ್ಯಾನಿಸುವಲ್ಲಿ ಸಾರ್ಥಕವಾಗಿದೆ ಎನ್ನುವುದು ನನ್ನ ನಂಬಿಕೆ.

# ಅನುಬಂಧಗಳು

೧. ಆಯ್ದ ತತ್ವಪದಗಳು

೨. ಕ್ಷೇತ್ರಕಾರ್ಯದ ಸ್ಥಳಗಳು

೩. ಮಾಹಿತಿ ನೀಡಿದ ವ್ಯಕ್ತಿಗಳು

೪. ಪರಾಮರ್ಶನ ಗ್ರಂಥಗಳು

೫. ಛಾಯಾಚಿತ್ರಗಳು

## ೧. ಆಯ್ದ ತತ್ವಪದಗಳು

### ೧. ಬಾಲರಾಮಪ್ಪ (ಕ್ರಿ.ಶ.೧೮೪೨-೧೮೯೭)

೧. ಏನು ಹೇಳಲಮ್ಮಾ ಸಖಿಯೆ| ಅದಕೆ ಕಾಯವಿಲ್ಲವೊ ಇಂದು ಮುಖಿಯೆ
ಹಾವು ಭೂಮಿಯ ನುಂಗಿ| ಇರುವೆ ಹಾವನು ನುಂಗಿ
ಸೊಳ್ಳೆ ಇರುವೆಯನು ಸಂಪೂರ್ಣಾ ತಾ ನುಂಗಿತು

೨. ಬೀಜವಿಲ್ಲದ ವೃಕ್ಷವಹುದು| ಅದರ ಸ್ವಾದ ಕೊಂಬೆ
ರೆಂಬೆ ಸಂಚರಿತವಹುದು| ವೃಕ್ಷ ತುದಿಯಲಿ ಫಲವು
ಮಾಗಿ ನಿಂತಿಹುದು| ಮಾಗಿದ ಫಲ ನುಂಗಿದೊಡೆ ಮರಣವಿಲ್ಲವೆಂದು

೩. ಸಂಧಿನೊಳು ನರಿಯ ಕೂಗೊಂದು| ಅದನು ಅಂಧಕನು ಗುರಿಯಿಟ್ಟು
ಹೊಡೆಯಲೆಂದು ಅಂದು ಇಂದೆನದೆ| ಎಲ್ಲ ಸಂದು ಸಂದುಗಳಲಿ
ತಿರುಗಲು| ವಂಧ್ಯಾಸುನನು ಅದರ ಸಂದಿ ಮಾಡಿದ ಪರಿಯೆ

೪. ಇಂತಿ ವಿಚಿತ್ರಗಳೆಲ್ಲಾ| ಬಹು ಭ್ರಾಂತಿಯಾಗಿ ತೋರ್ಪವೆಲ್ಲಾ
ಶಾಂತ ಸದ್ಗುರು ನಾಗನಾರ್ಯರ ಕೃಪೆಯಿರಲು| ಭ್ರಾಂತಿ ಭ್ರಮೆ
ತೊಲಗಿ ಬಯಾಲಾದ ಆ ಪರವಸ್ತು

### ೨. ಮಾಣಿಕಪ್ಪ (ಕ್ರಿ.ಶ.೧೯೦೨-೧೯೬೪)

ಅದಿಗೋ ಚೂಡಂಡಿ| ಭಾವಗಮ್ಯಂ| ಮಿದಿಗೋ ಎರಗಂಡಿ ಬೋದ ನಾದನಲು
ಬೋಧ ರಹತಮ್ಮೆ| ಅದರಕ ಬೆದರಕ ಮದಲಕಯುನ್ನದಿ ||ಪ||

೧. ಯಟ್ಟಿ ದಾರಿಕೈನ| ದಾನಿ| ಗುಟ್ಟುದೆಲಯರಾದು
ಪಟ್ಟು ಮೋಹಮೆಲ್ಲಾ ಗಟ್ಟಿಗಾ ದೊಕ್ಕಿತೆ
ಬಟ್ಟ ಬೈಲ್ಚೆ ಗುಟ್ಟಗಾನುನ್ನಿದಿ

೨. ನೆರಕ ಮರ್ರುಚೇತ| ದಾತ್ರಿಲೋ| ನರುನಿ ದೇಹಮಾಯೆ
ಯರುಕ ಮರುಪುಲು| ಯೆರಿಗೇಟಿ ಯರುಕನು
ನರಕಿವೇಸಿನ ನಿರುಪಮ್ಮೈನದಿ

೩. ಚೂಪುರೂಪು ನಡಮು। ದಾನಿದಾಪು ದವ್ವಾಲಾನು।
ಮೆಪ್ಪಗ ಮದಿಲೋನಾ ತಿಪ್ಪಲು ಬಡುಕನು
ಓಪ್ಪಗಾ ದೂಚಿನಾ। ತಪ್ಪಕಯುನ್ನದಿ

೪. ತೆಲಿವಿಲೋಪಲಾನು। ದಾನಿ। ತಲುಪುಲು ತೆಗದೀನಿ।
ತಲಪೇ ತಾನನಿ ತೆಲಿಸಿ ತೀಸಿತೆ। ತೆಲವಿ ಶೇಷಮ್ಮೆ
ನಿಲಿಚಿಯುನ್ನದಿ।

೫. ಸೊಂದುಗಾ ಸದ್ಗುರುನಿ ಸಾಂಜ್ಞನೊಂದಿನ ನೇಮಿಲೇಕ।
ಇರಿದು ಅಂದುನ ಯೆಂದು ಚೂಚಿನನು। ಅಂದಿ ಪೊಂದಕ
ಇರಿದಾನೆ ಯುನ್ನದಿ

೬. ಪರಿಪೂರ್ಣ ಮರುಕುಲ ದಾನಿ-ಮರ್ಮ್ಮಮೆರಗಲೇರು।
ಗುರು ಪರಶುರಾಮುಲ ಕರಣ ಮೇಲನಿ।
ಪರಮ ಗುಹ್ಯಮ್ಮೆ ಪರಿಪೂರ್ಣಮದಿ।

## ೩. ರಾಂಪೂರು ಲಕ್ಷ್ಮಣದಾಸ (ಕ್ರಿ.ಶ.೧೯೧೫-೧೯೭೦)

ಯಂಥ ಮಹಿಮ ಗಾಂಧಿಯು ಬಂದ।
ನಿಶ್ಚಿಂತ ಯೋಗಿ। ಯಿಂಥಾ ಮಹಿಮ ಗಾಂಧಿಯು ಬಂದ।
ಯಂಥಾ ಮಹಿಮ ಗಾಂಧಿ ಬಂದ। ಕಂತು ರಹಿತನ
ಕರುಣದಿಂದ। ಅಂತು ಪಾರುಯಿಲ್ಲದ ಘನಪಂಥ
ಜೈಸಿದ ಶಾಂತದಿಂದ ॥ಪ॥

೧. ಎಂದು ಇಂಥಾ ಯೋಗಿ ಬಂದಿಲ್ಲ। ಭೂಮಂಡಲೆಲ್ಲಾ
ಒಂದೆ ಮಾತಿಗೆ ವಂದಿಸಿದನಲ್ಲ।
ಹಿಂದುಸ್ತಾನದ ಸಂದು ಸಂದಿಗೆ। ಒಂದೇ ಮಾತ್ರಂ
ಮಹಿಮೆ ತುಂಬಿ ಇಂದಿರೇಶನೆ ತಾನೆ ಬಂದು
ಗಾಂಧಿ ಮಹಾತ್ಮನೆಂದು ಹೋದ

೨. ವೇದ ಆಗಮುಗಳ ಓದಿರುವಾ।
ಸಾಧಿಸಿ ಬ್ರಹ್ಮವು। ಸಾಧುಶಿಖಮಣಿಯಾಗಿ ತಾಮರಿವಾ।
ವಾದ ಭೇದದ ಭಾವವಳಿದು ಮಧುರ ಶಾಂತಿಯ ಬೋಧೆಗೈದು।
ಮೇದಿನಿ ಸುತನಾಗಿ ಸುಳಿದು ಮದನ ಪಿತನ ಸಖನೆಂದು ಮರಿವಾ।

೩. ಎಲ್ಲ ಮತಗಳು ಸಲ್ಲಿದವು ಇತಗೆ|
ಬಲ್ಲಿದವಿತಗೆ| ಮಲ್ಲಿಕಾರ್ಜುನನೆಂಬ ಸನ್ಮತಿಗೆ
ಬಲ್ಲ ಋಷಿ ಕುಲಕಿಲ್ಲ ಮತಿಗೆ|
ಸಲ್ಲುವುದು ಭೂಪಾಲನಿತನಿಗೆ
ಇಲ್ಲಿ ಯಾರೂಸಮ ಈತಗೆ| ಅಲ್ಲಮಹಾ ಪ್ರಭುದೇವ ತಾನು|

೪. ಹೇಮಕಳೆ ಶ್ರೀರಾಮಪುರ ಘನವ|
ಭೀಮೇಶನಿರುವ ಬೇಡಿದ ವರಗಳ ಬೇಗನೆ ಕೊಡವಾ|
ಸೋಮಶೇಖರ ಪ್ರೇಮಸಾಗರ ಪರಮ
ಪರಿತರ| ಗಾಂಧಿ ಅವತಾರ|
ಹಿಮಲನೇತ್ರನಾಗಿ| ಸರ್ವಜನರಿಗೆ
ಸನ್ಮತಿ ಕೊಡುವಾ

## ೪. ರಾಮಾನಂದ ಸರ್ತಿಗೇರಿ (ಕ್ರಿ.ಶ.೧೯೧೪-೧೯೮೪)

ಮುಂದ ನೋಡಿ ನಡಿಯ ಬೇಕಮ್ಮಾ| ಈ ಊರ ವಳಗೆ ಬಹಳ
ಭಕ್ತರ ನೋಡಮ್ಮ| ಮುಂದ ನೋಡಿ ನಡಿಯಬೇಕು
ಗುರುವಿನ ಪಾದ ಹಿಡಿಯಬೇಕು| ಅರಿವಿಲಿಂದ ಗುರುವಿನ ಕೂಡಿ
ಆತ್ಮಲಿಂಗನ ಪೂಜೆ ಮಾಡುತ ||ಪ||

೧. ಕಂಟ ಕುರುಡರೆಂಟ| ಮಂದ್ಯಮ್ಮ ಈ ಊರವಳಗೆ
ಬಂಟರಾಗಿ ತಿರುಗುತಾರಮ್ಮ|
ಆರು ಏಳು ಮಂದಿ ನಿನ್ನ| ಪಹರೆಯೊಳಗೆ ಕಳಹುತಾರೆ

೨. ಒಂಬತ್ತು ಬಾಗಿಲು ಬಂದ ಮಾಡಮ್ಮ| ಈ ಊರ ಒಳಗೆ
ಗುಂಬದೊಂದು ಗುಡಿಯ ನೋಡಮ್ಮ
ಅಂಗಲಿಂಗದ ಸಂಗವ ಮಾಡಿ| ರಂಗ ಮಂಟಪದೊಳಗೆ ಕೂಡಿ
ಬಂದು ನಿಂತ ಜಂಗಮ ಯೋಗಿ| ಆತನ ಪಾದಕ್ಕೋಗಿ ಎರಗಿ

೩. ದೇಶದೊಳಗೆ ಬಾಪುರ ನೋಡಮ್ಮ| ಈ ಊರ ಮಹಿಮೆ
ರಾಮಾನಂದ ಹೇಳಿದಾನಮ್ಮ| ಅರಿವಿಲಿಂದ ಗುರುವಿನ ಪಡೆದು
ಅಂತರಂಗದಲ್ಲಿ ನೋಡಿ| ಗುರುವು ಕೊರವೇಶನ ಚರಣ
ಕಮಲದಲ್ಲಿ ಸೇರು|

## ೫. ಮಂದಕಲ್ ಭೀಮಲಿಂಗಪ್ಪ (ಕ್ರಿ.ಶ.೧೯೨೬-೧೯೯೯)

ಗುಡಿಹಾಳು ಎನ್ನುವ ಗ್ರಾಮ| ಅಲ್ಲಿ ಹುಟ್ಟಿ ಬೆಳೆದಾನು ಭೀಮ
ಕುಲ ದೈವ ಹನುಮನೆಂಬುವ ನಾಮ| ಬೆಳೆಸಿದ್ದು ಅವನಲ್ಲಿ ಪ್ರೇಮ ||ಪ||

೧. ಭಾವದಲಿ ನಾ ಬಂದೆ ಇದು ಏನು ಧರ್ಮ| ಕಾದು ತಂದಿದೆ ಪೂರ್ವಕರ್ಮ
ಅನುದಿನ ನೆನೆಯುವೆ ನಿನ್ನಿಯ ನಾಮ| ಪರಿಹಾರ ಮಾಡಲು ನೀ ಘಮ ಮಹಿಮ

೨. ಪ್ರಪಂಚವೆಂಬುದು ಜೋಕದ ನೇಮ| ಕೆಲದಿನ ಇಟ್ಟಿದ್ದ ಅದರಲ್ಲಿ ಪ್ರೇಮ
ನಾನು ನನ್ನದು ಯನ್ನುವ ಭ್ರಮ| ಸತಿ ಸುತರೆನ್ನುವ ಅತಿತ್ಯ ಪ್ರೇಮ

೩. ಎಷ್ಟಂತ ಹೇಳಿ ಅಜ್ಞಾನದ ಮಹಿಮಾ| ಎಡಮುರಿಗಿ ಹಾಕಿತ್ತು
ಸಂಚಿತ ಕರ್ಮ| ತಿಳಿಯದೆ ನಾ ಹೋದೆ ಯಿದರ ಮರ್ಮ

೪. ತೋರಿದ ಗುರುವಿನ ಮಹಾ ನಿಸ್ಸೀಮ| ಹುಟ್ಟೂರು ಬಿಟ್ಟಾನ ಗ್ರಾಮ
ಧೀರನಾಗಿ ಹೊರಟನಾ ಭೀಮ| ಪಡೆದಾನ ನೋಡು ಮುಕ್ತಿಯ ಧಾಮ

## ೬. ಸಾಂಪೂರು ಭೀಮಣ್ಣ (ಕ್ರಿ.ಶ.೧೯೪೨)

ದೂರ ಮಾಡೊ ಘೋರ ಸಂಸ್ಕೃತಿಯ| ಸದ್ಗುರು ರಾಯ ದೂರ ಮಾಡೊ
ಘೋರ ಸಂಸ್ಕೃತಿಯ| ದೂರ ಮಾಡೊ ಘೋರ ಸಂಸ್ಕೃತಿ ಮೀರಿದ ವಿಧಿ ಭರಹ ನೀತಿ ||ಪ||

೧. ಕರ್ಮ ಮೂರಾಂಭ ಜಾಲದೊಳು| ಶಿವಧರ್ಮ ವರಿಯದೆ
ಸರ್ವಗತ ನಿನ್ನ ಮರೆತು ಹೋದೆನು| ಧರ್ಮ ಮೇಘು
ಸೂತ್ರವರಿಯದೆ| ಕರ್ಮವೆಂಬ ಕಾಲಕೂಟವ

೨. ಓರ್ವ ನಾನೆಂಬರಿವು ತೋರ್ಪಡದು| ಸರ್ವಾಂತರ್ಯಾಮಿ
ತೋರ್ವ ಜಗದಿ ಭ್ರಮೆಯೊಳಾಡಿದೆನು| ಚರಮ ಶ್ಲೋಕದ ಮಹಿಮೆ
ಅರಿಯದೆ ಕರ್ಮ ಕೋಟಲೆಯೊಳಗೆ ಸಿಲ್ಕಿದೆ

೩. ಕತ್ತಲೆಯೊಳು ಬೆಳಕನರಸುವವರೆ| ಪರಿಣಾಮದಿ ನೊಂದೆ
ಚಿತ್ತಚಂಚಲ ಕಳೆಯನರಿಯುವುದೆ| ಮತ್ತೆ ಪೂರ್ವ ಕರ್ಮದಿ ನೊಂದೆ
ಚಿತ್ತ ಜಾರಿ ಮಹಾಂತ ನೀ ಕಾಯೋ

## ೭. ಮಾನಸಗಲ್ ವೆಂಕನಗೌಡ (ಕ್ರಿ.ಶ.೧೯೪೮)

ನಮಿಸುವೆ ನಿಮ್ಮಡಿಗೆ ಅನುದಿನ| ಕುರುಣೆ ತೋರೋ ಯನಗೆ
ದಾಸನು ನಾನಯ್ಯ ಧರ್ಮಾತ್ಮನು ನೀನಯ್ಯ ||ಪ||

೧. ದೇಶಿಕ ನಿನ್ನಯ ದಿವ್ಯಬೋಧೆಯನು ಧೃತಿಗೆ ತರಲು ಮನ
ವಿಕಸಿತವಾಯಿತು| ಸಕಲ ವೇದ ನಿಗಮಾಗಮಸಾರ
ಪರಿಪೂರ್ಣಾಚಲ ಬೋದೆನುಸಾರ

೨. ದ್ವೈತಾದ್ವೈತ ವಿಶಿಷ್ಟಮಾರ್ಗಗಳ ಮರ್ಮ ತಿಳಿಸಿ ನಿನ್ನ ಧರ್ಮವ ನಿಲಿಸಿ
ಕನಸು ನನಸುಗಳ ಭ್ರಮೆಯನು ತ್ಯಜಿಸಿದ ಯಿನಿತು
ಸುಧಾಕರ ವರನಗಧೀರ

೩. ನಿತ್ಯ ನಿರಂಜನ ನಿರ್ವಿಕಾರ| ಘನ ಪ್ರತ್ಯಗಾತ್ಮವಿದೂರ
ಸುಗುಣ ನಿರ್ಗುಣಾತೀತ| ಸುಜಾತ ವರಮುನಿ ವಂದಿತ
ಮುಕ್ತಿ ಪ್ರದಾತ

೪. ದೀಕ್ಷಿತ ಸಿದ್ಧಾಂತ ದೈವ ಮಾರ್ಗದಲಿ ನಿಜಗುರು ರೂಪವ
ತೋರಿದಯ್ಯ| ರಾಜಗುರು ರಾಜಶೇಖರ ನಮನಗಳೈ
ನಿನಗೆ ಪೂರ್ಣದಯಾಮಯ

೫. ಧರೆಯೊಳು ರಾಯಚೂರು ಪುರದಿ ಮಾನಸಗಲ್ ವೆಂಕನಗೌಡನ
ಪೊರೆದ ಪ್ರಭು| ಸಮ ನಿನಗಾರುಂಟು ಸವ್ಯಸಾಚಿಯೆ
ಭವ್ಯ ಪಂಪರ ದಿವ್ಯಮೂರ್ತಿಯೆ|

## ೮. ಹುಲ್ಲೂರು ಶಿವಣ್ಣ (ಕ್ರಿ.ಶ.೧೯೫೬)

ನಾನಾವ ಮಾತುಗಳಾಡಲಿ| ಆದ್ಯರ ಮುಂದೆ ||ಪ||
ಆವ ಮಾತುಗಳಾಡಿ ಎನ್ನ ಭಾವಗಳ ತಿಳಿಸಯ್ಯ
ಸಾವು ಕೆಡುವ ದೇಹದ ಭೀಮಾನವನು ಹಿಡಿದ ಜ್ಞಾನಿ ನಾನು ||ಅ.ಪ||

೧. ಸತಿ ಸುತರ ಹಿತರ ನಂಬಿರುವೆ| ಒತ್ತಾಸೆಯಿಂದ
ಗತಿಯುಗಾಣದಂತೆ ನಾನಿರುವೆ|
ಹಿತವು ಯಾವುದೆಂದು ಯನ್ನ ಮತಿಗೆ ಹೊಳೆಯದಾಯಿತಯ್ಯ
ಪಥವು ತೋರುವ ನಿಮ್ಮ ಶೃತಿ ತತಿ ಸಾರವೆನಗೆ ಸಾಕು ಸಾಕು

೨. ನಿಮ್ಮ ವಚನಗಳನ್ನೇ ಆಲಿಸುವೆ| ಮನವಿರಲು ಸಾಕು
ತಮ್ಮ ತತ್ವಾರ್ಥವನು ಪ್ರೀತಿಸುವ|
ಸುಮ್ಮನೆ ನಾನಿರುವೆನಯ್ಯ| ನಿಮ್ಮ ಪದಗಳ ಕೇಳುತನುದಿನ
ನಿಮ್ಮ ಸ್ವಾನುಭವದ ಸಾರವು| ಎನ್ನ ಬಾಳಿಗೆ ಬೆಳಕು ಕೊಡಲಿ

೩. ಅನುಭವಾಮೃತವನು ಭಿತ್ತರಿಸಿ| ಈ ಅಲ್ಪಮತಿಗೆ
ಅನುವು ನೀಡುತಲೆನ್ನನು ಬೆಳೆಸಿ|
ಮನಕೆ ಸನ್ಮತಿಯಿತ್ತು| ಎನ್ನ ವಿನೂತವಾಗಿ ತಿದ್ದಿ ತೀಡುವ
ಜನಕ ಶ್ರೀ ಗುರು ಮಲ್ಲಿನಾಥನ| ವನಜ ಪಾದಗಳಿದ್ದ ಬಳಿಕ

**೯. ಹುಲ್ಲೂರು ಅಮರ ಗುಂಡಪ್ಪ (ಕ್ರಿ.ಶ.೧೯೫೪)**

ಬ್ಯಾಡಬ್ಯಾಡ ಬಿಡು ಬಿಂಕದ ನಡೆ ನುಡಿಯು
ಎಲೆ ಕೋಕಿನ ಹೆಣ್ಣೆ ||ಪ||
ಗಡಿಬಿಡಿ ಮಾಡಿ ಜಳಕವ ಮಾಡಿ| ಗಡಿಗೆಯ ತೊಳೆಯದೆ
ಅಡಿಗೆಯ ಮಾಡ್ತಿ| ಮಡಿಯುಡಿಯನರಿಯದೆ ಯೆಡೆಯೆನು ಮಾಡ್ತಿ ||ಅ.ಪ||

೧. ದೃಢವೊಂದಿಲ್ಲದೆ ಗುಡಿಗ್ಯಾಕೆ ಹೋಗ್ತಿ| ಪುಲ್ಲಲೋಚನನ ಪೂಜೆ ಮಾಡ್ತಿ
ಅಲ್ಲಸಲ್ಲದ ಮಾತುಗಳಾಡ್ತಿ| ಮಲ್ಲಿಗೆ ಹೂವಿನ ಮಾಲೆಯ ಹಾಕ್ತಿ
ಮೆಲ್ಲನೆ ಕದ್ದು ಪರರನು ನೋಡ್ತಿ

೨. ಮನೆಯಲ್ಲಿ ನೆಲೆಯೂರಿ ನೀ ನಿಲ್ಲುವಲ್ಲಿ| ಮನೆ ಮನೆ ತಿರುಗೋದು
ನೀ ಬಿಡುವಲ್ಲಿ| ಅನುವಿನಿಂದ ಗಂಡನ ಕೂಡುವಲ್ಲಿ
ನೆನಹು ದೇವನ ಅಡಿಯಿಡುವಲ್ಲಿ

೩. ಶಿವಶರಣರ ಮಾರ್ಗವ ನೀನರಿಯೋ| ಶಿವಾನುಭಾವದಿ ಬಿಡದೆ
ಬೆರೆಯೋ| ಭವಕೆ ಬಾರದೆ ಹಾದಿಲಿ ನಡೆಯೋ
ಅದ್ವೈತಾನಂದನ ಪಾದವ ಹಿಡಿಯೋ

**೧೦. ಕೊರ್ವಿಹಾಳ್ ಕಬೀರ್**

ಏನ್‌ದೆವ್ವ ಇದೆಂಥಾ ದೆವ್ವ ಏನ್ ಕಾರಣೆದು ತಾನೆ ಬಂದು
ಯನ್ನ ನುಂಗುತಿನಂತ ನಿಂತಾದ ||ಪ||
೧. ಹತ್ತಿಪಾತ್ರೆ ಅನ್ನ ತುತ್ತು ಮಾಡಿ| ಒಂದೆ ಏಟಿಗೆ
ನುಂಗಿ ಬಿಟ್ಟಾದ| ಮತ್ತೆ ಚಿತ್ತಕೆ ಕೈಹಾಕಿ| ಮೆತ್ತಗೆ
ಮೆತ್ತಿನ ಮೇಲೆ ಕುಂತಾದ

೨. ಮೂರು ಕೊಡ ಹಾಲು ಕುಡಿದು| ಮತ್ತೊಂದು ಎಲ್ಕದಂತ
ಕೇಳ್‌ತಾದ| ಮೂರು ಮೂರುಲೆ ಒಂಬತ್ತು ದೇವನ
ಎಡೆಗಳನೆಲ್ಲ ತಿಂದಾದ

೩. ಹಿಂದಕ್ಕೆ ನಿಮ್ಮ ಮನೆತನದವರಿಗೆ| ಬಹಳ
ಖೂನವಿದ್ದೆನಂತಾದ| ಇಂದಾದರೂ ನಾ ಅಂದಿನ
ವೈವಾಟದಿಂದಲೆ ಬಂದಿದ್ದಂತಾದ

೪. ಗೆಲ್ಲೆನೆಂದರೆ ಮೆಲ್ಲಗೆ ಯನ್ನನೆ| ಮೆತ್ತಗೆ ಮಾಡುತ
ಕುಂತಾದ| ಬಲ್ಲೆನೆಂದರೆ ಮಲ್ಲರೆಲ್ಲರನು
ಮಣ್ಣುಬುಕ್ಕಿಸಿ ನಂತಾದ

೫. ಇಂತೀ ದೆವ್ವ ಬಿಡಿಸಲು| ಖಾದರ ಪ್ರಭುದೇವನ
ಮೊರೆ ಹೊಕ್ಕೆ| ಅಂತು ಆತನ ದಯದಿಂದ
ಗದಗದ ನಡುಗುತ ದಾರಿ ಬಿಟ್ಟಾದ|

## ೨. ಕ್ಷೇತ್ರಕಾರ್ಯದ ಸ್ಥಳಗಳು

೧. ಐದನಾಳು

೨. ಕಲ್ಲೂರು

೩. ಕುರುಡಿಗ್ರಾಮ

೪. ಗಣೇಕಲ್

೫. ಜಾಗಟಕಲ್

೬ ಜಾಲಹಳ್ಳಿ

೭. ಜಾಲಾಪುರ

೮. ದೇವದುರ್ಗ

೯. ದೇವಾಪುರ

೧೦. ನೀರಮಾನ್ವಿ

೧೧. ನೀರಲಕೇರಿ

೧೨. ನೀಲಗಲ್

೧೩. ಮಂಜರ್ಲಾ

೧೪. ಮಂದಕಲ್

೧೫. ಮಾನ್ವಿ

೧೬. ಮುಕ್ಕುಂದಿ

೧೮. ಯಕಲಾಸಪುರ

೧೯. ರಾಮಪುರ

೨೦. ರಾಯಚೂರು

೨೦. ಲಿಂಗಸೂಗೂರು

೨೧. ಸಿಂಧೂನೂರು

೨೨. ಸಿರವಾರ

೨೩. ಹುಲ್ಲೂರು

# ೩. ಮಾಹಿತಿ ನೀಡಿದ ವ್ಯಕ್ತಿಗಳು

| ಹೆಸರು | ಊರು | ವಯಸ್ಸು |
|---|---|---|
| ೧. ಅಜಾಮಪ್ಪ | ನೀರಮಾನ್ವಿ | ೪೦ |
| ೨. ಆದಿ ರಾಜಶೇಖರಪ್ಪ | ದೇವದುರ್ಗ | ೬೦ |
| ೩. ಆಮರಯ್ಯಸ್ವಾಮಿ | ಮಾನ್ವಿ | ೭೦ |
| ೪. ಆಮಲಿಂಗಪ್ಪ | ದೇವದುರ್ಗ | ೩೫ |
| ೫. ಅಮ್ಮಣ್ಣ ನಂದಪ್ಪ | ದೇವಾಪುರ | ೪೦ |
| ೬. ಖಾಜಾ ಸಾಬ್ | ಮಂಜರ್ಲಾ | ೫೨ |
| ೭. ಚಂದ್ರಣ್ಣ ಶೆಟ್ಟಿ | ಜಾಲಹಳ್ಳಿ | ೫೫ |
| ೮. ಚನ್ನಯ್ಯಸ್ವಾಮಿ ಜಾಲಾಪುರ | ಜಾಲಾಪುರ | ೫೦ |
| ೯. ಚೆನ್ನಯ್ಯಸ್ವಾಮಿ | ಸಿರಿವಾರ | ೫೫ |
| ೧೦. ಜಯಣ್ಣ ಬಿ. | ಮಂದಕಲ್ | ೫೮ |
| ೧೧. ತಟ್ಟೆ ರಂಗಪ್ಪ | ಮಂದಕಲ್ | ೬೦ |
| ೧೨. ತಿಮ್ಮಪ್ಪ ಕಟ್ಟೆ | ಗಣೇಕಲ್ | ೪೦ |
| ೧೩. ದರ್ಜಿ ಕಾಶೀನಾಥ | ಮಂದಕಲ್ | ೩೫ |
| ೧೪. ದಾದಾಪೀರ್ | ಮಂಜರ್ಲಾ | ೫೦ |
| ೧೫. ದಾಸಪ್ಪ ತಿಮ್ಮಾಪೂರುಪೇಟೆ | ರಾಯಚೂರು | ೬೦ |
| ೧೬. ನಾಯಕ ಆರ್.ವಿ. | ಮಾನ್ವಿ | ೪೫ |
| ೧೭. ಬಸವಲಿಂಗಯ್ಯ | ಜಾಗಟಕಲ್ | ೫೫ |
| ೧೮. ಭೀಮಣ್ಣ ಬೈಚಬಾಳ | ದೇವದುರ್ಗ | ೬೧ |
| ೧೯. ಬೆಟ್ಟದಯ್ಯ | ಜಾಗಟಕಲ್ | ೫೦ |

| | | |
|---|---|---|
| ೨೦. ಮಹಮ್ಮದ್ ಚಾಂದ್‌ಪಾಶಾ | ನೀಲಗಲ್ | ೨೨ |
| ೨೧. ಮಾನಸಗಲ್ ವೆಂಕನಗೌಡ | ಜಾಲಾಪುರ | ೫೨ |
| ೨೨. ಮೂಕಪ್ಪ ವಕೀಲರು | ರಾಯಚೂರು | ೫೫ |
| ೨೩. ಯಲ್ಲಪ್ಪ ಛಲವಾದಿ | ನೀರಮಾನ್ವಿ | ೪೫ |
| ೨೪. ರಾಂಪೂರ ಭೀಮಣ್ಣ | ರಾಯಚೂರು | ೬೫ |
| ೨೫. ರಾಮಸ್ವಾಮಿ ನುಲಿ | ರಾಯಚೂರು | ೫೫ |
| ೨೬. ರೆಡ್ಡೆಪ್ಪ ಹಳ್ಳಿ | ಸಿರವಾರ | ೩೫ |
| ೨೭. ವಿರುಪಯ್ಯ | ಮಂದಕಲ್ | ೫೮ |
| ೨೮. ವಿರೂಪಾಕ್ಷಗೌಡ | ಜಾಲಹಳ್ಳಿ | ೫೬ |
| ೨೯. ವೀರಣ್ಣ ಮಾನ್ವಿ | ಜಾಲಾಪುರ | ೫೦ |
| ೩೦. ಶಂಕರಯ್ಯ | ಜಾಗಟಗಲ್ | ೫೦ |
| ೩೧. ಶಂಭುಲಿಂಗಪ್ಪ | ಗಣೇಕಲ್ | ೪೫ |
| ೩೨. ಶರಣಪ್ಪ ಕೂರ್ವಿಹಾಳ | ಮಂದಕಲ್ | ೪೦ |
| ೩೩. ಶರಣಪ್ಪ ಸಾಹುಕಾರ | ಮಂಜರ್ಲಾ | ೫೫ |
| ೩೪. ಶಾಂತಯ್ಯಸ್ವಾಮಿ | ನೀರಮಾನ್ವಿ | ೪೦ |
| ೩೫. ಶಿವಪುತ್ರಪ್ಪ ದೇವಿಮನೆ | ಸಿರಿವಾರ | ೩೦ |
| ೩೬. ಶಿವರಾಮಯ್ಯ | ಮಾನ್ವಿ | ೩೫ |
| ೩೭. ಸಾಂಬಯ್ಯ | ಜಾಗಟಕಲ್ | ೫೫ |
| ೩೮. ಸುರೇಶ ಕಂಬಳಿ | ಸಿರಿವಾರ | ೪೨ |
| ೩೯. ಹನುಮಂತಪ್ಪ | ಗಣೇಕಲ್ | ೫೦ |
| ೪೦. ಹನುಮಂತಪ್ಪ ಮಾಸ್ತರ | ಜಾಲಾಪುರ | ೫೩ |
| ೪೧. ಹೇಮಣ್ಣ | ಮಂಜರ್ಲಾ | ೪೦ |
| ೪೨. ಹೊಳೆಪ್ಪ ಕಟೀಮನಿ | ಹುಲ್ಲೂರು | ೪೫ |

# ಭಜನಾ ಮೇಳಗಳು

೧. ರಾಂಪೂರು ಭಜನಾ ಮಂಡಳಿ, ಮಾರೆಮ್ಮ ದೇವಸ್ಥಾನ, ರಾಂಪೂರು

೨. ಯಕ್ಲಾಸಪುರ ಭಜನಾ ಮಂಡಳಿ, ಮಾರೆಮ್ಮ ದೇವಸ್ಥಾನ, ಯಕ್ಲಾಸಪುರ

೩. ಅಡವೇಂದ್ರಮಠ ಭಜನಾ ಮಂಡಳಿ, ಮಂದಕಲ್

೪. ಐದನಾಳ ಭಜನಾ ಮಂಡಳಿ, ವೀರಣ್ಣ ದೇವಸ್ಥಾನ, ಐದನಾಳ

೫. ನೀರಲಕೇರಿ ಭಜನಾ ಮಂಡಳಿ, ಬಸವಲಿಂಗಪ್ಪನ ಗದ್ದಿಗೆ, ನೀರಲಕೇರಿ

## ೪. ಪರಾಮರ್ಶನ ಗ್ರಂಥಗಳು


೧. ಅಮರೇಶ ನುಗಡೋಣಿ, **ಹೈದ್ರಾಬಾದ್ ಕರ್ನಾಟಕ ಹಾಡು ಪಾಡು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೨. ಅಮರೇಶ ನುಗಡೋಣಿ, **ಶೂನ್ಯ ಸಂಪಾದನೆಗಳ ಸಾಂಸ್ಕೃತಿಕ ಮುಖಾಮುಖಿ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೩. ಅಮರೇಶ ನುಗಡೋಣಿ, **ನುಡಿವ ಬೆಡಗು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೪. ಕಲಬುರ್ಗಿ ಎಂ.ಎಂ., **ಕವಿರಾಜ ಮಾರ್ಗ ಪರಿಸರ ಕನ್ನಡ ಸಾಹಿತ್ಯ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೩

೫. ಕಲಬುರ್ಗಿ ಎಂ.ಎಂ., **ಮಾರ್ಗ, ಸಂಪುಟ ೨,** ನರೇಶ್ ಅಂಡ್ ಕಂಪನಿ, ಬೆಂಗಳೂರು, ೧೯೯೮

೬. ಕಾಳೇಗೌಡ ನಾಗವಾರ, **ಹಲವು ತೋಟದ ಹೂಗಳು,** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೦

೭. ಕೀರ್ತಿನಾಥ ಕುರ್ತಕೋಟಿ, **ಕನ್ನಡ ಸಾಹಿತ್ಯ ಸಂಗಾತಿ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫

೮. ಖೇಮಣ್ಣ, **ಶ್ರೀ ಖೇಮಣ್ಣ ವಿರಚಿತ ಕೈವಲ್ಯ ಸಾರಾಮೃತ,** ಗಂಗಶ್ರೀ ಪ್ರಕಾಶನ, ಮಾನ್ವಿ, ೧೯೯೨

೯. ಗದ್ದಗಿಮಠ ಬಿ.ಎಸ್., **ಕನ್ನಡ ಜಾನಪದ ಗೀತೆಗಳು,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೩

೧೦. ಗುರುಬಸವಯ್ಯ ಅಮ್ಮಾಪುರ(ಸಂ), **ನೀರಲಕೇರಿ ಬಸವಲಿಂಗ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೮

೧೧. ಚಿದಾನಂದಮೂರ್ತಿ ಎಂ., **ವಚನ ಸಾಹಿತ್ಯ,** ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೫

೧೨. ಚೆನ್ನಬಸವಪ್ಪ ಬೆಟ್ಟದೂರು, **ಘನಮಠ ನಾಗಭೂಷಣ ಶಿವಯೋಗಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೮

೧೩. ಜವರೇಗೌಡ ದೇ., **ಜಾನಪದ ಅಧ್ಯಯನ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೦

೧೪. ಜವರೇಗೌಡ ದೇ., **ಕನಕ ಸಾಹಿತ್ಯದರ್ಶನ**, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೦

೧೫. ತಿಪ್ಪೇರುದ್ರಸ್ವಾಮಿ, **ಶರಣರ ಅನುಭಾವ ಸಾಹಿತ್ಯ**, ಡಿ.ವಿ.ಕೆ.ಮೂರ್ತಿ, ಬೆಂಗಳೂರು, ೧೯೬೩

೧೬. ಧೃವನಾರಾಯಣ, **ಸ್ವಾತಂತ್ರ್ಯಾಂದೋಳನ ರಾಯಚೂರು ಜಿಲ್ಲೆ**, ಕರ್ನಾಟಕ ಸಂಘ, ರಾಯಚೂರು, ೧೯೭೧

೧೭. ನಾಗರಾಜ ಡಿ.ಆರ್., **ಅಲ್ಲಮಪ್ರಭು ಮತ್ತು ಶೈವ ಪ್ರತಿಭೆ**, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೨೦೦೬

೧೮. ಬರಗೂರು ರಾಮಚಂದ್ರಪ್ಪ, **ಕನ್ನಡ ತತ್ವಪದಕಾರರು**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

೧೯. ಬರಗೂರು ರಾಮಚಂದ್ರಪ್ಪ, **ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಮತ್ತು ಅಧೀನ ಸಂಸ್ಕೃತಿ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೬

೨೦. ಬಸವರಾಜ ಎಲ್., **ಶಿವದಾಸ ಗೀತಾಂಜಲಿ**, ಗೀತಾಬುಕ್ ಹೌಸ್, ಕೆ.ಆರ್.ಸರ್ಕಲ್, ಮೈಸೂರು, ೧೯೬೩

೨೧. ಬಸವರಾಜ ಕಲ್ಗುಡಿ, **ಅನುಭಾವ : ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೭

೨೨. ಬಸವರಾಜ ಸಬರದ, **ಹೈದ್ರಾಬಾದ್ ಕರ್ನಾಟಕದ ತತ್ವಪದಕಾರರು**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೨೩. ಬಸವಲಿಂಗ ಸೊಪ್ಪಿಮಠ, **ಕೊಡೇಕಲ್ ಬಸವಣ್ಣ : ಒಂದು ಅಧ್ಯಯನ**, ಕೊಡೇಕಲ್ ಬಸವೇಶ್ವರ ಅಧ್ಯಯನ ಸಂಸ್ಥೆ, ಕೊಡೇಕಲ್, ೧೯೯೫

೨೪. ಬಸವಲಿಂಗ ಸೊಪ್ಪಿಮಠ, **ಕೊಡೇಕಲ್ ವಚನ ವಾಕ್ಯ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮

೨೫. ಬಸವಲಿಂಗ ಸೊಪ್ಪಿಮಠ, **ಗೂಗಲ್ಲು ಪರಪ್ಪಯ್ಯನ ತತ್ವಪದಗಳು**, ಅಂತರಗಂಗಿ ಪ್ರತಿಷ್ಠಾನ, ರಾಯಚೂರು, ೨೦೦೧

೨೬. ಬಸವಲಿಂಗ ಸೊಪ್ಪಿಮಠ, **ನೀರಲಕೇರಿ ಬಸವಲಿಂಗ ಶಿವಯೋಗಿಗಳ ಸ್ವರವಚನಗಳು**, ಶ್ರೀ ಜಗದ್ಗುರು ತೋಂಟದಾರ್ಯ ಮಠ, ಗದಗ, ೧೯೯೯

೨೭. ಮಲ್ಲಿಕಾರ್ಜುನ ಮಹಾಸ್ವಾಮಿಗಳು, **ಕೃಷಿಜ್ಞಾನ ಪ್ರದೀಪಿಕೆ,** ಶ್ರೀ ಗುರು ಘನಮಠೇಶ ಧರ್ಮ ಪ್ರಚಾರಕ ಮಂಡಳಿ, ಸಂತೆಕಲ್ಲೂರು, ೧೯೯೩

೨೮. ಮಲ್ಲಿಕಾರ್ಜುನ ಶಿ.ಲಠ್ಠೆ(ಸಂ), **ಕಡಕೋಳ ಮಡಿವಾಳೇಶ್ವರ ವಿರಚಿತ ಸ್ವರವಚನಗಳು,** ಶ್ರೀ ಜಗದ್ಗುರು ತೋಂಟದಾರ್ಯ ಮಠ, ಗದಗ, ೧೯೯೨

೨೯. ಮಹಾಬಲೇಶ್ವರಪ್ಪ ಬಿ.ಎಸ್., **ಹೈದ್ರಾಬಾದ್ ಕರ್ನಾಟಕ ಸ್ವಾಂತ್ರ್ಯ ಚಳುವಳಿ,** ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೪

೩೦. ಮೀನಾಕ್ಷಿ ಬಾಳಿ, **ಖೈನೂರು ಕೃಷ್ಣಪ್ಪ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೮

೩೧. ರಹಮತ್ ತರೀಕೆರೆ, **ಕರ್ನಾಟಕದ ಸೂಫಿಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮

೩೨. ರಹಮತ್ ತರೀಕೆರೆ(ಸಂ), **ಧರ್ಮ : ವಿಷಯ ವಿಶ್ವಕೋಶ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬

೩೩. ರಹಮತ್ ತರೀಕೆರೆ, **ಕರ್ನಾಟಕದ ನಾಥಪಂಥ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೩೪. ರಾನಡೆ ಆರ್.ಡಿ.(ಮೂಲ), **ಕನ್ನಡ ಸಂತರ ಪಾರಮಾರ್ಥಿಕ ಪಥ,** ಅನು: ಎಂ.ಎಸ್.ದೇಶಪಾಂಡೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬

೩೫. ರಾಮಸ್ವಾಮಿ ನುಲಿ, **ಗೊಬ್ಬೂರು ಹಂಪಣ್ಣ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೮

೩೬. ವಡಿಕೆ ತಾತಪ್ಪಯ್ಯ, **ಅಮೃತ ಶಿಖಾಮಣಿ,** ಸಾಧನಾ ಮುದ್ರಣಾಲಯ, ರಾಯಚೂರು, ೧೯೫೭

೩೭. ವಿಜಯಶ್ರೀ ಸಬರದ, **ಗುರು ಶಿಷ್ಯರ ತತ್ವಪದಗಳು,** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೭

೩೮. ವಿದ್ಯಾಶಂಕರ ಎಸ್.(ಸಂ), **ನಿಜಗುಣ ಶಿವಯೋಗಿಗಳ ಸಮಗ್ರ ಕೃತಿಗಳು,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೫

೩೯. ವಿರೂಪಾಕ್ಷ ಕುಲಕರ್ಣಿ(ಅನು), **ಕಾಪಾಲಿಕರು ಮತ್ತು ಕಾಳಾಮುಖರು,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೫

೪೦. ವಿಶಾಲಾಕ್ಷಾಂಬತಾಯಿ, **ಆದಿ ಅಮಾತ್ಯಪ್ಪನ ಕೈವಲ್ಯ ನವನೀತ,** ಶ್ರೀ ತೋಂಟದಾರ್ಯ ಬುಕ್ ಡಿಪೋ, ಗದಗ

೪೧. ವೀರೇಶ ಬಡಿಗೇರ, **ಬಾಚಿ ಕಾಯಕದ ಬಸವಯ್ಯ : ವೃತ್ತಿ ಹಾಗೂ ತತ್ವಮೀಮಾಂಸೆ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೪೨. ವೀರೇಶ ಬಡಿಗೇರ, **ಉತ್ತರ ಕರ್ನಾಟಕದ ಜಾನಪದ ಗೀತ ಮೇಳಗಳು : ಒಂದು ಸಾಂಸ್ಕೃತಿಕ ಅಧ್ಯಯನ,** ವಿಮೋಚನಾ ಪ್ರಕಾಶನ, ೧೯೯೯

೪೩. ವೀರೇಶ ಬಡಿಗೇರ, **ಭಕ್ತಿ, ಭಜನೆ ಮತ್ತು ಕೆಳವರ್ಗ,** ಮಯ ಪ್ರಕಾಶನ, ಕಮಲಾಪುರ, ೨೦೦೧

೪೪. ವೀರೇಶ ಬಡಿಗೇರ, **ಹಲಗೆ, ಬಳಪ,** ಮಯ ಪ್ರಕಾಶನ, ಕಮಲಾಪುರ, ೨೦೦೫

೪೫. ವೆಂಕಟೇಶ ಇಂದ್ವಾಡಿ, **ಮಂಟೇಸ್ವಾಮಿ ಪರಂಪರೆ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೪೬. ಶಾಂತರಸರು(ಸಂ), **ತತ್ವಪದಗಳು ಪ್ರಾತಿನಿಧಿಕ ಸಂಕಲನ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೦

೪೭. ಶಾಂತರಸರು, **ಕೂಡಲೂರು ಬಸವಲಿಂಗರ ಸ್ವರವಚನಗಳು,** ಶ್ರೀ ಜಗದ್ಗುರು ತೋಂಟದಾರ್ಯ ಮಠ, ಗದಗ, ೧೯೮೩

೪೮. ಶಾಂತರಸರು, **ಎಡೆದೊರೆ ನಾಡಿನ ಅನುಭಾವಿ ಕವಿಗಳು,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೩

೪೯. ಶಾಬಾದಿ ಮಠ ಪಿ.ಸಿ., **ಶ್ರೀ ಪುರಂದರ ದಾಸರ ಪದಗಳು,** ಶ್ರೀ ಶಾಬಾದಿಮಠ ಬುಕ್ ಪಬ್ಲಿಷರ್ಸ್, ಗದಗ, ೧೯೯೮

೫೦. ಶಿವಾನಂದ ಗುಬ್ಬಣ್ಣನವರು, **ಶಿಶುನಾಳ ಶರೀಫರ ಗೀತೆಗಳು,** ಅಕ್ಷಯ ಪ್ರಕಾಶನ, ೨೦೦೨

೫೧. ಶಿವಾನಂದ ವಿ., **ಎಸ್.ಎಸ್.ಭೂಸನೂರುಮಠರ ಗೌರವ ಅಭಿನಂಧನಾ ಗ್ರಂಥ,** ಜಗದ್ಗುರು ತೋಂಟದಾರ್ಯ ಮಠ, ಗದಗ, ೧೯೯೨

೫೨. ಶಿವಾನಂದ ವಿರಕ್ತಮಠ, **ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮

೫೩. ಸಿದ್ದಯ್ಯ ಪುರಾಣಿಕ, **ಶರಣ ಚರಿತಾಮೃತ,** ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ೧೯೯೨

೫೪. ಸ್ವಾಮಿ ಆದಿದೇವಾನಂದ, **ಪಾತಂಜಲಿ ಯೋಗ ದರ್ಶನ,** ರಾಮಕೃಷ್ಣಾಶ್ರಮ, ಬೆಂಗಳೂರು, ೧೯೯೮

೫೫. ಸ್ವಾಮಿ ಎನ್.ಜಿ., **ಕೂಡಲೂರು ಬಸವಲಿಂಗಪ್ಪ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೬

೫೬. ಹಂಪಣ್ಣತಾತ ಗಬ್ಬೂರು, ಕೈವಲ್ಯ ಕೈದೀವಿಗೆ, ಶ್ರೀ ಕ್ಷ.ತಪಸ್ವಿಯೋಗಿ ರಾಜೇಂದ್ರ ಶಿವಾಚಾರ್ಯ ಹಿರೇಮಠ, ಹುಟಗೆ, ಸೊಲ್ಲಾಪುರ

೫೭. ಹಳ್ಳಿಕೇರಿ ಎಫ್.ಟಿ., ಕೆರೆಯ ಪದ್ಮರಸ ಮತ್ತು ಆತನ ವಂಶಜರು : ಒಂದು ಅಧ್ಯಯನ, ವಿಕಾಸ ಪ್ರಕಾಶನ, ಕಮಲಾಪುರ, ೧೯೯೬

೫೮. ಹಿರೇಮಠ ಆರ್.ಸಿ., ಮಹಾದೇವಿಯಕ್ಕನ ವಚನಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೩

# ೫. ಛಾಯಾಚಿತ್ರಗಳು



ಗೂಗಲ್ಲು ಪರಪ್ಪಯ್ಯನವರ ಗದ್ದುಗೆ, ಗೂಗಲ್ಲು




ನೀರಲಕೇರಿ ಬಸವಲಿಂಗಪ್ಪ ತಾತನವರ ಮುಖ ಮಂಟಪದ ದ್ವಾರ, ಐದನಾಳ



ವಡಿಕೆ ತಾತಪಯ್ಯನವರ ಐಕ್ಯಸ್ಥಳದ
ಮೇಲ್ಮಂಟಪ, ವಡಿಕೆ



ವಡಿಕೆ ತಾತಪಯ್ಯನವರ ಕರ್ತೃ ಗದ್ದಿಗೆ
ಯೋಗಮಂಟಪ, ಐಕ್ಯಸ್ಥಳ, ನೆಲಮಾಳಿಗೆ



ಕಲ್ಲೂರು ಅಡಿವೆಪ್ಪತಾತ, ಮಲ್ದಕಲ್



ಜಹಿರಾಬಾದ್ ತಿಪ್ಪಣ್ಣ ತಾತನವರ ಅನುಭವ ಮಂಟಪ(ಷಟಸ್ಥಲ), ರಾಯಚೂರು



ಆದಿ ಅಮಾತೆಪ್ಪ, ದೇವದುರ್ಗ



ಬಾಲರಾಮಪ್ಪನವರ ಗದ್ದುಗೆ, ರಾಯಚೂರು



ಘನಮಠೇಶ್ವರ, ಸಂತೆಕೆಲ್ಲೂರ



ಹಂಪಣ್ಣನವರ
ಗದ್ದುಗೆ, ಗೊಬ್ಬೂರು



ಸಿಕಂದರಪಾಷಾ
ಗದ್ದುಗೆ(ದರ್ಗಾ),
ರಾಯಚೂರು



ಗೂಗಲ್ಲು ಪರಪ್ಪಯ್ಯ,
ಗೂಗಲ್ಲು